# ಕನ್ನಡ-ತೆಲುಗು ಸ್ತ್ರೀವಾದಿ ಸಾಹಿತ್ಯ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ


ಸಂಶೋಧಕರು

ನಾಗರಾಜ ಜಿ.ಪಿ.

ಮಾರ್ಗದರ್ಶಕರು

ಡಾ. ಎಂ. ಉಷಾ

ಪ್ರಾಧ್ಯಾಪಕರು

ಭಾಷಾಂತರ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ






ಭಾಷಾನಿಕಾಯ

ಭಾಷಾಂತರ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ, ೫೮೩ ೨೭೬

೨೦೧೮

# ಕನ್ನಡ–ತೆಲುಗು ಸ್ತ್ರೀವಾದಿ ಸಾಹಿತ್ಯ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು
**ನಾಗರಾಜ ಜಿ.ಪಿ.**

ಮಾರ್ಗದರ್ಶಕರು
**ಡಾ. ಎಂ. ಉಷಾ**
ಪ್ರಾಧ್ಯಾಪಕರು
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ



ಭಾಷಾನಿಕಾಯ
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೧೭

## ಮಾರ್ಗದರ್ಶಕರ ದೃಢೀಕರಣ ಪ್ರಮಾಣಪತ್ರ

**"ಕನ್ನಡ-ತೆಲುಗು ಸ್ತ್ರೀವಾದಿ ಸಾಹಿತ್ಯ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ನಾಗರಾಜ ಜಿ.ಪಿ.** ಅವರು ನನ್ನ ಮಾರ್ಗದರ್ಶನದಲ್ಲಿ ಪಿಎಚ್.ಡಿ. ಪದವಿಗಾಗಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಡಾ. ಎಂ. ಉಷಾ**
ಪ್ರಾಧ್ಯಾಪಕರು/ಮಾರ್ಗದರ್ಶಕರು
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 19.2.18

ಸ್ಥಳ : ವಿದ್ಯಾರಣ್ಯ

## ಸಂಶೋಧಕರ ಪ್ರಮಾಣಪತ್ರ

**"ಕನ್ನಡ–ತೆಲುಗು ಸ್ತ್ರೀವಾದಿ ಸಾಹಿತ್ಯ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಡಾ. ಎಂ. ಉಷಾ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಭಾಷಾ ನಿಕಾಯದ ಭಾಷಾಂತರ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣಿಕರಿಸುತ್ತೇನೆ.

**ನಾಗರಾಜ ಜಿ.ಪಿ**
ನಾಗರಾಜ ಜಿ
**ಸಂಶೋಧನಾ ವಿದ್ಯಾರ್ಥಿ**
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 19-02-2018.

ಸ್ಥಳ : ವಿದ್ಯಾರಣ್ಯ.

## ಪರಿವಿಡಿ

# "ಕನ್ನಡ-ತೆಲುಗು ಸ್ತ್ರೀವಾದಿ ಸಾಹಿತ್ಯ"

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವೈಧಾನಿಕತೆ, ವ್ಯಾಪ್ತಿ ಹಾಗೂ ಸ್ವರೂಪ

ಪ್ರಸ್ತಾವನೆ :

ಸಾಹಿತ್ಯವು ವಿವಿಧ ಸಿದ್ಧಾಂತಗಳು ಹಾಗೂ ಚಿಂತನಾ ಕ್ರಮಗಳನ್ನು ಅನುಸರಿಸಿ ರೂಪುಗೊಳ್ಳುವುದು ಒಂದು ಜಾಗತಿಕ ವಿದ್ಯಮಾನ. ಕನ್ನಡ-ತೆಲುಗು ಸಾಹಿತ್ಯವಾದರೂ ಆರಂಭದಿಂದಲೂ ವಿಭಿನ್ನ ಧರ್ಮ-ಸಿದ್ಧಾಂತಗಳ ಚೌಕಟ್ಟಿಗೆ ತನ್ನನ್ನು ಒಗ್ಗಿಸಿಕೊಂಡದ್ದೇ ಆಗಿದೆ. ಆಧುನಿಕ ಸಂದರ್ಭದಲ್ಲಾದರೂ ಧರ್ಮನಿರಪೇಕ್ಷತೆಯನ್ನು ಸಾಹಿತ್ಯದ ಮುಖ್ಯ ಗುಣವಾಗಿ ಪ್ರತಿಪಾದಿಸುತ್ತಲೇ ಪೌರ್ವಾತ್ಯವಾದ (ಓರಿಯಂಟಲಿಸಂ) ರಾಷ್ಟ್ರೀಯವಾದ, ಉದಾರವಾದ, ಮಾನವತಾವಾದ, ಮಾರ್ಕ್ಸವಾದ... ಹೀಗೆ ಹಲವು ಭಿನ್ನ ವಿಚಾರಧಾರೆಗಳಿಂದ ಪ್ರಭಾವಗೊಂಡಿದ್ದೆ ಆಗಿದೆ.

ಸಮಕಾಲೀನ ಸಂದರ್ಭದ ಕನ್ನಡ-ತೆಲುಗು ಭಾಷೆಗಳೆರಡರ ಸಾಹಿತ್ಯವನ್ನು ಪ್ರಭಾವಿಸುತ್ತಿರುವ ಸಿದ್ಧಾಂತಗಳಲ್ಲಿ "ಸ್ತ್ರೀವಾದ"ವು ಒಂದಾಗಿದೆ. 'ಫೆಮಿನಿಸಂ' ಎಂಬ ಹೆಸರಿನಲ್ಲಿ ಈ ವಾದವು ಪಾಶ್ಚಾತ್ಯ ಸಂದರ್ಭದಲ್ಲಿ ಮೊದಲಿಗೆ ಅಸ್ತಿತ್ವಕ್ಕೆ ಬಂದಿತು. ಹದಿನೇಳನೆಯ ಶತಮಾನದ ಯುರೋಪ್‌ನಲ್ಲಿ ನಡೆದ ಫ್ರೆಂಚ್ ಕ್ರಾಂತಿಯಲ್ಲಿ ಮಾನವ ಹಕ್ಕುಗಳ ಚಳುವಳಿಯ ಭಾಗವಾಗಿ ಈ ಪರಿಕಲ್ಪನೆ ಮೂಡಿತು. ಆಗಿನ ಸ್ತ್ರೀವಾದವು ಸ್ತ್ರೀಯರಿಗೆ ಸಮಾನ ಶಿಕ್ಷಣ, ಸಮಾನ ಕೆಲಸಕ್ಕೆ ಸಮಾನ ವೇತನ, ಮತದಾನದ ಹಕ್ಕು ಮುಂತಾದ ಪ್ರಜಾಪ್ರಭುತ್ವದ ಹಕ್ಕುಗಳಿಗಾಗಿ ದನಿ ಎತ್ತಿತ್ತು. ಆದರೆ ಸ್ತ್ರೀವಾದದ ಈ ಚಿಂತನೆಗಳು ಮತ್ತು ಹಕ್ಕೊತ್ತಾಯಗಳು ಕಾಲ ಕಳೆದಂತೆ ಬದಲಾಗುತ್ತಾ ಹೋದವು. ಈಗ ಇಪ್ಪತ್ತೊಂದನೆಯ ಶತಮಾನದಲ್ಲಿ ಸ್ತ್ರೀಯ ಮೇಲಿನ ಹಿಂಸೆಯ ವಿರುದ್ಧ ಹಾಗೂ ಅವಳ ತಾರತಮ್ಯದ ವಿರುದ್ಧ ಹೋರಾಟಗಳು ನಡೆಯುತ್ತಿವೆ. ಹೀಗೆಂದಾಗಲು ನಾವು ಸ್ತ್ರೀವಾದದ ಸ್ಥೂಲ ಸ್ವರೂಪದ ಬಗ್ಗೆ ಮಾತ್ರ ಮಾತನಾಡುತ್ತಿದ್ದೇವೆ.

ಸ್ತ್ರೀವಾದ ಎಂದರೇನು ಎಂಬುದಕ್ಕೆ ನಿರ್ದಿಷ್ಟವಾದ ವ್ಯಾಖ್ಯೆ ಎಂಬುದಿಲ್ಲ. ಅದು ಕಾಲದಿಂದ ಕಾಲಕ್ಕೆ ದೇಶದಿಂದ ದೇಶಕ್ಕೆ ಬೇರೆಯಾಗುತ್ತ ಹೋಗುತ್ತದೆ. ಹಾಗೆಯೇ ಒಂದು ದೇಶದ ಒಳಗೂ ಕೂಡ ಬೇರೆ ಬೇರೆ ಹೆಂಗಸರು ತಮ್ಮ ವರ್ಗ, ಸಂಸ್ಕೃತಿಯ ಹಿನ್ನೆಲೆಗೆ ಅನುಗುಣವಾಗಿ ಸ್ತ್ರೀವಾದವನ್ನು ಬೇರೆ ಬೇರೆ ರೀತಿಗಳಲ್ಲಿ ವ್ಯಾಖ್ಯಾನಿಸಿಕೊಂಡಿದ್ದಾರೆ. ಸ್ತ್ರೀವಾದವು ನಿರ್ದಿಷ್ಟ ಚಾರಿತ್ರಿಕ ಮತ್ತು ಸಾಂಸ್ಕೃತಿಕ ವಾಸ್ತವಗಳು ಹಾಗೂ ಪ್ರಜ್ಞೆಯ ಸ್ತರಗಳು ಮತ್ತು ಕ್ರಿಯೆಗಳನ್ನು ಆಧರಿಸಿ ನಿಂತಿರುವುದೇ ಈ ಭಿನ್ನ ವ್ಯಾಖ್ಯಾನಗಳಿಗೆ ಕಾರಣ.

ಭಾರತೀಯ ಸಂದರ್ಭದಲ್ಲಿ ಕೂಡ ಸ್ತ್ರೀವಾದವನ್ನು ವ್ಯಾಖ್ಯಾನಿಸಿಕೊಳ್ಳುವುದು ಭಿನ್ನತರದ್ದೇ ಆಗಿದೆ. ಕಾರಣ ಇಲ್ಲಿನ ಸಾಮಾಜಿಕ ಪರಿಸರ ಮತ್ತು ಇಲ್ಲಿನ ಸಮಸ್ಯೆಗಳು ಪಾಶ್ಚಾತ್ಯ ಸಾಮಾಜಿಕ ಪರಿಸರ ಸಮಸ್ಯೆಗಳಿಗಿಂತ ತೀರಾ ಭಿನ್ನವಾಗಿರುವುದು. ಇಲ್ಲಿನ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಸ್ತ್ರೀವಾದವನ್ನು ವ್ಯಾಖ್ಯಾನಿಸಿಕೊಳ್ಳುವುದಾದರೆ ಕುಟುಂಬದಲ್ಲಿ, ಕಾರ್ಯಕ್ಷೇತ್ರದಲ್ಲಿ, ಹಾಗೂ ಸಮಾಜದಲ್ಲಿ ನಡೆಯಬಹುದಾದ ಸ್ತ್ರೀ ಶೋಷಣೆಯ ಬಗೆಗಿನ ಅರಿವು ಹಾಗೂ ಈ ಸನ್ನಿವೇಶವನ್ನು ಬದಲಾಯಿಸಲು ಮಹಿಳೆಯರು ಮತ್ತು ಪುರುಷರು ಕೈಗೊಳ್ಳಬಹುದಾದ ಪ್ರಜ್ಞಾಪೂರ್ವಕ ಕ್ರಿಯೆ.

ಹೀಗೆ ಕಾಲದಿಂದ ಕಾಲಕ್ಕೆ ತನ್ನ ಪಾತಳಿಯನ್ನು ಬದಲಾಯಿಸುತ್ತಲೇ ಸಾಗಿರುವ ಸ್ತ್ರೀವಾದವು ೧೯೬೦ರ ಸುಮಾರಿನಲ್ಲಿ ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯ ದಾರಿಯೊಂದನ್ನು ಕ್ರಮಿಸಿತು. ಈ ಹಂತದಲ್ಲಿ ಸಾಹಿತ್ಯಿಕ ಪಠ್ಯಗಳಲ್ಲಿ ಸ್ತ್ರೀಪಾತ್ರಗಳನ್ನು ದುರ್ಬಲವಾಗಿ ಚಿತ್ರಿಸುವುದರ ವಿರುದ್ಧ ಹಾಗೂ ಮಹಿಳೆಯರಿಗೆ ಸಾಹಿತ್ಯಿಕ ಕ್ಷೇತ್ರದಲ್ಲಿ ದೊರಕದಿರುವ ಸಮಾನ ಅವಕಾಶ ಮತ್ತು ಅವರ ಸಾಹಿತ್ಯವನ್ನು ಮೌಲ್ಯಮಾಪನ ಮಾಡುವುದರಲ್ಲಿ ತೋರುವ ನಿರ್ಲಕ್ಷತೆಯ ಬಗ್ಗೆ ಆಕ್ಷೇಪಣೆ ಎತ್ತಲಾಯಿತು. ೧೯೬೦ರ ದಶಕದಲ್ಲಿ ಕಾಣಿಸಿಕೊಂಡ ಈ ಮೇಲಿನ ಸ್ತ್ರೀವಾದಿ ವಿಮರ್ಶೆಯ ಪ್ರಶ್ನೆಗಳು ೮೦–೯೦ರ ದಶಕದಲ್ಲಿ ಕನ್ನಡ ಮತ್ತು ತೆಲುಗು ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯ ಕೇಂದ್ರ ಆಸಕ್ತಿಯೂ ಆಯಿತು.

ಕನ್ನಡ– ತೆಲುಗನ್ನು ಒಳಗೊಂಡಂತೆ ಜಗತ್ತಿನ ಎಲ್ಲ ಸಾಹಿತ್ಯದಲ್ಲಿಯೂ ಶೃಂಗಾರ ರಸವನ್ನು ಸೃಷ್ಟಿಸುವುದಕ್ಕಾಗಿ ಸ್ತ್ರೀಯ ದೇಹ ಸಮೃದ್ಧಿಯನ್ನು ವರ್ಣಿಸುವುದನ್ನು, ಸುಖದ ಕಲ್ಪನೆಗಳಿಗೆ ಸ್ತ್ರೀಯನ್ನು ಅಲಂಕಾರದ ವಸ್ತುಗಳಾಗಿ ಪರಿಗಣಿಸುವುದನ್ನು ಕಾಣಬಹುದಾಗಿದೆ. ಇವುಗಳೆಲ್ಲವೂ ಒಂದಲ್ಲ ಒಂದು ರೀತಿಯಲ್ಲಿ ಹೆಣ್ಣನ್ನು ಭೋಗದ ವಸ್ತುವಾಗಿ, ಇಲ್ಲವೆ ಹೀನಜನ್ಮವಾಗಿ ಕೀಳರಿಮೆ ಮಾಡಲು ಪ್ರಯತ್ನಿಸಿದ ಪಿತೃಪ್ರಧಾನ ವ್ಯವಸ್ಥೆಯ ಧೋರಣೆಗಳನ್ನು ಪ್ರತಿಬಿಂಬಿಸುತ್ತವೆ. ಈ ಪ್ರತಿಕೂಲ ಸನ್ನಿವೇಶದ ನಡುವೆಯೂ ಕೆಲವು ಲೇಖಕಿಯರು ಸಾಹಿತ್ಯದ ಅಭಿವ್ಯಕ್ತಿಗೆ ತೊಡಗಿಸಿಕೊಂಡಿದ್ದಲ್ಲದೆ ಅದರಲ್ಲಿ ಹೆಣ್ಣಿನ ಘನತೆಯ ಪ್ರಶ್ನೆಯನ್ನು ಕೈಗೆತ್ತಿಕೊಂಡರು. ಉದಾಹರಣೆಗೆ: ಕನ್ನಡದಲ್ಲಿ ಆಧುನಿಕಪೂರ್ವ ಸಂದರ್ಭದ ಭಕ್ತಿ ಚಳವಳಿಯ ಭಾಗವಾಗಿ ಕಾಣಿಸಿಕೊಂಡ ಅಕ್ಕಮಹಾದೇವಿಯ ಕಾವ್ಯದ ಸ್ವರೂಪ ಅಚ್ಚರಿ ಎನಿಸುವ ಮಟ್ಟಿಗೆ ಸ್ತ್ರೀವಾದಿ ಎಚ್ಚರವನ್ನು ಹೊಂದಿದೆ. ಅಂತೆಯೇ ಸಾಂಪ್ರದಾಯಿಕ ನಿಲುವಿನ ಕವಯತ್ರಿಯಾದರೂ ಸಂಚಿಹೊನ್ನಮ್ಮ ಮಹಿಳೆಯ ಘನತೆ ಕುರಿತು ಕೆಲವು ಉದ್ಗಾರಗಳನ್ನು ತನ್ನ ಕಾವ್ಯದಲ್ಲಿ ಎತ್ತಿದ್ದಾಳೆ. ಅಂತೆಯೇ ತೆಲುಗು ಸಾಹಿತ್ಯದಲ್ಲಿಯೂ ಕೂಡ ೧೫ನೆಯ ಶತಮಾನದಲ್ಲಿ ತಾಳ್ಯಪಾಕ ತಿಮ್ಮಕ್ಕಳೊಂದಿಗೆ ಮಹಿಳಾ ಅಭಿವ್ಯಕ್ತಿಯು ಆರಂಭವಾಯಿತು. ಈಕೆ ಅಕ್ಕಮಹಾದೇವಿಯಯಷ್ಟು ಕ್ರಾಂತಿಕಾರಿಯಲ್ಲ.

ಇಷ್ಟಾಗಿಯೂ ಆಧುನಿಕತೆ ಬರುವವರೆಗೂ ಕನ್ನಡ–ತೆಲುಗು ಭಾಷೆಗಳಲ್ಲಿ ಮಹಿಳಾ ಸಾಹಿತ್ಯದ ರಚನೆ ಅತ್ಯಂತ ಕಡಿಮೆಯಂತಲೇ ಹೇಳಬಹುದು. ಆಧುನಿಕ ಶಿಕ್ಷಣ ಬಂದ ನಂತರದಲ್ಲಿ ಅನೇಕ

ಮಹಿಳೆಯರು ಸಾಹಿತ್ಯ ರಚನೆಯಲ್ಲಿ ತೊಡಗಿದ್ದಲ್ಲದೆ, ತಮ್ಮ ಸಾಹಿತ್ಯದಲ್ಲಿ ಮಹಿಳಾ ವಿಷಯಗಳನ್ನು ವಸ್ತುವಾಗಿಸಿಕೊಂಡು ಬರೆಯತೊಡಗಿದರು. ಇದೇ ಕಾಲಘಟ್ಟದಲ್ಲಿ ಜಗತ್ತಿನಾದ್ಯಂತ ಸ್ತ್ರೀವಾದಿ ಚಿಂತನೆಗಳು ಹಾಗೂ ಚಳವಳಿಗಳು ಅತ್ಯಂತ ಗಾಢವಾಗಿದ್ದ ಪರಿಣಾಮವಾಗಿ ಈ ಸ್ತ್ರೀವಾದಿ ಚಿಂತನೆ ಹಾಗೂ ಚಳವಳಿಗಳು ಭಾರತವನ್ನು ಒಳಗೊಂಡಂತೆ ಕರ್ನಾಟಕಾಂಧ್ರಕ್ಕೂ ೭೦ರ ದಶಕದಲ್ಲಿ ಪ್ರವೇಶ ಮಾಡಿದವು. ಈ ಎಲ್ಲಾ ಬೆಳವಣಿಗೆಗಳು ಆಧುನಿಕ ಕನ್ನಡ-ತೆಲುಗಿನ ಲೇಖಕಿಯರ ಮೇಲೂ ಅಪಾರವಾದ ಪ್ರಭಾವವನ್ನು ಬೀರಿದ ಕಾರಣ ೧೯೮೦-೯೦ರ ದಶಕದ ವೇಳೆಗೆ ಸ್ತ್ರೀವಾದಿ ಕಾವ್ಯವು ಕನ್ನಡ-ತೆಲುಗು ಎರಡೂ ಭಾಷೆಗಳಲ್ಲಿ ಸಮೃದ್ಧವಾಗಿ ಬೆಳೆಯಿತು

ಹೀಗೆ ಬೆಳೆದ ಸ್ತ್ರೀವಾದಿ ಕಾವ್ಯ ಆರಂಭಿಕ ಕಾಲಘಟ್ಟದಲ್ಲಿ ಮುಖ್ಯವಾಗಿ ಮನೆಯ ಹೊರಗಿನ ಪ್ರಪಂಚದಲ್ಲಿನ ತಾರತಮ್ಯವನ್ನು ಹೋಗಲಾಡಿಸಲು ಪ್ರಯತ್ನಿಸಿದರೆ ಇಂದಿನ ಸ್ತ್ರೀವಾದಿ ಕಾವ್ಯದ ಸ್ವರೂಪ ಬದಲಾಗಿದ್ದೂ, ಇದು ಮನೆಯ ಒಳಗೆ, ಕುಟುಂಬಗಳಲ್ಲಿ ನಡೆಯುವ ಸ್ತ್ರೀಯ ಶೋಷಣೆಯ ವಿರುದ್ಧವೂ ದನಿ ಎತ್ತಿದೆ. ಅಲ್ಲದೆ ಈ ಸ್ತ್ರೀವಾದಿ ಲೇಖಕಿಯರು ಸ್ತ್ರೀ ಸಮಾನತೆಗಾಗಿ ಮಾತ್ರವಲ್ಲದೆ ಮನೆಯೊಳಗಿನ ಮತ್ತು ಮನೆಯ ಹೊರಗಿನ ಜೀವನದಲ್ಲಿ ತೆಗೆದುಕೊಳ್ಳಬಹುದಾದ ನಿರ್ಧಾರಗಳಲ್ಲಿನ ಸ್ತ್ರೀಯ ಆಯ್ಕೆಯ ಸ್ವಾತಂತ್ರ್ಯ ಪ್ರಶ್ನೆಯನ್ನು ಎತ್ತುತ್ತಿದ್ದಾರೆ. ಒಟ್ಟಿನಲ್ಲಿ ಪುರುಷ ಪ್ರಧಾನ ಸಮಾಜದಲ್ಲಿ ಹಾಗೂ ಸಮಾಜದ ಇತರ ವಲಯಗಳಲ್ಲಿ ಸ್ತ್ರೀಯರ ಮೇಲೆ ನಡೆಯಬಹುದಾದ ಎಲ್ಲ ಬಗೆಯ ಸ್ತ್ರೀ ಶೋಷಣೆಯ ಮುಕ್ತಿಗಾಗಿ ಇಂದಿನ ಸ್ತ್ರೀವಾದಿ ಲೇಖಕಿಯರು ಹೋರಾಡುತ್ತಿದ್ದಾರೆ.

ಗಂಡಸರೊಂದಿಗೆ ಸಮಾನತೆ ಎಂಬುದೊಂದೇ ಇಂದಿನ ಸ್ತ್ರೀವಾದಿ ಲೇಖಕಿಯರ ಗುರಿಯಲ್ಲ. ಗಂಡು-ಹೆಣ್ಣು ಇಬ್ಬರಿಗೂ ಸಲ್ಲುವ ನ್ಯಾಯಬದ್ಧವಾದ ಹಾಗೂ ಶೋಷಣಾರಹಿತ ಸಮಾಜದ ನಿರ್ಮಿತಿಯ ಉದ್ದೇಶವನ್ನು ಹೊಂದಿದ್ದಾರೆ. ಅಂದರೆ ಮೂಲದಲ್ಲಿ ಸ್ತ್ರೀವಾದವು ಗಂಡು-ಹೆಣ್ಣು ಇಬ್ಬರನ್ನು ಲಿಂಗಭೇದದ ವಿರುದ್ಧ ಜಾಗೃತಗೊಳಿಸುವ ಮತ್ತು ಸಮಾಜದಲ್ಲಿ ಸ್ತ್ರೀ ಸಂವೇದನೆಯನ್ನು ಮೂಡಿಸುವ ಜವಾಬ್ದಾರಿಯನ್ನು ಇಂದಿನ ಕನ್ನಡ-ತೆಲುಗು ಸ್ತ್ರೀವಾದಿ ಸಾಹಿತ್ಯ ಹೊಂದಿದೆ.

ಕನ್ನಡ-ತೆಲುಗು ಭಾಷೆಗಳಲ್ಲಿ ರಚನೆಯಾದ ಸ್ತ್ರೀವಾದಿ ಕಾವ್ಯವನ್ನು ಕುರಿತು ತೌಲನಿಕ ಅಧ್ಯಯನ ಕನ್ನಡದ ಸಂದರ್ಭದಲ್ಲಿ ಹೆಚ್ಚಿನದಾಗಿ ನಡೆದಂತೆ ಕಂಡುಬಂದಿಲ್ಲ. ಹಾಗಾಗಿ ಸಮಕಾಲೀನ ಸಂದರ್ಭದ ಈ ಸಾಹಿತ್ಯ ಪರಂಪರೆಗಳ ಮುಖ್ಯಧಾರೆಯಾದ ಸ್ತ್ರೀವಾದಿ ಕಾವ್ಯವನ್ನು ಹೋಲಿಸಿ ಅಧ್ಯಯನ ಮಾಡುವುದು ಉಪಯುಕ್ತವಾದುದು.

ಕನ್ನಡ-ತೆಲುಗು ಭಾಷೆ ಮತ್ತು ಸಂಸ್ಕೃತಿಯು ಒಂದೇ ಮೂಲದಿಂದ(ದ್ರಾವಿಡ ಮೂಲ) ಹುಟ್ಟಿದಂತವುಗಳಾಗಿದ್ದು ಸಾಮಾಜಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ, ಸಾಂಸ್ಕೃತಿವಾಗಿ ಒಂದನ್ನೊಂದು ಸಾಕಷ್ಟು ಪ್ರಭಾವಿಸಿವೆ ಕೂಡ. ಹಾಗೆಯೆ ಎರಡೂ ಭಾಷೆಗಳಲ್ಲಿನ ಸ್ತ್ರೀವಾದಿ ಲೇಖಕಿಯರು ತಮ್ಮ ತಮ್ಮ ಭಾಷೆಗಳಲ್ಲಿ ಬರೆದಿರುವ ಸಾಹಿತ್ಯವು ಕೂಡ ಪರಸ್ಪರ ಸಾಮ್ಯತೆಯನ್ನು

ಹೊಂದಿರುವ ಸಾಧ್ಯತೆಗಳಿವೆ ಎನ್ನುವ ಪ್ರಮೇಯದೊಂದಿಗೆ "ಕನ್ನಡ-ತೆಲುಗು ಸ್ತ್ರೀವಾದಿ ಸಾಹಿತ್ಯ" ಎಂಬ ವಿಷಯವನ್ನು ಅಧ್ಯಯನಕ್ಕೆ ಆಯ್ಕೆಮಾಡಿಕೊಳ್ಳಲಾಗಿದೆ.

**ಅಧ್ಯಯನದ ಉದ್ದೇಶ :**

ಪ್ರಸ್ತಾವನೆಯಲ್ಲಿ ಈಗಾಗಲೆ ಹೇಳಿರುವಂತೆ ಸ್ತ್ರೀವಾದಕ್ಕೆ ಹಲವು ಮಗ್ಗುಲುಗಳಿವೆ. ಕಾಲದಿಂದ ಕಾಲಕ್ಕೆ ಸ್ತ್ರೀವಾದದ ಚಿಂತನೆಗಳು ಬದಲಾಗಿವೆ. ಪ್ರದೇಶದಿಂದ ಪ್ರದೇಶಕ್ಕೆ ಸ್ತ್ರೀವಾದದ ಆಸಕ್ತಿಗಳು ಮತ್ತು ಅಗತ್ಯಗಳು ಭಿನ್ನವಾಗಿವೆ. ಅಂತೆಯೇ ಕನ್ನಡ-ತೆಲುಗು ಸಾಂಸ್ಕೃತಿಕ ಪರಿಸರದಲ್ಲಿ ಸ್ತ್ರೀವಾದದ ಅಗತ್ಯಗಳು ಭಿನ್ನವಾಗಿದ್ದಿರಬಹುದಾದ ಸಾಧ್ಯತೆಗಳಿವೆ. ಈ ಹಿನ್ನೆಲೆಯಲ್ಲಿ ಕನ್ನಡ-ತೆಲುಗು ಸ್ತ್ರೀವಾದಿ ಕಾವ್ಯದ ಹಿಂದೆ ಇರುವ ಸ್ತ್ರೀವಾದಿ ಚಿಂತನೆ, ಸ್ತ್ರೀವಾದದ ಆಸಕ್ತಿ ಮತ್ತು ಅಗತ್ಯಗಳ ಸ್ವರೂಪವೇನು ಎಂಬುದನ್ನು ಗುರುತಿಸಿಕೊಳ್ಳುವುದು ಈ ಅಧ್ಯಯನದ ಉದ್ದೇಶ. ಈ ಉದ್ದೇಶಗಳ ಈಡೇರಿಕೆಗಾಗಿ ಈ ಕೆಳಗಿನ ಸಂಗತಿಗಳನ್ನು ಅಧ್ಯಯನವು ವಿಶ್ಲೇಷಣೆಗೆ ಒಡ್ಡುವುದು.

- ಕನ್ನಡ-ತೆಲುಗು ಭಾಷೆಗಳೆರಡರಲ್ಲಿ ಸ್ತ್ರೀವಾದಿ ಚಿಂತನೆಗಳ ಹುಟ್ಟು, ಬೆಳವಣಿಗೆಗೆ ಕಾರಣವಾದ ಪಾಶ್ಚಾತ್ಯ ಹಾಗೂ ಭಾರತೀಯ ಪರಿಸರಗಳ ಪ್ರೇರಣೆ, ಪ್ರಭಾವವನ್ನು ಗುರುತಿಸುವುದು.
- ಕನ್ನಡ-ತೆಲುಗು ಭಾಷೆಗಳಲ್ಲಿ ಈವರೆಗೂ ನಡೆದಿರುವ ಸ್ತ್ರೀವಾದಿ ಅಧ್ಯಯನಗಳ ಸ್ವರೂಪ ಹಾಗೂ ಈ ಅಧ್ಯಯನಗಳಲ್ಲಿನ ಸಾಮ್ಯ, ವೈಶಮ್ಯಗಳನ್ನು ಅಧ್ಯಯನ ಮಾಡುವುದು.
- ಪಿತೃಪ್ರಧಾನ ವ್ಯವಸ್ಥೆ ಮತ್ತು ಅದು ರೂಪಿಸಿದ ವಿಷಮ ಪರಿಸರವನ್ನು ಕನ್ನಡ-ತೆಲುಗು ಸ್ತ್ರೀವಾದಿ ಕವಯತ್ರಿಯರು ತಮ್ಮ ಕಾವ್ಯದಲ್ಲಿ ಹಿಡಿದಿಟ್ಟ ಕ್ರಮವನ್ನು ವಿಶ್ಲೇಷಿಸುವುದು ಹಾಗೂ ವಿವಿಧ ಜಾತಿ, ವರ್ಗ, ಧರ್ಮಗಳಲ್ಲಿನ ಪಿತೃಪ್ರಧಾನ ವ್ಯವಸ್ಥೆಯ ಸ್ವರೂಪವನ್ನು ಎರಡು ಭಾಷೆಯ ಲೇಖಕಿಯರು ಹೇಗೆ ಗುರುತಿಸುತ್ತಾರೆ ಎಂಬುದನ್ನು ತಿಳಿಯುವುದು.
- ಲಿಂಗ ಅಸಮಾನತೆಯ ಮೌಲ್ಯ ವ್ಯವಸ್ಥೆಗೆ ಪ್ರತಿಯಾಗಿ ಕನ್ನಡ-ತೆಲುಗು ಸ್ತ್ರೀವಾದಿ ಕವಯತ್ರಿಯರು ಎತ್ತಿಹಿಡಿಯುವ ಲಿಂಗ ಸಮಾನತೆಯ ಮೌಲ್ಯದ ಸ್ವರೂಪವನ್ನು ಗುರುತಿಸುವುದು.
- ಕನ್ನಡ-ತೆಲುಗು ಸ್ತ್ರೀವಾದಿ ಕಾವ್ಯದಲ್ಲಿನ ಪುರಾಣ ಭಂಜಕತೆಯ ಸ್ವರೂಪದ ಹಿಂದೆ ಇರುವ ತಾತ್ವಿಕ ನಿಲುವುಗಳೇನು ಎಂಬುದನ್ನು ತಿಳಿಯುವುದು.
- ಕನ್ನಡ- ತೆಲುಗು ಸ್ತ್ರೀವಾದಿ ಕವಯತ್ರಿಯರು ಲಿಂಗ ಅಸಮಾನತೆಯೊಂದಿಗೆ ಎತ್ತುವ ಇತರೆ ಇತರೆ ಸಾಮಾಜಿಕ ಪ್ರಶ್ನೆಗಳನ್ನು ಕುರಿತು ಗಮನಹರಿಸುತ್ತಾರೆ. ಈ ಬಗ್ಗೆ ಮಾತನಾಡುವಾಗ ಇವರ ಚಿಂತನೆಗಳ ಹಿಂದೆ ಇರುವ ಪ್ರಧಾನ ಆಶಯಗಳೇನು ಎಂಬುವುದನ್ನು ತಿಳಿಯುವುದು.
- ಇನ್ನೂ ಹಲವು ಸಾಮಾಜಿಕ ಅಸಮಾನತೆಗಳ ಬಗ್ಗೆ ಕೂಡ ದನಿ ಎತ್ತಿದ್ದು, ಅವುಗಳನ್ನು ಕೂಡ ವಿಶ್ಲೇಷಿಸುವ ಮೂಲಕ ಸ್ತ್ರೀವಾದಿ ಚಿಂತನೆಯ ವ್ಯಾಪ್ತಿಯನ್ನು ಅವರು ವಿಸ್ತರಿಸುವ ಬಗೆಯನ್ನು ಅರಿಯುವುದು.

**ಅಧ್ಯಯನದ ವೈಧಾನಿಕತೆ :**

ಭಾಷಾಂತರ ಮತ್ತು ತೌಲನಿಕ ಅಧ್ಯಯನಗಳ ನಡುವಿನ ಸಂಬಂಧ ವಿಶಿಷ್ಟವಾದದು. ತೌಲನಿಕ ಅಧ್ಯಯನಕ್ಕೆ ಬೇಕಾದ ಆಕರ ಪಠ್ಯಗಳನು ಒದಗಿಸುವುದು ಭಾಷಂತರವೆ. ಅಂತೆಯೇ ಒಂದು ಸಾಹಿತ್ಯ ಪರಿಸರದ ಭಾಷಾಂತರಗಳ ಅಂತಿಮ ಗುರಿಯು ತೌಲನಿಕ ಅಧ್ಯಯನವೇ ಆಗಿದೆ. ಈ ಅರ್ಥದಲ್ಲಿ ಇವೆರಡೂ ಪರಸ್ಪರ ಪೂರಕವಾದ ಅಧ್ಯಯನ ಶಿಸ್ತುಗಳು ಮತ್ತು ವಿಧಾನಗಳು. ಅಂತೆಯೇ ಈ ಅಧ್ಯಯನದಲ್ಲಿ ತೌಲನಿಕ ಅಧ್ಯಯನಕ್ಕೆ ಅಗತ್ಯವಾದ ತೆಲಗು ಪಠ್ಯಗಳನ್ನು ಮೊದಲಿಗೆ ಭಾಷಾಂತರ ಮಾಡಿಕೊಡಲಾಗಿದೆ. ಈ ಭಾಷಾಂತರವನ್ನು ಪಠ್ಯದಲ್ಲಿ ಬಳಸಿಕೊಂಡು ಅದರ ಮೂಲವನ್ನು ಅನುಬಂಧದಲ್ಲಿ ನೀಡಲಾಗಿದೆ. ಹೀಗೆ ತುಲನಯೋಗ್ಯವಾದ ಪಠ್ಯಗಳ ನಿರ್ಮಾಣದ ನಂತರ ತೌಲನಿಕ ಅಧ್ಯಯನದ ಮೂಲಕ ತನ್ನ ಫಲಿತಗಳನ್ನು ಕಾಣಲಾಗಿದೆ. ಭಾಷಾಂತರ ಅಧ್ಯಯನದ ಶಿಸ್ತಿನಡಿಯಲ್ಲಿ ಕೈಗೊಳ್ಳಲಾಗುವ ಈ ಅಧ್ಯಯನಕ್ಕೆ ಭಾಷಾಂತರದ ಪರಿಕಲ್ಪನೆಗಳನ್ನು ಮತ್ತು ತೌಲನಿಕ ಅಧ್ಯಯನದ ವೈಧಾನಿಕತೆಯನ್ನು ಬಳಸಿಕೊಳ್ಳಲಾಗಿದೆ.

ತೌಲನಿಕ ಅಧ್ಯಯನವು ಕೇವಲ ಪರಸ್ಪರ ಸಮಾನ ಅಂಶಗಳ ಪಟ್ಟಿಯಲ್ಲ ಸಮಾನ ವಸ್ತುಗಳ, ಆಶಯ, ಅಭಿವ್ಯಕ್ತಿಗಳ ಆಳದಲ್ಲಿರುವ ಭಿನ್ನತೆಗಳನ್ನು ಹಾಗೂ ಸಮಾನತೆಗಳನ್ನು ಗುರುತಿಸುವುದು ಮತ್ತು ಆ ನಂತರ ಇಂತಹ ಸಮಾನ ಭಿನ್ನ ಅಂಶಗಳನ್ನು ಸಾಂಸ್ಕೃತಿಕ, ವೈಚಾರಿಕ ನೆಲೆಯಲ್ಲಿ ಅರ್ಥೈಸುವುದಾಗಿರುತ್ತದೆ.

**ಆಕರಗಳು :**

**ಕನ್ನಡ ಸ್ತ್ರೀವಾದಿ ಲೇಖಕಿಯರು :** ಈ ಕಾಲಘಟ್ಟದಲ್ಲಿ ಕಾವ್ಯ ರಚನೆಗೆ ತೊಡಗಿಕೊಂಡ ಲೇಖಕಿಯರು ಹೇರಳವಾಗಿದ್ದು, ಅವರಲ್ಲಿ ಆಯಾ ಸ್ತ್ರೀವಾದಿ ವಿಮರ್ಶಾ ಪರಂಪರೆ ಈಗಾಗಲೇ ಉರುತಿಸಿದ ಪ್ರಾತಿನಿಧಿಕ ಲೇಖಕಿಯರನು ಇಲ್ಲಿ ತೌಲನಿಕ ಚರ್ಚೆಗೆ ಒಳಪಡಿಸಲಾಗಿದೆ. ವಿಜಯಾ ದಬ್ಬೆ, ಬಿ.ಟಿ. ಲಲಿತಾ ನಾಯಕ್, ಹೆಚ್. ಎಲ್. ಪುಷ್ಪ, ಪ್ರತಿಭಾನಂದ ಕುಮಾರ್, ಶಶಿಕಲಾ ವೀರಯ್ಯಾ ಸ್ವಾಮಿ, ವಿಜಯಶ್ರೀ ಸಬರದ, ವೈದೇಹಿ, ವಿಜಯಾ ಸುಬ್ಬರಾಜ್, ಕಮಲಾ ಹೆಮ್ಮಿಗೆ, ಸುಕನ್ಯಾ ಮಾರುತಿ, ಮಾಲತಿ ಪಟ್ಟಣಶೆಟ್ಟಿ, ಕೆ. ಷರೀಫಾ, ಸವಿತಾ ನಾಗಭೂಷಣ, ಬಾನು ಮುಷ್ತಾಕ, ಹೇಮಾ ಪಟ್ಟಣಶೆಟ್ಟಿ, ವಿನಯಾ, ಮಮತಾ.ಜಿ.ಸಾಗರ ಮುಂತಾದವರು.

**ತೆಲುಗು ಸ್ತ್ರೀವಾದಿ ಲೇಖಕಿಯರು :** ಸಾವಿತ್ರಿ, ಜಯಪ್ರಭಾ, ವಿಮಲ, ಓಲ್ಗಾ, ಕೊಂಡೆಪೋಡಿ ನಿರ್ಮಲ, ಮಂದರಪು ಹೈಮಾವತಿ, ಶಿಲಾಲೊಲಿತ, ಘಂಟಶಾಲ ನಿರ್ಮಲ, ಪಾಟಿಬಂಡ್ಲ ರಜನಿ, ಮೆಹಜಬೀನ್, ಷಾಜಹಾನಾ, ಚಲ್ಲಪಲ್ಲಿ ಸ್ವರೂಪರಾಣಿ, ಕೊಲಕಲೂರಿ ಸ್ವರೂಪರಾಣಿ, ಮದ್ದೂರಿ ವಿಜಯಶ್ರೀ, ಶಶಿ ನಿರ್ಮಲ, ದರಿಶ್ ಶಶಿ ನಿರ್ಮಲ, ಶಿಲಾಸುಭದ್ರಾದೇವಿ, ತುರ್ಲಪಾಟಿ ರಾಜೇಶ್ವರಿ, ತುರ್ಲಪಾಟಿ ಲಕ್ಷ್ಮಿ ಇನ್ನು ಮುಂತಾದ ಕನ್ನಡ–ತೆಲುಗು ಸ್ತ್ರೀವಾದಿ ಕವಯತ್ರಿಯರ ಕಾವ್ಯವನ್ನು ಮಾತ್ರ ಈ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

**ಅಧ್ಯಯನದ ವ್ಯಾಪ್ತಿ :**

ಆಧುನಿಕ ಶಿಕ್ಷಣದೊಂದಿಗೆ ಮಹಿಳಾ ಕಾವ್ಯದ ದನಿ ಕೇಳಿಬರುವುದಾದರೂ ಪ್ರಸ್ತುತ ಅಧ್ಯಯನವು ಭಾರತೀಯ ಸ್ತ್ರೀವಾದದ ಸಂದರ್ಭದಲ್ಲಿ ಒಂದು ಮುಖ್ಯ ಮೈಲಿಗಲ್ಲಾಗಿರುವ ೧೯೭೫ರ ಅಂತಾರಾಷ್ಟ್ರೀಯ ಮಹಿಳಾ ವರ್ಷವನ್ನು ಆರಂಭ ಬಿಂದುವಾಗಿಟ್ಟುಕೊಂಡು, ಆ ನಂತರದಲ್ಲಿ ರಚನೆಯಾದ ಕನ್ನಡ-ತೆಲುಗು ಸ್ತ್ರೀವಾದಿ ಕಾವ್ಯವನ್ನು ಈ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಆಧುನಿಕ ಪೂರ್ವದಲ್ಲಿ ಸ್ತ್ರೀಯರು ಕಾವ್ಯ ಪ್ರಕಾರವನ್ನು ಕೈ ಆಡಿಸಿದರಾದರೂ, ಆಧುನಿಕ ಶಿಕ್ಷಣದ ಆರಂಭದೊಂದಿಗೆ ಗದ್ಯ ಪ್ರಕಾರಗಳಾದ ಕಥೆ, ಕಾದಂಬರಿಗಳಿಗೆ ತಮ್ಮನ್ನು ವಿಶೇಷವಾಗಿ ಒಗ್ಗಿಸಿಕೊಂಡರು. ಆದರೆ ೧೯೭೫ರ ದಶಕವು ಅವರನ್ನು ಮತ್ತೆ ಕಾವ್ಯದತ್ತ ತಿರುಗುವಂತೆ ಮಾಡಿತು, ಈ ದಶಕದ ಮಹಿಳೆಯರ ಕಥೆ-ಕಾವ್ಯಗಳ ರಚನೆ ಮುಂದುವರೆಯಿತಾದರೂ, ಕಾವ್ಯದ ಕುರಿತ ಕುತೂಹಲ, ಪರಿಶ್ರಮ ಎದ್ದುಕಾಣುವಷ್ಟು ಹೆಚ್ಚಾಯಿತು. ಚರಿತ್ರೆಯಲ್ಲಿ ಎಂದೂ ಕಂಡಿರದ ಪ್ರಮಾಣದಲ್ಲಿ ಲೇಖಕಿಯರು ಕಾವ್ಯ ರಚನೆಗೆ ಕೈಹಾಕಿದ್ದು ಮಾತ್ರವಲ್ಲದೆ ಅದನ್ನು ಅಭೂತಪೂರ್ವವಾದ ಯಶಸ್ಸನ್ನು ಸಾಧಿಸಿದರು. ಈ ಹಿನ್ನೆಲೆಯಲ್ಲಿ ೧೯೭೫ರ ದಶಕದ ನಂತರದ ಕಾಲಘಟ್ಟಕ್ಕೆ ವಿಶಿಷ್ಟವಾಗಿ ಕಂಡುಬರುವ 'ಕಾವ್ಯ' ಪ್ರಕಾರವನ್ನು ಅನುಲಕ್ಷಿಸಿ ಅಧ್ಯಯನ ಮಾಡಲಾಗಿದೆ.

'ಸಾಹಿತ್ಯ' ಮತ್ತು 'ಕಾವ್ಯ' ಎಂಬ ಪರಿಭಾಷೆಗಳು ಭಾರತೀಯ ಮೀಮಾಂಸೆಯಲ್ಲಿ ಪರ್ಯಾಯ ಪದಗಳಾಗಿ ಬಳಕೆಗೊಂಡಿವೆ. ಆಧುನಿಕಪೂರ್ವ ಸಂದರ್ಭವು 'ಕಾವ್ಯ' ಎನ್ನುವ ಪರಿಭಾಷೆಯನ್ನು ಎಲ್ಲ ಪ್ರಕಾರಗಳಿಗೂ ಬಳಸುವುದನ್ನು ನೋಡಬಹುದು. ಆದರೆ ಆಧುನಿಕ ಸಂದರ್ಭದಲ್ಲಿ ಕಾವ್ಯವನ್ನು ಸಾಹಿತ್ಯದ ಒಂದು ಒಳ ಪ್ರಕಾರವಾಗಿ ಸಂಕುಚಿತಗೊಂಡಿರುವುದು ಗಮನಾರ್ಹ.

೧೯೭೫ರವರೆಗಿನ ಕನ್ನಡ-ತೆಲುಗು ಮಹಿಳಾ ಸಾಹಿತ್ಯದಲ್ಲಿ ಲೇಖಕಿಯರು ಕಥೆ, ಕಾದಂಬರಿಗಳ ರಚನೆಗೆ ಹೆಸರಾಗಿದ್ದುದನ್ನು ನೋಡುತ್ತೇವೆ. ಆದರೆ ೧೯೭೫ರ ನಂತರದ ಕನ್ನಡ-ತೆಲುಗು ಸ್ತ್ರೀವಾದಿ ಲೇಖಕಿಯರು ತಮ್ಮ ಅಭಿವ್ಯಕ್ತಿಗೆ ಕಾವ್ಯವನ್ನೇ ಆಯ್ಕೆ ಮಾಡಿಕೊಳ್ಳುತ್ತಾರೆ.

ಕೆ.ವಿ. ನಾರಾಯಣ ಅವರು ಆಧುನಿಕ ಕನ್ನಡ ಕಾವ್ಯಕ್ಕೆ ಮಹಿಳೆಯರ ಪ್ರವೇಶ ಹೆಚ್ಚಿರುವುದನ್ನು ಈ ರೀತಿಯಾಗಿ ವಿಶ್ಲೇಷಿಸಿದ್ದಾರೆ. ಪ್ರಚಲಿತ ಕೌಟುಂಬಿಕ ಚೌಕಟ್ಟನ್ನು ಒಪ್ಪಿ ಬರೆದವರು. ಕಥೆ, ಕಾದಂಬರಿಗಳನ್ನು ರಚಿಸುತ್ತಿದ್ದಾರೆ. ವೈಯಕ್ತಿಕತೆಯ ಅರಿವು ತೀವ್ರವಾದವರು ಕಾವ್ಯ ರಚಿಸುತ್ತಿದ್ದಾರೆ. (ಶ್ರೀಮತಿ ಎಚ್.ಎಸ್., ಕ.ಮ.ಸಾ.ಚ., ಪು-೩೮೪)

ಇದೇ ಮಾತನ್ನು ಸುಮಿತ್ರಾಭಾಯಿ ಅವರು ವಿಸ್ತರಿಸುತ್ತಾ ನವ್ಯ ಚಳವಳಿಯ ಪ್ರಭಾವದಿಂದ ಸಾಹಿತ್ಯದ ಎಲ್ಲ ಮಗ್ಗಲುಗಳಲ್ಲಿ ಸ್ವಂತಿಕೆಯ ಅರಿವು ಪ್ರಚೋದಿತವಾಯಿತು ಎನ್ನುವುದು ನಿಜ. ಆದರೆ ೭೦ರ ದಶಕದ ನಂತರ ರಾಜಕೀಯ, ಆರ್ಥಿಕ, ಸಾಮಾಜಿಕ ಒತ್ತಡಗಳು ಸಮಾಜದ ಹತ್ತಿಕ್ಕಲ್ಪಟ್ಟ ಜನತೆ ಎಚ್ಚರಗೊಳ್ಳುವಂತಹ ವಾತಾವರಣ ನಿರ್ಮಿಸಿದವು ಎಂಬುದನ್ನು ಗಮನಿಸಿದಲ್ಲಿ

ಕಾವ್ಯದತ್ತ ಮಹಿಳೆಯರಲ್ಲಿ ಹೆಚ್ಚು ಆಸಕ್ತಿ ಹುಟ್ಟಿರುವುದಕ್ಕೂ ಸಾಮಾಜಿಕವಾಗಿ ತಮ್ಮ ಅಸ್ತಿತ್ವದ ಸಮರ್ಥನೆ ಅವಶ್ಯಕತೆಯನ್ನು ಅವರು ಗ್ರಹಿಸುವುದಕ್ಕೂ ಸಂಬಂಧವಿದೆ. ಈ ಅಸ್ತಿತ್ವ ಸಮರ್ಥನೆಯ ಯತ್ನ ಕಾವ್ಯ ಪ್ರಕಾರದಲ್ಲಿ ತುಡಿತವಾಗಿ ಕಾಣಿಸಿಕೊಂಡಿದೆ (ಸುಮಿತ್ರಾಬಾಯಿ ಬಿ.ಎನ್., ವಿಚಯ–ಪುಟ–೬) ಎಂದಿದ್ದಾರೆ.

ಇದೆಲ್ಲಕ್ಕಿಂತ ಮುಖ್ಯವಾಗಿ ಕನ್ನಡ–ತೆಲುಗು ಪುರುಷ ವಿಮರ್ಶೆಯು ನೀಡಿದ 'ಅನುಭವ ಪ್ರಾಮಾಣಿಕತೆ' ಎಂಬ ಮಾನದಂಡವು ಲೇಖಕಿಯರಿಗೆ ಕಥೆ, ಕಾದಂಬರಿಗಳಂತಹ ಪ್ರಕಾರಗಳಲ್ಲಿ ತೊಡಗಲು ಬಹುದೊಡ್ಡ ಅಡ್ಡಿಯಾಗಿತ್ತು. ಯಾಕೆಂದರೆ ಈ ಪ್ರಕಾರಗಳ ಹರವು ದೊಡ್ಡದು. ಎಲ್ಲವನ್ನು ಬಿಡಿಸಿಯೇ ಹೇಳಬೇಕಾಗುತ್ತದೆ. ಆದರೆ ಬರೆದಿದ್ದೆಲ್ಲವನ್ನು ವೈಯಕ್ತಿಕ ಅನುಭವಗಳಿಗೆ ಆರೋಪಿಸಿ ಬಿಡುವ ಆತಂಕ ಲೇಖಕಿಯರನ್ನು ಕಾಡುತ್ತಿತ್ತು. ಸಾಮಾಜಿಕವಾಗಿ ಉದ್ಭವಿಸುವ ತೊಂದರೆಗಳಿಗೆ ಹೆದರಿದ ಲೇಖಕಿಯರು ತಮಗೆ ಒಗ್ಗಿದ ಕಥನ ಕ್ರಮಗಳಿಗೆ ವಿದಾಯ ಹೇಳಿದರು. ಹೀಗಾಗಿ ಒಂದು ಹಂತದಲ್ಲಿ ಲೇಖಕಿಯರ ಸಾಹಿತ್ಯ ರಚನೆಯೇ ಕುಂಠಿತವಾಯಿತು. ಇಂತ ಸಂದರ್ಭದಲ್ಲಿ ಎಲ್ಲವನ್ನು ಬಿಡಿಸಿ ಹೇಳಬೇಕಾದ ಕಥೆ, ಕಾದಂಬರಿಗಳಿಗಿಂತ ಯಾವುದನ್ನು ನೇರವಾಗಿ ಹೇಳಬೇಕಾಗಿರದ ಸಂಕೇತ, ರೂಪಕಗಳ ಬಳಕೆಗೆ ಧಾರಾಳ ಅವಕಾಶವಿದ್ದ ಕವಿತೆ ಒಂದು ಸುರಕ್ಷಿತ ಪ್ರಕಾರವಾಗಿ ಕಂಡಿರಬೇಕು.

ಈ ಹಿನ್ನೆಲೆಯಲ್ಲಿ ಸಮಕಾಲೀನ ಮಹಿಳಾ ಕಾವ್ಯವನ್ನು ನೋಡಿದಾಗ ಹೆಚ್ಚಿನವರಿಗೆ ಕವಿತೆಯು ಒಂದು ಸಾಹಿತ್ಯಿಕ ಹವ್ಯಾಸಕ್ಕಿಂತ ಹೆಚ್ಚಾಗಿ ತಮ್ಮ ಮನಸ್ಥಿತಿಯನ್ನು ಪ್ರಕಟಪಡಿಸುವ ಅನಿವಾರ್ಯ ಮಾಧ್ಯಮವಾಗಿದೆ ಎಂಬುದು ಗಮನಕ್ಕೆ ಬರುತ್ತದೆ. ಕವಿತೆಗಳ ವಸ್ತುವನ್ನು ಹಾಗೂ ಅದರಲ್ಲಿ ತೊಡಗಿದವರನ್ನು ನೋಡಿದರೆ ಈ ಅಂಶ ಇನ್ನೂ ಸ್ಪಷ್ಟವಾಗುತ್ತದೆ. ಕನ್ನಡ–ತೆಲುಗಿನ ಎಷ್ಟೋ ಕವಿಯತ್ರಿಯರು ಹೇಳಿಕೊಂಡಿರುವಂತೆ ಅವರು ಕವಿತೆ ಬರೆಯುವುದು ತಮ್ಮ ನೋವಿನ ಒತ್ತಡಗಳಿಂದ ಬಿಡುಗಡೆ ಪಡೆಯಲು, ತಮ್ಮ ನೋವು ಹಾಗೂ ವಿಷಾದಗಳಿಗೆ ದನಿ ಕೊಡಲು ತಾವು ಯಾರಿಗೂ ಹೇಳಿಕೊಳ್ಳಲಾಗದ ತಲ್ಲಣಗಳನ್ನು, ಅನುಭವಗಳನ್ನು ಕವಿತೆ ರೂಪದಲ್ಲಿ ಹೊರಗೆಡವಿದ್ದಾರೆ. ಆರಂಭದ ಬಹುಪಾಲು ಕವಿತೆಗಳು ನಿಟ್ಟುಸಿರಿನ, ನೋವಿನ, ಅಸಹಾಯಕತೆ, ಬೇಗುದಿ ತಲ್ಲಣಗಳ ಅಭಿವ್ಯಕ್ತಿಯಾಗಿರುವುದು ಈ ಕಾರಣಕ್ಕಾಗಿಯೇ ಇರಬೇಕು. ಕವಿತೆಯ ರಚನೆಗಾಗಿ ಇವರು ಬಳಸಿಕೊಂಡ ತಂತ್ರ ಹಾಗೂ ನಿರೂಪಣೆಯ ಶೈಲಿ ದಾಟಿಗಳೂ ಸಹ ಇದೇ ಅಂಶವನ್ನು ಸಮರ್ಥಿಸುತ್ತವೆ.

ಹೆಣ್ಣಿನ ನೇರವಾದ, ಮುಕ್ತವಾದ ಅಭಿವ್ಯಕ್ತಿಗೆ ಅವಕಾಶವಿಲ್ಲದ ಸಮಾಜದಲ್ಲಿ ಕವಿತೆ ಅವರಿಗೆ ಒಂದು ಮುಖವಾಡ ಮಾರ್ಗವಾಗಿ ಒದಗಿಬಂತು. ಆದರೆ ಇದಿಷ್ಟೇ ಸಾಕಾಗಲಿಲ್ಲ. ಇಲ್ಲಿಯೂ ತಮ್ಮ ಅಭಿವ್ಯಕ್ತಿಗೆ ಇದ್ದ ಸಾಮಾಜಿಕ ವಿಮರ್ಶಾ ಬಿಕ್ಕಟ್ಟುಗಳನ್ನು ನಿವಾರಿಸಿಕೊಳ್ಳುವ ತಂತ್ರಗಳನ್ನು ಅವರು ಅನುಸರಿಸಬೇಕಾಯಿತು. ಇಲ್ಲವೆ ಹೊಸದಾಗಿ ರೂಢಿಸಿಕೊಳ್ಳಬೇಕಾಯಿತು. ಈ ದಿಸೆಯಲ್ಲಿ

ಕನಸುಗಾರಿಕೆ, ಆತ್ಮಕಥನದ ದಾಟಿ, ಸ್ವಗತ, ಗೆಳತಿಯರಿಗೆ ನಿವೇದನೆ ಮುಂತಾದುವೆಲ್ಲ ಅವರು ಅನುಸರಿಸಿದ ತಂತ್ರಗಳೇ ಆಗಿವೆ. ಪಾಶ್ಚಾತ್ಯ ಮತ್ತು ಭಾರತೀಯ ಸ್ತ್ರೀವಾದದ ಪ್ರಭಾವ ಪ್ರೇರಣೆಗಳೊಂದಿಗೆ ೧೯೭೫ ರಿಂದ ಈಚೆಗೆ ರಚನೆಯಾದ ಕನ್ನಡ–ತೆಲುಗು ಸ್ತ್ರೀವಾದಿ ಸಾಹಿತ್ಯವನ್ನೆಲ್ಲ ಅಧ್ಯಯನದ ತೆಕ್ಕೆಗೆ ತೆಗೆದುಕೊಳ್ಳುವುದು ಸಾಧ್ಯವಿಲ್ಲ. ಆದ್ದರಿಂದ ಈ ಅಧ್ಯಯನದ ಮೇಲೆ ನಿರೂಪಿಸಿದ ಉದ್ದೇಶಗಳ ಈಡೇರಿಕೆಗೆ ಪೂರಕವಾದ ಕನ್ನಡ–ತೆಲುಗು ಸ್ತ್ರೀವಾದಿ ಕಾವ್ಯವನ್ನಷ್ಟೇ ಬಳಸಿಕೊಳ್ಳಲಾಗಿದೆ.

೧೯೭೫ನ್ನು ಅಂತಾರಾಷ್ಟ್ರೀಯ ಮಹಿಳಾ ವರ್ಷವನ್ನಾಗಿ ಘೋಷಿಸಿದ ಸರ್ಕಾರವು ನಂತರದಲ್ಲಿ ಅದನ್ನು ಮಹಿಳಾ ದಶಕವಾಗಿ ವಿಸ್ತರಿಸಿತು. ಆ ದಶಕಾಚರಣೆಯ ಭಾಗವಾಗಿ ಹಲವಾರು ಸ್ತ್ರೀಪರ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಯಿತು. ಇದೇ ವೇಳೆಗೆ ಉನ್ನತ ಶಿಕ್ಷಣಕ್ಕೆ ಕಾಲಿಟ್ಟ ಕೆಲವು ಕರ್ನಾಟಕಾಂಧ್ರದ ಮಹಿಳೆಯರು ಪಾಶ್ಚಾತ್ಯ ಹಾಗೂ ಭಾರತೀಯ ಸ್ತ್ರೀವಾದಿ ಚಿಂತನೆ, ಚಳವಳಿಗಳಿಂದ ಪ್ರಭಾವ ಹೊಂದಿ ಕನ್ನಡ–ತೆಲುಗು ಭಾಷೆಗಳಲ್ಲಿ ಪ್ರಸ್ತುತಪಡಿಸಿದರು. ಇದರ ಫಲವಾಗಿ ೧೯೮೦ರ ದಶಕದ ಸುಮಾರಿಗೆ ಸ್ತ್ರೀವಾದಿ ಸಾಹಿತ್ಯವು ಕನ್ನಡ–ತೆಲುಗು ಎರಡರಲ್ಲೂ ಆರಂಭಗೊಂಡಿತು. ಹೀಗೆ ಆರಂಭಗೊಂಡ ಸ್ತ್ರೀವಾದಿ ಸಾಹಿತ್ಯ ಸಮೃದ್ಧವಾಗಿ ಬೆಳೆಯಿತಲ್ಲದೆ, ಅತ್ಯಂತ ಸಮರ್ಪಕವಾಗಿ ಸ್ತ್ರೀಪರ ಕಾಳಜಿಗಳನ್ನು, ಆಶಯಗಳನ್ನು ಅಭಿವ್ಯಕ್ತಪಡಿಸಿದ ಕಾಲ ಇದಾಗಿದೆ. ಈ ಒಂದು ಕಾರಣದಿಂದಾಗಿ ಈ ಕಾಲಘಟ್ಟದಲ್ಲಿ ರಚನೆಯಾದ ಕನ್ನಡ–ತೆಲುಗು ಸ್ತ್ರೀವಾದಿ ಕಾವ್ಯವನ್ನು ಮಾತ್ರ ಅಧ್ಯಯನಕ್ಕೊಳಪಡಿಸಲಾಗಿದೆ.

**ಅಧ್ಯಯನದ ಸ್ವರೂಪ :**

ಈ ಮಹಾಪ್ರಬಂಧವು ಮೇಲಿನ ತನ್ನ ಉದ್ದೇಶಗಳಿಗೆ ಅನುಗುಣವಾಗಿ ಒಟ್ಟು ಏಳು ಅಧ್ಯಾಯಗಳನ್ನು ಒಳಗೊಂಡಿದ್ದು, ಮೊದಲ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ ಹಾಗೂ ಸ್ವರೂಪ, ವೈಧಾನಿಕತೆಯನ್ನು ಕುರಿತು ಸ್ಪಷ್ಟಪಡಿಸಲಾಗಿದೆ.

ಎರಡನೇ ಅಧ್ಯಾಯ "ಈವರೆಗೂ ನಡೆದಿರುವ ಅಧ್ಯಯನಗಳ ಸಮೀಕ್ಷೆ"ಯಲ್ಲಿ ಕನ್ನಡ–ತೆಲುಗು ಭಾಷೆಗಳಲ್ಲಿನ ಸ್ತ್ರೀವಾದಿ ಸಾಹಿತ್ಯವನ್ನು ಕುರಿತು ಈ ವರೆಗೂ ನಡೆದಿರುವ ಅಧ್ಯಯನಗಳ ಸ್ವರೂಪ ಹಾಗೂ ಈ ಅಧ್ಯಯನಗಳ ಸಾಮ್ಯ, ವೈಷಮ್ಯಗಳನ್ನು ಕುರಿತು ಚರ್ಚಿಸಲಾಗಿದೆ.

ಮೂರನೆ ಅಧ್ಯಾಯ 'ಕನ್ನಡ–ತೆಲುಗು ಸ್ತ್ರೀವಾದಿ ಸಾಹಿತ್ಯದ ಹುಟ್ಟು, ಬೆಳವಣಿಗೆ'ಯಲ್ಲಿ ಕನ್ನಡ–ತೆಲುಗು ಭಾಷೆಗಳೆರಡರಲ್ಲಿ ಸ್ತ್ರೀವಾದಿ ಚಿಂತನೆಗಳ ಹುಟ್ಟು ಬೆಳವಣಿಗೆಗೆ ಪಾಶ್ಚಾತ್ಯ ಹಾಗೂ ಭಾರತೀಯ ಚಿಂತನೆಗಳ ಪ್ರೇರಣೆ ಪ್ರಭಾವವನ್ನು ಕುರಿತು ವಿವರಿಸಲಾಗಿದೆ.

ನಾಲ್ಕನೆಯ ಅಧ್ಯಾಯ 'ಕನ್ನಡ–ತೆಲುಗು ಸ್ತ್ರೀವಾದಿ ಕಾವ್ಯದಲ್ಲಿ ಪಿತೃಪ್ರಧಾನ ವ್ಯವಸ್ಥೆಯ ಸ್ವರೂಪ' ಈ ಅಧ್ಯಾಯದಲ್ಲಿ ಪಿತೃಪ್ರಧಾನತೆಯ ವ್ಯಾಖ್ಯಾನ ಸ್ತ್ರೀವಾದಿ ಅಧ್ಯಯನದ ಮೂಲಭೂತ

ವಿಷಯ. ಪಿತೃಪ್ರಧಾನ ವ್ಯವಸ್ಥೆ ಮತ್ತು ಅದು ರೂಪಿಸಿದ ವಿಷಮ ಪರಿಸರವನ್ನು ಕನ್ನಡ–ತೆಲುಗು ಸ್ತ್ರೀವಾದಿ ಕವಯತ್ರಿಯರು ತಮ್ಮ ಕಾವ್ಯದಲ್ಲಿ ಹಿಡಿದಿಟ್ಟ ಕ್ರಮ ಯಾವುದು, ವಿವಿಧ ಜಾತಿ, ವರ್ಗ, ಧರ್ಮಗಳಲ್ಲಿನ ಪಿತೃಪ್ರಧಾನ ವ್ಯವಸ್ಥೆಯ ಸ್ವರೂಪವನ್ನು ವ್ಯಾಖ್ಯಾನಿಸುವ ರೀತಿ ಯಾವುದು ಇತ್ಯಾದಿ ವಿಷಯಗಳನ್ನು ಚರ್ಚಿಸಲಾಗಿದೆ.

ಐದನೆಯ ಅಧ್ಯಾಯ 'ಕನ್ನಡ–ತೆಲುಗು ಸ್ತ್ರೀವಾದಿ ಕಾವ್ಯದಲ್ಲಿ ಲಿಂಗ ಸಮಾನತೆಯ ಪರಿಕಲ್ಪನೆ' ಸ್ತ್ರೀವಾದದ ಗುರಿ 'ಲಿಂಗ ಸಮಾನತೆ'ಯನ್ನು ಈಡೇರಿಸಿಕೊಳ್ಳುವುದು. ಲಿಂಗ ಅಸಮಾನತೆಯ ಮೌಲ್ಯವಾಸ್ಥೆಗೆ ಪ್ರತಿಯಾಗಿ ಕನ್ನಡ–ತೆಲುಗು ಸ್ತ್ರೀವಾದಿ ಕವಯತ್ರಿಯರು ಎತ್ತಿಹಿಡಿಯುವ ಲಿಂಗ ಸಮಾನತೆಯ ಮೌಲ್ಯದ ಸ್ವರೂಪವನ್ನು ಕುರಿತು ವಿಶ್ಲೇಷಿಸಲಾಗಿದೆ.

ಅಧ್ಯಾಯ ಆರು 'ಕನ್ನಡ–ತೆಲುಗು ಸ್ತ್ರೀವಾದಿ ಕಾವ್ಯದಲ್ಲಿ ಪುರಾಣ ಭಂಜಕತೆಯ ಸ್ವರೂಪ'ದಲ್ಲಿ ಸಮಕಾಲೀನ ಸಂದರ್ಭದಲ್ಲಿನ ಪಿತೃಪ್ರಧಾನತೆಯ ಪ್ರಶ್ನೆಯನ್ನು ವಿವರಿಸಿಕೊಳ್ಳುವಲ್ಲಿ ಮತ್ತು ಒಡೆಯುವಲ್ಲಿ ಕನ್ನಡ–ತೆಲುಗು ಸ್ತ್ರೀವಾದಿ ಲೇಖಕಿಯರು ಪುರಾಣ ಭಂಜಕಥೆಯ ಕಾರ್ಯತಂತ್ರವನ್ನು ವಿಶೇಷವಾಗಿ ಬಳಸುತ್ತಾರೆ. ಪೌರಾಣಿಕ ಪಾತ್ರಗಳನ್ನು, ಸನ್ನಿವೇಶಗಳನ್ನು, ಕಥೆಗಳನ್ನು ರೂಪಕವಾಗಿ ಬಳಸಿಕೊಂಡು ಅದರ ಮೂಲಕ ಸ್ತ್ರೀವಾದಿ ಸಿದ್ಧಾಂತಗಳನ್ನು ವ್ಯಾಖ್ಯಾನಿಸಲು ಪ್ರಯತ್ನಿಸುತ್ತಾರೆ. ಈ ಅಧ್ಯಾಯದಲ್ಲಿ ಎರಡೂ ಭಾಷೆಗಳ ಕಾವ್ಯದಲ್ಲಿ ವಿಶೇಷವಾಗಿ ಕಂಡುಬರುವ ಈ ಪುರಾಣ ಭಂಜಕಥೆಯ ಸ್ವರೂಪ, ಆಶಯ, ವಿಧಾನಗಳನ್ನು ವಿಶ್ಲೇಷಿಸಲಾಗಿದೆ.

ಅಧ್ಯಾಯ ಏಳು 'ಕನ್ನಡ–ತೆಲುಗು ಸ್ತ್ರೀವಾದಿ ಕಾವ್ಯದಲ್ಲಿ ಇತರ ಸಾಮಾಜಿಕ ಪ್ರಶ್ನೆಗಳು ಎಂಬುದರಲ್ಲಿ ಲಿಂಗ ವಿಭಜನೆ ಮತ್ತು ತಾರಮ್ಯಗಳು ಭಾರತೀಯ ಸಮಾಜದ ಹಲವು ತಾರತಮ್ಯಗಳಲ್ಲಿ ಮುಖ್ಯವಾದುವು. ಅಂತೆಯೇ ಇವುಗಳಲ್ಲದೇ ಕೂಡ ಜಾತಿ, ಧರ್ಮ, ಪ್ರದೇಶ ಹಲವು ನೆಲೆಯ ತಾರತಮ್ಯಗಳನ್ನು ಒಳಗೊಂಡಿದೆ. ಇಂತಹ ಸಮಾಜದಲ್ಲಿ ಮಹಿಳೆ ತನ್ನ ಲಿಂಗದ ಕಾರಣಕ್ಕಾಗಿ ತಾರತಮ್ಯಕ್ಕೆ ಒಳಗಾಗುವುದರೊಂದಿಗೆ ಜಾತಿ, ಧರ್ಮ, ಇತ್ಯಾದಿ ತಾರತಮ್ಯಗಳಿಗೂ ಒಳಗಾಗುತ್ತಾಳೆ. ಸಹಜವಾಗಿಯೇ ವಿವಿಧ ಧರ್ಮ, ಜಾತಿ, ಪ್ರದೇಶಗಳ ಹಿನ್ನೆಲೆಯ ಲೇಖಕಿಯರು ಈ ತಾರತಮ್ಯಗಳನ್ನು ತಮ್ಮ ಕಾವ್ಯದಲ್ಲಿ ಸ್ಪರ್ಶಿಸುವ ಪ್ರಯತ್ನ ಮಾಡಿದ್ದಾರೆ. ಸಮಾರೋಪದಲ್ಲಿ ಒಟ್ಟು ಅಧ್ಯಯನದ ನೋಟ, ಅಧ್ಯಯನದ ಫಲಿತಗಳನ್ನು ಒಳಗೊಂಡಿದೆ.

# ಅಧ್ಯಾಯ : ಎರಡು

# ಕನ್ನಡ–ತೆಲುಗು ಸ್ತ್ರೀವಾದಿ ಸಾಹಿತ್ಯ ಅಧ್ಯಯನಗಳ ಸಮೀಕ್ಷೆ

ಪ್ರಸ್ತುತ ಕನ್ನಡ–ತೆಲುಗು ಸ್ತ್ರೀವಾದಿ ಸಾಹಿತ್ಯ ಅಧ್ಯಯನಗಳ ಸಮೀಕ್ಷೆ ಒಳಗೆ ಸ್ತ್ರೀವಾದಿ ಸಾಹಿತ್ಯ ವಿಮರ್ಶೆ ಮತ್ತು ಸ್ತ್ರೀವಾದಿ ಸಾಹಿತ್ಯ ಅಧ್ಯಯನ ಈ ಎರಡನ್ನೂ ಒಳಗೊಂಡ ಹಾಗೆ ಇರುವಂತಹ ಪ್ರಕಟಿತ ಮತ್ತು ಅಪ್ರಕಟಿತ ಕೃತಿಗಳನ್ನು ಈ ಕೆಳಗಿನಂತೆ ಸಮೀಕ್ಷಿಸಲಾಗಿದೆ.

**೧. ಪರಿಚಯಾತ್ಮಕ ಬರವಣಿಗೆ :**

ಕನ್ನಡ–ತೆಲುಗು ಸ್ತ್ರೀವಾದಿ ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ತೌಲನಿಕ ಅಧ್ಯಯನಗಳು ಲಭ್ಯವಾಗಿರುವುದಿಲ್ಲ. ಆದರೆ ತೆಲುಗಿನ ಕೆಲವು ಸ್ತ್ರೀವಾದಿ ಲೇಖಕಿಯರನ್ನು ಕನ್ನಡಕ್ಕೆ ಪರಿಚಯಿಸುವ, ಅಂತೆಯೇ ಕನ್ನಡದ ಸ್ತ್ರೀವಾದಿ ಲೇಖಕಿಯರನ್ನು ತೆಲುಗಿಗೆ ಪರಿಚಯಿಸುವ ಪರಿಚಯಾತ್ಮಕ ಲೇಖನಗಳು ದೊರೆಯುತ್ತವೆ. ಅವುಗಳೆಂದರೆ ೬, ಅಕ್ಟೋಬರ್ ೨೦೧೩ ಸಂಚಿಕೆ ೨೨ ಸಾಹಿತ್ಯ ಪುರಾವಣಿ, ಪ್ರಜಾವಾಣಿ ಪತ್ರಿಕೆಯಲ್ಲಿ ಪ್ರಕಟವಾದ ಲೇಖನದಲ್ಲಿ ತೆಲುಗು ಸ್ತ್ರೀವಾದಿ ಕವಯತ್ರಿ ಷಹಜಾನಳನ್ನು ಸ. ರಘುನಾಥ ಅವರು ಕನ್ನಡ ಸಾಹಿತ್ಯಕ್ಕೆ ಪರಿಚಯ ಮಾಡಿಕೊಟ್ಟಿದ್ದಾರೆ. ಅಂತೆಯೇ ಸ. ರಘುನಾಥ ಅವರು ಪ್ರತಿಭಾ ನಂದಕುಮಾರ ಅವರ ಕಾವ್ಯವನ್ನು ತೆಲುಗಿಗೆ ಪರಿಚಯ ಮಾಡಿಕೊಟ್ಟಿದ್ದಾರೆ. ಇದೇ ರೀತಿ ತೆಲುಗಿನಲ್ಲಿಯೂ ಸಹ ವಿಜೇತ ಪತ್ರಿಕೆಯ ಕಾಲಂ–೨ ಫೆಬ್ರವರಿ–೨೦೧೨ರಂದು ಕನ್ನಡದ ಸ್ತ್ರೀವಾದಿ ಕವಯತ್ರಿ ಮಮತಾ ಜಿ. ಸಾಗರ ಅವರನ್ನು ರಂಜಿತ್ ಕುಮಾರ್ ಅವರು ಪರಿಚಯ ಮಾಡಿಕೊಟ್ಟಿದ್ದಾರೆ. ಇದಲ್ಲದೆ ಎರಡೂ ಭಾಷೆಗಳ ಸಾಹಿತ್ಯ ಕೃತಿಗಳನ್ನು ಭಾಷಾಂತರಿಸುವ ಸಂದರ್ಭದಲ್ಲಿ ಉದ್ದಿಷ್ಟ ಭಾಷೆಯ ಸ್ತ್ರೀವಾದಿ ಸಾಹಿತ್ಯದ ಸ್ವರೂಪದೊಂದಿಗಿಟ್ಟು ತೂಗಿ ನೋಡುವ ಪರಿಚಯಾತ್ಮಕ ಮುನ್ನುಡಿ, ಬೆನ್ನುಡಿಗಳು ದೊರೆಯುತ್ತವೆ. ಉದಾ: ನಮಗೆ ಗೋಡೆಗಳಿಲ್ಲ (ಮಾಕು ಗೋಡಲ್ಲೇವು) ಕೃತಿಯನ್ನು ಕನ್ನಡಕ್ಕೆ ಅನುವಾದಿಸುವಾಗ ಸುಜ್ಞಾನಮೂರ್ತಿಯವರು ಬೆನ್ನುಡಿಯಲ್ಲಿ ಹೇಳುವಂತೆ ಕರ್ನಾಟಕಾಂಧ್ರದಲ್ಲಿ ಸ್ತ್ರೀವಾದದ ಸ್ವರೂಪ ಹೇಗಿದೆ ಎಂಬುದನ್ನು ಕುರಿತು ಹೇಳಿದ್ದಾರೆ. ಕರ್ನಾಟಕದಲ್ಲಿ ಮಹಿಳಾ ಹೋರಾಟಗಾರರಿಗೂ ಮತ್ತು ಸ್ತ್ರೀವಾದಿ ಬರಹಗಾರರಿಗೂ ಒಂದು ಬಗೆಯಲ್ಲಿ ಪ್ರತ್ಯೇಕತೆ ಇದೆ. ಅಥವಾ ಇವೆರಡೂ ಪ್ರತ್ಯೇಕವಾಗಿ ನಡೆಯುತ್ತವೆ. ಇದರ ನಡುವೆ ಪರಸ್ಪರ ವೈಚಾರಿಕ ಕೊಡುಕೊಳೆ ನಡೆದಿರುವುದು ಕಡಿಮೆ. ಹಾಗಾಗಿ ಸ್ತ್ರೀವಾದಿ ಆಲೋಚನೆಗಳು ಒಂದು ಕಡೆ ಸಾಗಿದ್ದರೆ ಸ್ತ್ರೀವಾದಿ ಹೋರಾಟಗಳು ಮತ್ತೊಂದು ಕಡೆ ಸಾಗಿವೆ. ವಿಶೇಷವೆಂದರೆ ಆಂಧ್ರದಲ್ಲಿ ಇವೆರಡೂ ಒಟ್ಟಿಗೆ ಸಾಗಿವೆ. ಈ ಭಿನ್ನತೆಗೆ ಕಾರಣವೇನು ಎಂಬುದನ್ನು ಸಹ ಹೇಳಲಾಗಿದೆ.

೨. ಪ್ರತ್ಯೇಕ ಸ್ತ್ರೀವಾದಿ ಅಧ್ಯಯನಗಳು :

ಕನ್ನಡ–ತೆಲುಗು ಸ್ತ್ರೀವಾದಿ ಸಾಹಿತ್ಯ ತೌಲನಿಕ ಅಧ್ಯಯನದ ಕೊರತೆ ಇದ್ದರೂ ಈ ಎರಡೂ ಭಾಷೆಗಳ ಸಾಹಿತ್ಯವನ್ನು ಆಯಾ ಸಾಹಿತ್ಯ ಪರಂಪರೆಯಲ್ಲಿ ಪ್ರತ್ಯೇಕವಾಗಿ ಅಧ್ಯಯನ ಮಾಡಿದ ಸಾಹಿತ್ಯ ಸಮೃದ್ಧವಾಗಿ ದೊರೆಯುತ್ತದೆ. ಉದಾ: ಕನ್ನಡದಲ್ಲಿ ಎಂಬತ್ತರ ದಶಕದ ಆರಂಭದ ವೇಳೆಗೆ ಸ್ತ್ರೀವಾದಿ ವಿಮರ್ಶೆಯು ಗಂಭೀರವಾಗಿ ತೊಡಗಿದ್ದನ್ನು ಕಾಣಬಹುದು. ಹಾಗೆಯೇ ತೆಲುಗಿನಲ್ಲಿಯು ಸಹ ಈ ಬಗೆಯ ಸಾಹಿತ್ಯ ಅಧ್ಯಯನಗಳು ಪ್ರಸ್ತುತ ಅಧ್ಯಯನಕ್ಕೆ ಉಪಯುಕ್ತವಾಗಿವೆ.

ಅನೇಕ ಸ್ತ್ರೀವಾದಿ ಅಧ್ಯಯನಕಾರರಿಂದಾಗಿ ತೆರೆಮರೆಗೆ ಸರಿಸಲಾಗಿದ್ದ ಸಾಹಿತ್ಯ ಬರಹಗಳು ಬೆಳಕು ಕಾಣಲು ಕಾರಣವಾದವು. ಉದಾ: ನಂಜನಗೂಡು ತಿರುಮಲಾಂಬಾ ಅವರನ್ನು ಕುರಿತು ಬಿ.ಎನ್. ಸುಮಿತ್ರಬಾಯಿ ಬರೆದ ಕೃತಿ; ಸರಸ್ವತಿಬಾಯಿ ರಾಜವಾಡೆ (ಗಿರಿಬಾಲೆ) ಅವರನ್ನು ಕುರಿತು ಟಿ.ಎಸ್. ಶ್ರಿವಳ್ಳಿ, ಆರ್. ಕಲ್ಯಾಣಮ್ಮನವರನ್ನು ಕುರಿತು ಎಸ್.ಡಿ. ಶಶಿಕಲಾ... ಮುಂತಾದವರು ಇದೇ ರೀತಿಯ ಅಧ್ಯಯನಗಳು ತೆಲುಗಿನಲ್ಲಿಯು ಸಹ ನಡೆದಿವೆ. ಭಂಡಾರು ಅಚ್ಚಮಾಂಬ ಅವರನ್ನು ಕುರಿತು 'ಸಚ್ಚರಿತ್ರ' ಎಂಬ ಕೃತಿಯನ್ನು ಕೊಂಡವೇಟಿ ಸತ್ಯವತಿ ಅವರು ಬರೆದರೆ, ಕನುಪರ್ತಿ ವರಲಕ್ಷ್ಮಮ್ಮ ಅವರು 'ಕಂದಕೂರಿ ರಾಜಲಕ್ಷ್ಮಮ್ಮ ಗಾರಿ ಚರಿತ್ರ' ಎಂಬ ಕೃತಿಯನ್ನು ಬರೆದಿದ್ದಾರೆ. ಇನ್ನು ಮುಂತಾದ ಸ್ತ್ರೀವಾದಿ ಅಧ್ಯಯನಕಾರರು ಈ ರೀತಿಯ ಪಾಯ ಸಂಶೋಧನೆಗಳಲ್ಲಿ ತೊಡಗಿಸಿಕೊಂಡಿದ್ದಾರೆ.

ಕನ್ನಡ ಸ್ತ್ರೀವಾದಿ ಚಿಂತನೆಗಳಿಗೆ ಚಾಲನೆಯನ್ನು ನೀಡಿದವರಲ್ಲಿ ವಿಜಯ ದಬ್ಬೆ, ಬಿ.ಎನ್. ಸುಮಿತ್ರಾಬಾಯಿ ಮೊದಲಿಗರಾದರೆ, ತೆಲುಗಿನಲ್ಲಿ ಭಂಡಾರು ಅಚ್ಚಮಾಂಬ, ಓಲ್ಗಾ, ಕಾತ್ಯಾಯಿನಿ, ಸಾವಿತ್ರಿ, ಜಯಪ್ರಭಾ, ಅಬ್ಬೂರಿ ಛಾಯಾದೇವಿ... ಮುಂತಾದವರು. ಇವರು ಮಹಿಳಾ ಸಾಹಿತ್ಯ ಕೃತಿಗಳನ್ನು ಅಧ್ಯಯನಕ್ಕೆ ಒಳಪಡಿಸಿದ್ದಲ್ಲದೆ ಪಾಶ್ಚಾತ್ಯ ದೇಶದಲ್ಲಿ ಬೆಳೆದುಬಂದ ಸ್ತ್ರೀವಾದಿ ವಿಮರ್ಶೆಯ ನೆಲೆಗಳನ್ನು ಗುರುತಿಸುವಂತಹ ಕಾರ್ಯವನ್ನು ಮಾಡಿದ್ದಾರೆ.

ವಿಜಯ ದಬ್ಬೆಯವರ ಮಹಿಳೆ–ಸಾಹಿತ್ಯ, ಸಮಾಜ, ನಾರಿದಾರಿ ದಿಗಂತ, ಮುಂತಾದ ಕೃತಿಗಳಲ್ಲಿನ ಕೆಲವು ಲೇಖನಗಳು ಮತ್ತು ಬಿ.ಎನ್. ಸುಮಿತ್ರಾಬಾಯಿ ಅವರ ಸಾರ್ವತ್ರಿಕದೆಡೆಗೆ ವಿಚಯ, ಅಯನ ಮುಂತಾದ ಕೃತಿಗಳಲ್ಲಿ ಪಾಶ್ಚಾತ್ಯ ಸ್ತ್ರೀವಾದಿ ಚಿಂತನೆಗಳ ತಾತ್ವಿಕ ವಿಶ್ಲೇಷಣೆ ಹಾಗೂ ಭಾರತೀಯ ಸಂದರ್ಭದಲ್ಲಿ ಅವುಗಳ ಅವಶ್ಯಕತೆಯ ಬಗ್ಗೆ ಚರ್ಚಿಸಲಾಗಿದ್ದು ಕನ್ನಡ ಸಾಹಿತ್ಯವನ್ನು ಮತ್ತು ಮಹಿಳಾ ಸಾಹಿತ್ಯವನ್ನು ಪುನರ್ ಓದಿಗೆ ಒಳಪಡಿಸಲಾಗಿದೆ.

ತೆಲುಗಿನಲ್ಲಿಯೂ ಸಹ ಇದೇ ಮಾದರಿಯ ಅಧ್ಯಯನಗಳು ನಡೆದಿವೆ. ಉದಾ: ಆಂಧ್ರ ಕವಯತ್ರಿಲು–ಊಟೂಕೂರು ಲಕ್ಷ್ಮಿಕಾಂತಮ್ಮ, ೨೦ನೇ ಶತಮಾನದಲ್ಲಿ ತೆಲುಗು ರಚನಗಾರ್ತಿಯರ ರಚನೆಗಳು (ಸಂ) ಅಬ್ಬೂರಿ ಛಾಯಾದೇವಿ, "ಪೆಮಿನಿಜಂ" ಕಮಲ ಭಾಸಿನ್, ಅತಡು–ಆಮೆ–

ಮನಂ-ಓಲ್ಗಾ ಇತ್ಯಾದಿ. ಇದಲ್ಲದೆ ಪುರುಷರ ಬರವಣಿಗೆಗಳಲ್ಲಿ ಸ್ತ್ರೀಪಾತ್ರ ಚಿತ್ರಣವನ್ನು ಕುರಿತು ಅಧ್ಯಯನಗಳು ಸಹ ಇದೇ ಕಾಲಘಟ್ಟದಲ್ಲಿ ನಡೆದವು. ಉದಾ: ಕನ್ನಡದಲ್ಲಿ : ವಚನ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು-ವಿದ್ಯಾವತಿ, ಸ್ತ್ರೀವಾದಿ ನೆಲೆಯಲ್ಲಿ ಪಂಪ, ಕುಮಾರವ್ಯಾಸ ಕೃತಿಗಳ ಪುನರಾಧ್ಯಯನ-ಪೂರ್ಣಿಮಾ ಬಿ.ಎನ್. ಹಾಗೆಯೇ ತೆಲುಗಿನಲ್ಲಿಯೂ ಸಹ ಈ ಬಗೆಯ ಅಧ್ಯಯನಗಳು ನಡೆದಿವೆ. ಚಲಂ ಸ್ತ್ರೀವಾದಿ ಸಾಹಿತ್ಯ-ಪಿ. ಸಂಜೀವಮ್ಮ, ಅಲಂಕಾರಶಾಸ್ತ್ರಂಲೋ ಸ್ತ್ರೀ-ಕಾತ್ಯಾಯಿನಿ ವಿದ್ಮಹ, ವಿಶ್ವನಾಥ ಅವರ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರಗಳ ಚಿತ್ರಣ-ಸಿ.ಎಚ್. ಶಾಮಲಾದೇವಿ, ಸಂಪ್ರದಾಯ ಸಾಹಿತ್ಯ-ಸ್ತ್ರೀವಾದಿ ದೃಷ್ಟಿಕೋನ ಇತ್ಯಾದಿ.

ಹೀಗೆ ಎಂಬತ್ತರ ದಶಕದಿಂದೀಚೆಗೆ ಕನ್ನಡ-ತೆಲುಗಿನಲ್ಲಿ ಕಾಣಿಸಿಕೊಂಡ ಸ್ತ್ರೀವಾದಿ ಅಧ್ಯಯನಗಳನ್ನು ಈ ಕೆಳಗಿನಂತೆ ಪರಿಚಯಿಸಬಹುದಾಗಿದೆ.

**೨.೧. ಕನ್ನಡ ಸ್ತ್ರೀವಾದಿ ಅಧ್ಯಯನಗಳ ಸಮೀಕ್ಷೆ :**

ಕರ್ನಾಟಕ ಸಾಹಿತ್ಯ ಅಕಾಡೆಮಿಯಿಂದ ಪ್ರಕಟವಾದ ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ, ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ ಎಂಬ ಕೃತಿಗಳಲ್ಲಿ ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಕಾಲದ ಲೇಖಕಿಯರ ಕೃತಿಗಳನ್ನು ವಿಶ್ಲೇಷಣೆಗೊಳಪಡಿಸಲಾಗಿದ್ದು, ಕಾವ್ಯ, ಕಥೆ, ಕಾದಂಬರಿ, ಪ್ರಕಾರಗಳನ್ವಯ ಪ್ರತ್ಯೇಕ ಪರಿಶೀಲನೆಯನ್ನು ಕಾಣಬಹುದು.

ಮಲ್ಲಿಕಾ ಘಂಟಿಯವರ "ಕನ್ನಡದಲ್ಲಿ ಮಹಿಳಾ ಕಥಾ ಸಾಹಿತ್ಯ" ಎಂಬ ಕೃತಿಯಲ್ಲಿ ನವೋದಯ ಪೂರ್ವ, ನವೋದಯ, ಪ್ರಗತಿಶೀಲ, ನವ್ಯ, ದಲಿತ-ಬಂಡಾಯ ಪಂಥಗಳಡಿಯಲ್ಲಿ ಮಹಿಳೆಯರ ಕಥೆಗಳನ್ನು ವಿಶ್ಲೇಷಿಸಿದ್ದಾರೆ. ಸಾಧ್ಯವಿದ್ದಷ್ಟು ಎಲ್ಲಾ ಮಹಿಳೆಯರ ಕಥಾಸಂಕಲನಗಳನ್ನು, ಕಥೆಗಳನ್ನು ಒಂದೆಡೆ ಸೇರಿಸಿ ಮಹಿಳಾ ಕಥನ ಸಾಹಿತ್ಯ ಚರಿತ್ರೆಗೆ ಅಡಿಪಾಯ ಹಾಕಿದ್ದಾರೆ.

ಬಿ.ಎನ್. ಸುಮಿತ್ರಾಬಾಯಿ ಅವರು ಸ್ತ್ರೀವಾದ ಎಂಬ ಕೃತಿಯಲ್ಲಿ ಪಾಶ್ಚಾತ್ಯ ಸ್ತ್ರೀವಾದಕ್ಕೆ ಸಂಬಂಧಿಸಿದಂತೆ ಸಂಕ್ಷಿಪ್ತ ಮಾಹಿತಿಯನ್ನು ಕೊಟ್ಟಿದ್ದು, ಕನ್ನಡದ ಸಂದರ್ಭ ಮತ್ತು ಸ್ತ್ರೀವಾದಿ ತಾತ್ವಿಕತೆ ಎಂಬ ಅಧ್ಯಯನದಲ್ಲಿ ಭಾರತವನ್ನಾಗಲಿ, ಕರ್ನಾಟಕವನ್ನಾಗಲಿ ತೆಗೆದುಕೊಂಡಾಗ ಸ್ತ್ರೀವಾದಕ್ಕೆ ಮುಖ್ಯವಾಗಿ ಎದುರಾಗುವ ಸಮಸ್ಯೆಗಳು ಪಿತೃ ಪ್ರಧಾನತೆ, ಲಿಂಗ ಅಸಮಾನತೆಗಳಾಗಿವೆ ಎಂಬ ವಿಚಾರಗಳನ್ನು ಕುರಿತಾಗಿ ಚರ್ಚಿಸಿದ್ದಾರೆ.

ಮನು ಎನ್. ಚಕ್ರವರ್ತಿ ಅವರು "ಭಾರತೀಯ ಸ್ತ್ರೀವಾದ" ಎಂಬ ಕೃತಿಯಲ್ಲಿನ ಚಿಂತನೆಗಳು ನನ್ನ ಅಧ್ಯಯನಕ್ಕೆ ಉಪಯುಕ್ತವಾದ ಮಾಹಿತಿಯನ್ನು ಒದಗಿಸುತ್ತವೆ. ಭಾರತದಲ್ಲಿ ಸ್ತ್ರೀವಾದ ಪಶ್ಚಿಮದಿಂದ ಪ್ರೇರಣೆಗಳನ್ನು ಪಡೆದರೂ ತನ್ನ ಸ್ವಂತಿಕೆ ಮತ್ತು ಅನನ್ಯತೆಗಳನ್ನು ಪಡೆಯುತ್ತ ಬೆಳೆದಿದೆ. ಸಾಮಾಜಿಕ, ಚಾರಿತ್ರಿಕ, ಆರ್ಥಿಕ ವಿಶ್ಲೇಷಣೆಗಳ ಜೊತೆಯಲ್ಲೇ ಸಂಸ್ಕೃತಿ, ಸಾಹಿತ್ಯ

ಮೀಮಾಂಸೆಗಳಲ್ಲೂ ಸ್ತ್ರೀವಾದ ಭಾರತದಲ್ಲಿ ಮಹತ್ವದ ಸಾಧನ ಮಾಡಿದ. ಈ ಪ್ರಕ್ರಿಯೆ ಪ್ರಸ್ತುತ ಕೃತಿಯಲ್ಲಿ ಕಾಣಬಹುದು. ಇಲ್ಲಿ ಮನು ಚಕ್ರವರ್ತಿಯವರ ಎರಡು ಕನ್ನಡ ಲೇಖನಗಳು ಸೂಸಿಥಾರು, ಲಲಿತಾ ಕೆ. ಮತ್ತು ಗೇಲ್ ಓಮ್ ವೆಡ್ತರ್ ಇಂಗ್ಲಿಷ್ ಲೇಖನಗಳ ಕನ್ನಡಾನುವಾದವಿದೆ. ಅನುವಾದಗಳನ್ನು ಅನುಕ್ರಮವಾಗಿ ಶ್ರೀಮತಿಎಚ್.ಎಸ್., ಸರ್ವಮಂಗಳ ಸಿ.ಎಸ್. ಮತ್ತು ವಿ. ಶೈಲಜಾ ಮಾಡಿದ್ದಾರೆ. ಜತೆಗೆ ಸ್ತ್ರೀವಾದಿ ಸಾಹಿತ್ಯ ಮೀಮಾಂಸೆಯನ್ನು ಕುರಿತ ಡಾ. ಡಿ.ಆರ್. ನಾಗರಾಜ ಅವರ ಲೇಖನವಿದೆ. ಕನ್ನಡದಲ್ಲಿ ಭಾರತೀಯ ಸ್ತ್ರೀವಾದವನ್ನು ಕುರಿತ ಮೊದಲ ಅಚ್ಚುಕಟ್ಟಾದ ಪೀಠಿಕೆಯ ಕೃತಿ ಇದಾಗಿದೆ.

ಆರ್ಕೆ ಅವರು ಸಾಮಾಜಿಕ ಸಿದ್ಧಾಂತ ಮತ್ತು ಹೋರಾಟ ಎಂಬ ಕೃತಿಯಲ್ಲಿ ಮಹಿಳಾ ಪ್ರಜ್ಞೆ ಮತ್ತು ಕಾವ್ಯದ ಬಗ್ಗೆ ಭಾರತೀಯ ಸಾಮಾಜಿಕ ಮತ್ತು ಧಾರ್ಮಿಕ ಹಿನ್ನೆಲೆಯಲ್ಲಿ ಸ್ತ್ರೀ ಮನೋಧರ್ಮ ಹಾಗೂ ಅವಳ ಸ್ಥಿತಿಗತಿಗಳ ಬಗ್ಗೆ ವಿಶ್ಲೇಷಣೆ ಮಾಡಿದ್ದು, ದೀರ್ಘವಾದ ಪ್ರಸ್ತಾವನೆಯಲ್ಲಿ ಭಾರತೀಯ ಸ್ತ್ರೀಯೊಬ್ಬಳ ಸಾಮಾಜಿಕ, ಧಾರ್ಮಿಕ, ಆರ್ಥಿಕ ಸ್ಥಿತಿಗತಿಗಳ ವಿಶ್ಲೇಷಣೆಯಿದೆ. ನಂತರದಲ್ಲಿ ಮಹಿಳಾ ಕಾವ್ಯವನ್ನು ಕುರಿತು ಆಳವಾದ ವಿವರಣೆಯನ್ನು ನೀಡಿದ್ದಾರೆ.

ಇದೇ ಕೃತಿಯಲ್ಲಿ ಆರ್ಕೆ ಅವರು ಕಾವ್ಯದಲ್ಲಿ ಲೈಂಗಿಕ ಸ್ವಚ್ಛಂದತೆ ಅಭಿವ್ಯಕ್ತಿಕತೆಯ ಬಗ್ಗೆ ಹೇಳುತ್ತಾ ಲೈಂಗಿಕ ಸ್ವಚ್ಛಂದತೆಯ ಬಯಕೆಯನ್ನು ಕಾವ್ಯದ ಪ್ರೇರಣೆಯಾಗಿಟ್ಟುಕೊಂಡಾಗ ತಳೆಯಬಹುದಾದ ವಿವೇಕ ಮತ್ತು ನಿಗ್ರಹದ ಅವಶ್ಯಕತೆಯ ಬಗೆಗೆ ವಿವರಿಸಿದ್ದಾರೆ.

ಒಂದೆಡೆ ಹೆಣ್ಣನ್ನು ಪೂಜಿಸಿ ಪತಿವ್ರತೆಯರ ಪಟ್ಟಕ್ಕೇರಿಸಿ ಇನ್ನೊಂದೆಡೆ ಕಾಮದ ಸರಕಾಗಿ ಕಾಣುವ ಪುರುಷ ಪ್ರಪಂಚವನ್ನು ಕಣ್ಣು ತೆರೆಸುವಲ್ಲಿ ಕವಯತ್ರಿಯರ ಪಾತ್ರ ಮಹತ್ವದ್ದಾಗಿದೆ ಎಂದು ಹೇಳುತ್ತಾ, ಪ್ರತಿಭ ನಂದಕುಮಾರ್, ಮುಕ್ತಾಯಕ್ಕ, ಶಶಿಕಲಾ ವಸ್ತ್ರದ, ಸ. ಉಷಾ, ಮಾಲತಿ ಪಟ್ಟಣಶೆಟ್ಟಿ, ಬಿ.ಟಿ. ಲಲಿತಾ ನಾಯಕ್ ಇನ್ನೂ ಮುಂತಾದವರ ಕವನಗಳನ್ನು ಉದಾಹರಿಸಿ ಸ್ತ್ರೀ ಕಾವ್ಯದ ಮಜಲುಗಳನ್ನು ಗುರುತಿಸಿದ್ದಾರೆ.

ಮಾಲತಿ ಪಟ್ಟಣಶೆಟ್ಟಿ ಅವರ "ಅಕ್ಕ ಕೇಳವ್ವ" ಎಂಬ ಪ್ರಬಂಧವು ಈ ಶತಮಾನದ ಮಹಿಳಾ ಕಾವ್ಯಕ್ಕೆ ಸಂಬಂಧಿಸಿದಾದ್ದರಿಂದ ಈ ಕಾಲದಲ್ಲಿ ಮಹಿಳೆ ಕಾವ್ಯದಲ್ಲಿಯ ಸೃಜನಶೀಲತೆಯ ಗತಿಯನ್ನು ಅನುಲಕ್ಷಿಸಿ ವಿವಿಧ ಹಂತಗಳಲ್ಲಿ ವಿಭಜಿಸಿಕೊಂಡು ಈ ಸಾಹಿತ್ಯವು ನಡೆದುಬಂದ ದಾರಿಯ ಸ್ಥೂಲ ಪರಿಚಯವನ್ನು ಅಗತ್ಯವಿದ್ದೆಡೆಗಳಲ್ಲಿ ನಡೆದು ವಿಶ್ಲೇಷಣೆಯೊಂದಿಗೆ ಪ್ರಬಂಧದ ಇತಿಮಿತಿಗಳು ಮಂಡಿಸುವ ಪ್ರಯತ್ನಗಳನ್ನು ಮಾಡಲಾಗಿದೆ.

ಮಾಲತಿ ಪಟ್ಟಣಶೆಟ್ಟಿ ಮಹಿಳಾ ಕಾವ್ಯದಲ್ಲಿಯ ಪರಿವರ್ತನೆಗಳನ್ನು ಲಕ್ಷಿಸಿ ಕಾಲ ವಿಭಜಿಸಲಾಗಿದೆ. ಕ್ರಮವಾಗಿ ಆಧುನಿಕ ಮಹಿಳಾ ಕಾವ್ಯ, ಜಾಗೃತಿ ಮಹಿಳಾ ಕಾವ್ಯ, ಪ್ರತಿಭಟನಾತ್ಮಕ ಮಹಿಳಾ ಕಾವ್ಯ ಮತ್ತು ಈಗಿನ ಪ್ರಸ್ತುತ ಸಮಯದ ಕಾವ್ಯಗಳನ್ನಾಗಿ ವಿಭಜಿಸಿ ವಿಶ್ಲೇಷಣೆ ಮಾಡಿದ್ದಾರೆ.

ಕುಲಶೇಖರಿ ಅವರ "ಈ ಶತಮಾನದ ಕನ್ನಡ ಕವಯತ್ರಿಯರು" ಎಂಬ ಕೃತಿಯಲ್ಲಿ ಮಹಿಳಾ ಕಾವ್ಯದ ಹಿನ್ನೆಲೆ ಪರಂಪರೆ ನಡೆದುಬಂದ ದಾರಿ, ಆಗಬೇಕಾದ ಬದಲಾವಣೆಗಳು, ನಾಟಕ ಪ್ರಬಂಧಗಳಿಗಿಂತ ಭಿನ್ನವಾದ, ವಿಶೇಷವಾದ ಗುಣಗಳನ್ನು ಕಾವ್ಯ ಮಾಧ್ಯಮದಲ್ಲಿ ಗುರುತಿಸಿದ್ದಾರೆ. ಇದು ಸಂಕ್ಷಿಪ್ತ ಹಾಗೂ ಸಂಗ್ರಹ ರೂಪದಲ್ಲಿ ನಿಗೂಢ ಅರ್ಥ ಸ್ಫುರಿಸುವ ಅಗಾಧತೆಯನ್ನು ಹೊಂದಿದೆ. ಕಾವ್ಯ ರೂಪಕವಾದ ಪ್ರತಿಮೆಗಳ ಮೂಲಕ ಶಬ್ದ ಅರ್ಥಗಳ ಸೀಮೆಯ ನೆಲೆಯನ್ನು ಮೀರಿ ಹೊಸ ಬಗೆಯ ಅರ್ಥ ಸಾಮರ್ಥ್ಯ ಪಡೆದಿದೆ. ಮುಂದಿನ ಭಾಗದಲ್ಲಿ ಎಪ್ಪತ್ತರ ದಶಕದಲ್ಲಿ ಮಹಿಳೆಯರಿಗೆ ದೊರೆತ ಉನ್ನತ ಶಿಕ್ಷಣದಿಂದಾಗಿ ಪಾಶ್ಚಾತ್ಯ ಸ್ತ್ರೀವಾದಿ ಚಿಂತನೆಗಳು ಇವರ ಮೇಲೆ ಪ್ರಭಾವವನ್ನು ಬೀರಿರುವುದರ ಹಿನ್ನೆಲೆಯ ಬಗ್ಗೆ ಚರ್ಚಿಸಿದ್ದಾರೆ.

ಸುಮಿತ್ರಾಬಾಯಿ ಬಿ.ಎನ್. ಅವರ "ಸಾರ್ವತ್ರಿಕದೆಡೆಗೆ" ಎಂಬ ಕೃತಿಯಲ್ಲಿ ಮಹಿಳಾ ಕಾವ್ಯದ ಒಟ್ಟು ಸ್ವರೂಪ ಹಾಗೂ ವಿಸ್ತಾರಗಳ ಪರಿಚಯವನ್ನು ಮಾಡಿಕೊಳ್ಳುವ ದೃಷ್ಟಿಯಿಂದ ಪ್ರಾತಿನಿಧಿಕವಾಗಿ ತೋರುವ ಸುಮಾರು ಹನ್ನೆರಡು ಕವಯತ್ರಿಯರ ಸಂಕಲನಗಳಿಂದ ಆಯ್ದ ಕವಿತೆಗಳನ್ನು ಮೊದಲಿಗೆ ಅಭ್ಯಾಸಕ್ಕೆ ತೆಗೆದುಕೊಂಡಿದ್ದು, ಈ ಸಂಕಲನಗಳಲ್ಲಿ ಕಂಡುಬರುವ ಕಾವ್ಯ ಪರಿಣಿತಿ, ಅಭಿವ್ಯಕ್ತಿಯಲ್ಲಿನ ಪ್ರೌಢತೆ, ಭಾವ, ವಿಚಾರಗಳ ಸಮತೋಲನ ಇತ್ಯಾದಿಗಳನ್ನು ಮಾನದಂಡವಾಗಿಟ್ಟುಕೊಂಡು ಕೃತಿಗಳನ್ನು ಆ ಮೂಲಕ ಕವಿಗಳನ್ನು ಸ್ಥೂಲವಾಗಿ ಮೂರು ವಿಭಾಗ ಮಾಡಿಕೊಂಡಿದ್ದಾರೆ. (ಉದಾ: ಬಿ.ಟಿ. ಲಲಿತಾ ನಾಯಕ, ಸರಸ್ವತಿಗೌಡ, ಎಚ್.ಎಸ್. ಮುಕ್ತಾಯಕ್ಕ, ಪ್ರತಿಭಾನಂದಕುಮಾರ–ಭಾಗ೨, ಶೈಲಜಾ ಉಡಚಣ, ಶಶಿಕಲಾ ವಸ್ತ್ರದ, ಹೇಮ ಪಟ್ಟಣಶೆಟ್ಟಿ, ಕಮಲಾ ಹೆಮ್ಮಿಗೆ, ಸ. ಉಷಾ–ಭಾಗ–೨, ಕಮಲಾ ಹೆಮ್ಮಿಗೆ, ಡಿ. ವಿಜಯ.

ಮೊದಲ ವಿಭಾಗದಲ್ಲಿನ ಕವಿಗಳು ಯಾವುದೇ ವಸ್ತುವಿರಲಿ ನಿಸ್ಸಂಕೋಚವಾಗಿ, ನಿರ್ಭಿಡೆಯಿಂದ ಸರಳವಾಗಿ, ನೇರವಾಗಿ ಹೇಳಬಲ್ಲರು. ಈ ಮನೋಧರ್ಮ ಇಲ್ಲಿನ ಭಾಷೆಯಲ್ಲಿ, ನಿರೂಪಣೆಯಲ್ಲಿ ವ್ಯಕ್ತವಾಗುತ್ತದೆ. ಪುರುಷ ಪ್ರಪಂಚದಲ್ಲಿ ಸ್ತ್ರೀಯ ಸ್ಥಿತಿಗತಿಗಳು ಹೇಗಿವೆ ಎಂಬ ಬಗ್ಗೆ ಇವರೆಲ್ಲರಲ್ಲೂ ತೀವ್ರವಾದ ಎಚ್ಚರವಿದೆ. ಈ ಅರಿವು ಕೆಲವೆಡೆ ರೋಷ, ತಿರಸ್ಕಾರಗಳಾಗಿ, ಕೆಲವೆಡೆ ಆತ್ಮಾನುಕಂಪನವಾಗಿ, ಕೆಲವೆಡೆ ವ್ಯಂಗ್ಯವಾಗಿ ಆತ್ಮ ವಿಮರ್ಶೆಯಾಗಿ ಕಾಣಿಸಿಕೊಳ್ಳುತ್ತವೆ ಎನ್ನುವಂತಹ ವಿಚಾರಗಳನ್ನು ವ್ಯಕ್ತಪಡಿಸಿದ್ದಾರೆ.

ಸುಮಿತ್ರಾಬಾಯಿ ಬಿ.ಎನ್. ಅವರ "ವಿಚಯ" ಎಂಬ ಕೃತಿಯಲ್ಲಿ ಸ್ತ್ರೀವಾದಿ ಚಿಂತನೆ, ಮಹಿಳಾ ಬರಹಗಳ ಅಧ್ಯಯನ ಮತ್ತು ಪುರುಷರ ರಚನೆಗಳನ್ನು ಕುರಿತ ಸ್ತ್ರೀವಾದಿ ನೆಲೆಯ ಓದುವಿಕೆ ಹೀಗೆ ಮೂರು ಉದ್ದೇಶಗಳಿಗೆ ಅನುಗುಣವಾಗಿ ಇಲ್ಲಿನ ಲೇಖನಗಳನ್ನು ವಿಂಗಡಿಸಲಾಗಿದ್ದು, ಸಾಹಿತ್ಯದ ಜೊತೆ ಸ್ತ್ರೀವಾದ ಹೊಂದಿರುವ ಸಂಬಂಧವನ್ನು ಚರ್ಚಿಸುವಾಗ ಪ್ರಚಲಿತ ವಿಮರ್ಶೆಯಲ್ಲಿ ರೂಢಿಯಲ್ಲಿರುವ ಸೃಜನಶೀಲತೆ, ಶ್ರೇಷ್ಠತೆ, ಮೌಲಿಕತೆ ಮುಂತಾದ ಶಬ್ದಗಳಲ್ಲಿ ವಿವರಿಸಿ ಬಿಡುವುದು ಸಾಧ್ಯವಿಲ್ಲ. ಈ ರೂಢಿಗತವಾದ ಪರಿಭಾಷೆ ಎಷ್ಟು ಸಮರ್ಪಕ? ಎಷ್ಟು ಔಚಿತ್ಯ ಹೊಂದಿದೆ?

ಇದು ಅವಶ್ಯವೆ? ಅಲ್ಲವೆ? ಎಂಬ ಪ್ರಶ್ನೆಗಳೂ ಸೇರಿದಂತೆ ಸಂಸ್ಕೃತಿಯನ್ನು ರಚಿಸುವ ಗುರಿಯಿರುವ ದೊಡ್ಡ ವ್ಯಾಪಕ ಸಂಬಂಧ ಸಾಹಿತ್ಯ-ಸ್ತ್ರೀವಾದಗಳ ನಡುವೆ ಇದೆ ಎನ್ನುವಂತಹ ವಿಚಾರಗಳನ್ನು ಚರ್ಚಿಸಲಾಗಿದೆ.

ಪ್ರೀತಿ ಶುಭಚಂದ್ರ ಅವರ "ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳವಳಿಗಳು" ಎಂಬ ಕೃತಿಯಲ್ಲಿ ಮಹಿಳಾ ಅಧ್ಯಯನವೆಂದರೆ ಮಹಿಳಾ ವಿಷಯಗಳನ್ನು ಮಹಿಳೆಯ ದೃಷ್ಟಿಕೋನದಿಂದ ಪ್ರಸ್ತಾಪಿಸುವುದೆಂದು ಅರ್ಥ ಮತ್ತು ನಿರ್ದಿಷ್ಟಗೊಳಿಸಿ ಹೇಳಬೇಕೆಂದರೆ ಮಹಿಳಾ ವಿಷಯಗಳನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ಪ್ರಸ್ತಾಪಿಸುವ ಕ್ರಮವೇ ಮಹಿಳಾ ಅಧ್ಯಯನದ ವಿಧಾನ. ಪಿತೃ ಪ್ರಧಾನತೆಯ ವಿಶ್ಲೇಷಣೆ, ಲಿಂಗಾಧಾರಿತ ಸಂಬಂಧಗಳ ಅಧ್ಯಯನದ ಮೂಲಕ ಲಿಂಗಾಧಾರಿತ ವ್ಯವಸ್ಥೆಯ ಪುನರ್ ಮೌಲ್ಯಮಾಪನಕ್ಕೆ ಬೇಕಾದ ಜ್ಞಾನವನ್ನು ಮಹಿಳಾ ಅಧ್ಯಯನ ಒದಗಿಸುತ್ತದೆ.

ಮಹಿಳಾ ವಿಷಯಗಳು ಮತ್ತು ಮಹಿಳಾ ಅಧ್ಯಯನಗಳಂತೆ ಸ್ತ್ರೀವಾದವು ಕೂಡ ಉಳಿದ ವಿಷಯಗಳ ಜೊತೆಗೆ ಸಂಬಂಧವನ್ನು ಕಲ್ಪಿಸಿಕೊಳ್ಳುವಲ್ಲಿ ಆಸಕ್ತವಾಗಿದೆ. ಸ್ತ್ರೀವಾದವೆಂದರೆ ಅದೊಂದು ಲೋಕಗ್ರಹಿಕೆ ಹಾಗೂ ವೈಚಾರಿಕ ರಚನೆ. ಪ್ರಪಂಚವನ್ನು ಪ್ರಧಾನ ವಾಹಿನಿಗಿಂತ ಭಿನ್ನವಾಗಿ, ಪರ್ಯಾಯವಾಗಿ ನೋಡಬಲ್ಲ ದೃಷ್ಟಿಕೋನವನ್ನು ಸ್ತ್ರೀವಾದ ಪ್ರತಿನಿಧಿಸುತ್ತದೆ. ಪ್ರಪಂಚವನ್ನು ಕುರಿತು ಸ್ತ್ರೀವಾದಿ ಗ್ರಹಿಕೆ ತನ್ನದೇ ಆದ ಪ್ರತ್ಯೇಕ ನಂಬಿಕೆ ಹಾಗೂ ಮೌಲ್ಯವುಳ್ಳ ವ್ಯವಸ್ಥೆಯನ್ನು ಹೊಂದಿದೆ. ಮಹಿಳಾ ಚಳವಳಿಗಳ ಹಿನ್ನೆಲೆಯಲ್ಲಿ ಈ ನಂಬಿಕೆ ಹಾಗೂ ಮೌಲ್ಯಗಳ ಸ್ಪಷ್ಟವಾದ ಚಿತ್ರಣ ದೊರೆಯುತ್ತದೆ.

ಸ್ತ್ರೀವಾದವು ಮಹಿಳೆಯರ ಸಬಲೀಕರಣ, ಬಿಡುಗಡೆ, ಸಮಾನತೆ, ದಬ್ಬಾಳಿಕೆ ಹಾಗೂ ತಾರತಮ್ಯತೆಯಿಂದ ಮುಕ್ತಿ ಮುಂತಾದವನ್ನು ಸ್ಪಷ್ಟ ತಾತ್ವಿಕತೆಯ ಆಧಾರದ ಮೇಲೆ ವ್ಯಾಖ್ಯಾನಿಸುತ್ತದೆ ಎನ್ನುವಂತಹ ವಿಚಾರಗಳನ್ನು ತಿಳಿಸುತ್ತಾ ಮುಂದೆ ಸ್ತ್ರೀವಾದದ ಹುಟ್ಟು-ಬೆಳವಣಿಗೆಯನ್ನು ಕುರಿತಾಗಿ ಸಂಕ್ಷಿಪ್ತವಾದ ಮಾಹಿತಿಯನ್ನು ನೀಡಲಾಗಿದೆ.

ಪ್ರಭಾವತಿ ಎಸ್.ವಿ. "ಕನ್ನಡ ಮಹಿಳಾ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು" ಎಂಬ ಕೃತಿಯಲ್ಲಿ ಹೇಳುವಂತೆ ಸಾಮಾನ್ಯವಾಗಿ ಪಾಶ್ಚಾತ್ಯ ದೇಶಗಳಿಂದ ಆಮದಾದುದು ಎಂದು ನಾವೆಲ್ಲಾ ಭಾವಿಸಿರುವ ಸ್ತ್ರೀವಾದದ ಮೂಲ ಬೇರುಗಳು ಆ ಹೆಸರೊಂದಿಲ್ಲದೆ ನಮ್ಮ ದೇಶದ ಸಾಹಿತ್ಯದಲ್ಲೇ ತನ್ನ ಮೂಲ ಬೇರುಗಳನ್ನು ಹೊಂದಿದೆ ಎನ್ನುವಂತಹ ವಿಚಾರಗಳನ್ನು ಈ ಕೃತಿಯಲ್ಲಿ ಚರ್ಚಿಸಲಾಗಿದೆ.

ಶ್ರೀಮತಿ ಎಚ್.ಎಸ್. ಅವರ "ಸ್ತ್ರೀವಾದ" ಎಂಬ ಕೃತಿಯಲ್ಲಿ ಲಿಂಗತಾರತಮ್ಯದ ನೆಲೆಗಳ ಕುರಿತಾಗಿ ವಿವಿಧ ಮಹಿಳಾ ಅಧ್ಯಯನಕಾರರು ವಿಸ್ತೃತವಾಗಿ ಚರ್ಚಿಸಿರುವುದರ ಬಗ್ಗೆ ಸಂಕ್ಷಿಪ್ತ

ಮಾಹಿತಿಯನ್ನು ನೀಡಿದ್ದು, ಸ್ತ್ರೀಯರ ಮೇಲೆ ಪುರುಷ ಪ್ರಧಾನ ಸಮಾಜ ಕಟ್ಟಿರುವ ಮಿಥ್‌ಗಳನ್ನು ವೈಚಾರಿಕ ನೆಲೆಯಲ್ಲಿ ವಿಶ್ಲೇಷಿಸುವ ಪ್ರಯತ್ನವನ್ನು ಮಾಡಲಾಗಿದೆ.

ಉಷಾ ಪಿ.ರೈ. ಅವರ "ಮಧ್ಯಂತರ" ಎಂಬ ಕೃತಿಯಲ್ಲಿ ಚರ್ಚಿಸುವಂತೆ ಎಂಬತ್ತರ ದಶಕದಿಂದೀಚೆಗೆ ನಮ್ಮಲ್ಲಿ ಸ್ತ್ರೀವಾದಿ ಚಿಂತನೆ ಬಹಳ ತೀವ್ರವಾದ ಸಂವೇದನೆಗಳೊಂದಿಗೆ ಪ್ರಾರಂಭವಾಯಿತೆಂದು ಹೇಳಬಹುದು. ಪ್ರಾರಂಭದಲ್ಲಿ ಇದು ಸಂಪೂರ್ಣ ಪಾಶ್ಚಾತ್ಯ ಸ್ತ್ರೀವಾದಿ ಚಿಂತನೆಗಳನ್ನು ಆಮದು ಮಾಡಿಕೊಂಡೇ ಆರಂಭವಾದರೂ ಕ್ರಮೇಣ ಭಾರತೀಯ ನೆಲೆಯಲ್ಲಿ ಭಾರತೀಯ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಸ್ತ್ರೀಪರ ದನಿಗಳನ್ನು ಅಭಿವ್ಯಕ್ತಿಸುವ, ಗುರುತಿಸುವ ಪ್ರಯತ್ನ ನಡೆದು ಭಾರತೀಯ ಸ್ತ್ರೀವಾದಿ ಚಳವಳಿಗೆ ಹೊಸ ದಿಕ್ಕನ್ನು, ಹೊಸ ಆಯಾಮವನ್ನು ಒದಗಿಸಿದೆ.

ಭಾರತದ ಸ್ತ್ರೀ ಸಮುದಾಯ ಲಿಂಗಬೇಧದ ಸಂಘರ್ಷಗಳನ್ನಷ್ಟೇ ಅಲ್ಲದೆ ವರ್ಣ ಹಾಗೂ ವರ್ಣಬೇಧಗಳ ನೋವನ್ನು ಅನುಭವಿಸಿವೆ. ಈ ಬಹುಮುಖ ಸಂಘರ್ಷದ ವಾಸ್ತವಿಕತೆಯನ್ನು ಗುರುತಿಸಿಕೊಂಡೇ ನಮ್ಮ ಸ್ತ್ರೀವಾದಿ ಚಳವಳಿ ನಡೆದಿದೆ. ಇದನ್ನು ಸ್ತ್ರೀವಾದಿ ಚಳವಳಿ, ಸ್ತ್ರೀವಾದಿ ಸಂವೇದನೆ, ಸ್ತ್ರೀವಾದಿ ಚಿಂತನೆ, ಸ್ತ್ರೀಪರ ಬರಹಗಳು, ಮಹಿಳಾ ಅಭಿವ್ಯಕ್ತಿ ಹೀಗೆ ಏನಾದರೂ ಹೆಸರಿಸಬಹುದು. ಇಲ್ಲಿ ಹೆಸರಿಗಿಂತ ಮುಖ್ಯವಾಗಿ ನಾವು ನಮ್ಮಲ್ಲಿ ಬೆಳೆದ ಸ್ತ್ರೀವಾದವನ್ನು ಹೇಗೆ ಅರ್ಥೈಸಿಕೊಂಡಿದ್ದೇವೆ ಎನ್ನುವುದು ಮುಖ್ಯ.

ಸಾಹಿತ್ಯದಲ್ಲಿ ರೂಪು ತಳೆದ ನವ್ಯಪಂಥ, ನವ್ಯೋತ್ತರವಾದ ದಲಿತಪಂಥ, ಬಂಡಾಯಪಂಥ ಅಥವಾ ಪ್ರಗತಿಶೀಲಪಂಥ ಚಳವಳಿಗಳು ಮಹಿಳಾ ಬರಹದ ಮೇಲೆ ನೇರ ಪರಿಣಾಮ ಬೀರಲಿಲ್ಲವಾದರೂ ಸ್ತ್ರೀವಾದಿ ಚಳವಳಿ ಲೇಖಕಿಯರ ಬರಹಗಳನ್ನು ನೇರವಾಗಿ ಸ್ಪರ್ಶಿಸಿವೆ. ಸ್ವಾತಂತ್ರ್ಯಪೂರ್ವದ ಲೇಖಕಿಯರು ಅಂದಿನ ಮಹಿಳೆಯರ ಸಮಸ್ಯೆಗಳ ಬಗ್ಗೆಯೇ ಬರೆದಿದ್ದಾರೆ. ಎಪ್ಪತ್ತರ ದಶಕದ ಲೇಖಕಿಯರು ಸಾಮಾಜಿಕ ಸಮಸ್ಯೆಗಳತ್ತ ಗಮನ ಹರಿಸಿದ್ದಾರೆ. ವ್ಯವಸ್ಥೆಯ ವಿರುದ್ಧ ಸಿಡಿದೇಳುವ ಧೈರ್ಯ ತೋರಿದ್ದಾರೆ. ಪ್ರಾದೇಶಿಕ ಭಾಷೆಯ ಬಳಕೆ, ದಲಿತ ಹಾಗೂ ಶೋಷಿತ ವರ್ಗದ ಮಹಿಳೆಯ ಜೀವನವನ್ನು ಚಿತ್ರಿಸುವಲ್ಲಿ ಸಫಲರಾಗಿದ್ದಾರೆ ಎನ್ನುವಂತಹ ವಿಚಾರಗಳ ಕುರಿತಾಗಿ ಈ ಕೃತಿಯಲ್ಲಿ ಚರ್ಚಿಸಲಾಗಿದೆ.

ಗಿರಿಜಾಶಾಸ್ತ್ರೀ ಅವರು "ಆಧುನಿಕ ಕನ್ನಡ ಸಣ್ಣ ಕತೆಗಳ ಸ್ತ್ರೀವಾದಿ ಅಧ್ಯಯನ" ಎಂಬ ಶೀರ್ಷಿಕೆಯಡಿ ಮುಂಬಯಿ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧವಾಗಿದೆ. ಈ ಪ್ರಬಂಧದಲ್ಲಿ ಗಿರಿಜಾಶಾಸ್ತ್ರೀ ಅವರು ಆಧುನಿಕ ಕನ್ನಡ ಕಥಾ ಸಾಹಿತ್ಯದ ವಿಸ್ತಾರ ಪರದೆಯಿಂದ ತಮ್ಮ ಉದ್ದೇಶದ ಅಧ್ಯಯನಕ್ಕೆ ಹೊಂದಿಕೊಳ್ಳುವಂತೆ ಕೆಲವು ಆಯ್ದ ಮಾದರಿಗಳನ್ನು ರೂಪಿಸಿಕೊಂಡು ಅನ್ವಯಿಕ ವಿಮರ್ಶೆಗೆ ಒಳಪಡಿಸಿದ್ದಾರೆ. ಕನ್ನಡದ ಸ್ತ್ರೀವಾದಿ ಕಥೆಗಳಿಗೆ ಮೊದಲ ಬಾರಿಗೆ ಬುನಾದಿಯನ್ನು ಹಾಕಿದ ಕತೆಗಾರ್ತಿಯರಾದ ರಾಜಲಕ್ಷ್ಮಿ ಎನ್.ರಾವ್, ವೀಣಾಶಾಂತೇಶ್ವರ, ವೈದೇಹಿ ಮುಂತಾದವರ ಸಾಹಿತ್ಯವನ್ನು ತಮ್ಮ ಅಧ್ಯಯನಕ್ಕೆ ಬಳಸಿಕೊಂಡಿದ್ದಾರೆ.

ಲತಾ ಅಭಯ ಅವರ "ಕಲ್ಲು ಬೆಂಕಿಗಳಿಂದ ನಲಿವು ಬೆಳಕಿನೆಡೆಗೆ" ಎಂಬ ಕೃತಿಯಲ್ಲಿ ಲತಾ ಅವರ ಈ ಸಂಶೋಧನಾ ನಿಬಂಧ ಒಂದು ಹೊಸ ತಾತ್ವಿಕ ನೆಲೆಗಟ್ಟನ್ನು ಸಮರ್ಪಕವಾಗಿ ರೂಪಿಸಿದ್ದು, ಕನ್ನಡದಲ್ಲಿ ಪುರಾಣ ಸ್ತ್ರೀವಾದವನ್ನು ಕುರಿತು ರಚನೆಗೊಂಡ ಮೊದಲ ಪಿಎಚ್.ಡಿ. ಮಹಾಪ್ರಬಂಧ ಎನ್ನುವ ಚಹರೆಯೊಂದಿಗೆ ಆಧುನಿಕ ಸಂದರ್ಭದಲ್ಲಿ ಒಟ್ಟು ಸ್ತ್ರೀವಾದದ ತಾತ್ವಿಕ ನೆಲೆಯ ದಿಕ್ಕು-ದಿಸೆಗಳನ್ನು ಸೂಚಿಸುವ ಮತ್ತು ಬದಲಿಸುವ ಶಕ್ತಿ ಸಾಮರ್ಥ್ಯವನ್ನು ಈ ಅಧ್ಯಯನ ಹೊಂದಿದ್ದು, ಪುರಾಣ ಸ್ತ್ರೀವಾದದ ನಿರ್ವಚನವನ್ನು ಕುರಿತು ಜಾಗತಿಕ ಮತ್ತು ಭಾರತೀಯ ಮಟ್ಟದಲ್ಲಿ ನಡೆದಿರುವ ಅಧ್ಯಯನಗಳ ಹಿನ್ನೆಲೆಯಲ್ಲಿ ವಿವೇಚಿಸಲಾಗಿದೆ.

ಮುಂದೆ ಕೈಗೊಳ್ಳಲಾದ ವಿಶ್ಲೇಷಣೆಯಲ್ಲಿ ಪುರಾಣ ಭಂಜನೆ ಮತ್ತು ನವ ಪುರಾಣ ನಿರ್ಮಾಣದ ದೃಷ್ಟಿ ಲೇಖಕಿಯರ ಕಥನಗಳಲ್ಲಿ ಕಾಣಿಸಿದ ಬಗೆಯನ್ನು ಅದರ ಇತಿಮಿತಿಗಳನ್ನು ಚರ್ಚಿಸಿದ್ದಾರೆ. ಉದಾ: ಅಹಲ್ಯೆಯ ಪಾತ್ರ, ಎಸ್.ವಿ. ಪ್ರಭಾವತಿ ಮತ್ತು ಶಕುಂತಲಾ ಭಟ್ ಅವರ ಅಹಲ್ಯೆ ಕಾದಂಬರಿಗಳಲ್ಲೂ ಪುನರ್ ವ್ಯಾಖ್ಯಾನಗೊಂಡ ಭಿನ್ನ ಬಗೆಗಳನ್ನು ಪರಿಶೀಲಿಸುವಾಗ ಸ್ತ್ರೀಪರ ದೃಷ್ಟಿಕೋನ ಇಲ್ಲಿ ಪ್ರಧಾನವಾಗಿದ್ದರೂ ಪಿತೃ ಪ್ರಧಾನ ಸಮಾಜದ ಮೌಲ್ಯಗಳು ಅವರ ಸೃಜನಶೀಲತೆಯನ್ನು ಹೇಗೆ ನಿಯಂತ್ರಿಸಿದೆ ಎಂಬುದನ್ನು ಗುರುತಿಸಲಾಗಿದೆ.

ಮುನಿಶಾಮಪ್ಪ ಎ. ಅವರ "ಸಾಮಾಜಿಕ ಚಳವಳಿಗಳ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯ" ಈ ಕೃತಿಯಲ್ಲಿ ಮಹಿಳಾ ಚಳವಳಿಯ ಉದ್ದೇಶಗಳು ಮತ್ತು ಈ ಚಳವಳಿಯ ಪ್ರಭಾವದಿಂದ ಸೃಷ್ಟಿಯಾದ ಮಹಿಳಾ ಸಾಹಿತ್ಯವನ್ನು ಕುರಿತ ವಿಶ್ಲೇಷಣೆ ಹಾಗೂ ಸ್ತ್ರೀವಾದಿ ಧೋರಣೆಗೆ ಬದ್ಧವಾದ ಕೃತಿಗಳ ಸ್ವರೂಪವನ್ನು ಗುರುತಿಸುವ ಕೆಲಸವನ್ನು ಮಾಡಿದ್ದಾರೆ.

ಸಾಮಾಜಿಕ ಚಳವಳಿಗಳಿಗೆ ಕನ್ನಡ ಸಾಹಿತ್ಯ ಸ್ಪಂದಿಸಿದ ಬಗೆ, ಪಡೆದುಕೊಂಡ ಪ್ರೇರಣೆ, ತಾಳಿದ ರೂಪಗಳು, ತಾತ್ವಿಕ ದೃಷ್ಟಿ ಧೋರಣೆಗಳನ್ನು ಶರಣರ ವಚನಗಳಿಂದ ಹಿಡಿದು ದಲಿತ, ಬಂಡಾಯ, ಸ್ತ್ರೀವಾದದವರೆಗೆ ಸೂಕ್ಷ್ಮವಾಗಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ರಮೇಶ ಜೆ.ಕೆ. ಅವರು "ಸಮಕಾಲೀನ ಪ್ರಜ್ಞೆ ಮತ್ತು ಕನ್ನಡ ಪೌರಾಣಿಕ ಕಾದಂಬರಿಗಳು" ಎನ್ನುವ ಸಂಶೋಧನಾ ಪ್ರಬಂಧದಲ್ಲಿ ಪುರಾಣದ ಲಕ್ಷಣ, ಸ್ವರೂಪ, ಉದ್ದೇಶಗಳನ್ನು ಕುರಿತು ಕನ್ನಡ ವಿದ್ವಾಂಸರು ಸಾಂಪ್ರದಾಯಿಕವಾಗಿ ಹೇಳಿರುವ ಮುಖ್ಯಾಂಶಗಳನ್ನೆಲ್ಲ ಅಚ್ಚುಕಟ್ಟಾಗಿ ಸಂಗ್ರಹಿಸಿದ್ದು, ಎಚ್.ವಿ. ಸಾವಿತ್ರಮ್ಮ, ನಳಿನಿಮೂರ್ತಿ, ಎಚ್.ವಿ. ಪ್ರಭಾವತಿ, ಶಕುಂತಲಾ ಭಟ್ ಇವರ ಪೌರಾಣಿಕ ಕಾದಂಬರಿಗಳು ಪುರಾಣದ ಸ್ತ್ರೀ ಪಾತ್ರಗಳನ್ನು ಮುರಿದು ಕಟ್ಟುವ ಹಾಗೂ ಸಮಕಾಲೀನ ಆಶೋತ್ತರಗಳನ್ನು ಬಿಂಬಿಸುವ ಪುರಾಣಗಳಲ್ಲಿ ಅಂತರ್ಗತವಾಗಿರುವ ಅವೈಜ್ಞಾನಿಕತೆ, ಅವೈಚಾರಿಕತೆ ಮತ್ತು ವೈಭವೀಕರಣವನ್ನು ಅಲ್ಲಗಳೆದು ಸಮಕಾಲೀನ ಅಗತ್ಯಗಳಿಗೆ ಕೃತಿಗಳನ್ನು ಪುನರ್ ಸೃಷ್ಟಿಸುವ ಕೆಲಸದಲ್ಲಿ ಯಶಸ್ವಿ ಪ್ರಯತ್ನವಾಗಿದೆ. ಕೆಲವರು ಪುರಾಣದ ಕಥೆಗಳನ್ನು ಪುನರ್ ಸೃಷ್ಟಿ ಮಾಡುತ್ತಲೇ ಪ್ರತಿಗಾಮಿತನವನ್ನು ಮೆರೆದ ನಿದರ್ಶನಗಳನ್ನು ಈ ಕೃತಿ ಸಾಧಾರಣವಾಗಿ ಮಂಡಿಸುತ್ತದೆ.

ಶ್ರೀಮತಿ ಎಚ್.ಎಸ್. ಅವರು ಸಂಪಾದನೆಯ "ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ" ಎಂಬ ಕೃತಿಯು ಸಮಗ್ರ ಮಹಿಳಾ ಸಾಹಿತ್ಯ ಚರಿತ್ರೆಗೆ ಹಿಡಿದ ಕನ್ನಡಿಯಾಗಿದ್ದು, ಕನ್ನಡ ಸಾಹಿತ್ಯದಲ್ಲಿ ಸ್ತ್ರೀವಾದಿ ಚಿಂತನೆಗಳ ಹುಟ್ಟಿಗೆ ಕಾರಣವಾದ ಪಾಶ್ಚಾತ್ಯ ಸ್ತ್ರೀವಾದಿ ಚಿಂತನೆಗಳ ಪ್ರಭಾವ-ಪ್ರೇರಣೆಗಳ ಬಗ್ಗೆ ವಿಶ್ಲೇಷಿಸಿದ್ದು, ಆರಂಭಿಕ ಸ್ತ್ರೀವಾದಿ ಲೇಖಕಿಯರು ಕಾವ್ಯವನ್ನೇ ಏಕೆ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಮಾಡಿಕೊಂಡರು ಎಂಬುದಕ್ಕೆ ವಿವಿಧ ವಿದ್ವಾಂಸರುಗಳು ನೀಡಿರುವ ಹೇಳಿಕೆಯನ್ನು ಸಂಗ್ರಹಿಸಿಕೊಟ್ಟಿದ್ದಾರೆ.

ಸ್ತ್ರೀವಾದಿ ಸಾಹಿತ್ಯದ ಪ್ರವರ್ಧಮಾನಕ್ಕೆ ದುಡಿದ ಶೂದ್ರ, ಸಂಕ್ರಮಣದಂತಹ ಪತ್ರಿಕೆಗಳ ಪಾತ್ರವನ್ನು ಸಹ ಈ ಕೃತಿಯಲ್ಲಿ ವಿಶ್ಲೇಷಿಸಲಾಗಿದೆ. ಕೆಲವು ಸ್ತ್ರೀವಾದಿ ಲೇಖಕಿಯರ ಕಾವ್ಯ, ಕಥೆ, ಕಾದಂಬರಿಗಳನ್ನು ಮುಂದಿನ ಭಾಗದಲ್ಲಿ ವಿಶ್ಲೇಷಿಸಿ ಅವರ ಕಾವ್ಯದಲ್ಲಿನ ತಾತ್ವಿಕ ಚಿಂತನೆಗಳ ಪ್ರಾಮುಖ್ಯತೆಯನ್ನು ಸಹ ಚರ್ಚಿಸಲಾಗಿದೆ. ಪಾಶ್ಚಾತ್ಯ ಸ್ತ್ರೀವಾದಿ ಚಿಂತನೆಗಳಿಂದ ಪ್ರಭಾವಿತರಾದ ದೇಸಿ ಚಿಂತಕಿಯರು ಪಾಶ್ಚಾತ್ಯ ಸ್ತ್ರೀವಾದಿ ಕೃತಿಗಳನ್ನು ಅನುವಾದಿಸಿಕೊಡುವ ಮೂಲಕ ಸ್ತ್ರೀವಾದಿ ವಿಚಾರಗಳ ಬಗ್ಗೆ ಸ್ಪಷ್ಟ ಪರಿಕಲ್ಪನೆ ಮೂಡಿಸುವುದಕ್ಕೆ ನೆರವಾದರು ಎಂಬ ವಿಚಾರಗಳನ್ನು ಈ ಕೃತಿ ಒಳಗೊಂಡಿದೆ.

ಉಷಾರಾಣಿ ತೆಗ್ಗಿನಮಠ ಅವರ "ಮಹಿಳಾ ಸಾಹಿತ್ಯ : ಅಭಿವ್ಯಕ್ತಿ ಕ್ರಮದ ತಾತ್ವಿಕ ಸ್ವರೂಪ" ಎಂಬ ಸಂಶೋಧನಾ ಪ್ರಬಂಧದಲ್ಲಿ ಹೇಳುವಂತೆ ಎಪ್ಪತ್ತರ ದಶಕದ ನಂತರ ಪುರುಷ ಪ್ರೇಣಿತ ನಿಲುವುಗಳಲ್ಲಿ ನಿರ್ಮಾಣಗೊಂಡ ವೇದ, ಉಪನಿಷತ್ತು, ರಾಮಾಯಣ, ಮಹಾಭಾರತ ಮುಂತಾದ ಕೃತಿಗಳಲ್ಲಿ ನಿರೂಪಿತವಾಗಿರುವ ಪಾತ್ರಗಳನ್ನು ಪುನರಾವಲೋಕನಕ್ಕೆ ಒಳಪಡಿಸುವುದು ಮಹಿಳಾ ಬರಹಗಾರರ ಪ್ರಧಾನ ಕಾಳಜಿಯಾಗಿದೆ. ಪುರಾಣಗಳಲ್ಲಿ ಯಾವ ಮೌಲ್ಯಗಳನ್ನು ಶ್ರೇಷ್ಠವೆಂದು ಪರಿಗಣಿಸಲಾಗಿತ್ತೋ ಅಂತಹ ಮೌಲ್ಯಗಳನ್ನು ಖಂಡಿಸುವ ಮರುವ್ಯಾಖ್ಯಾನಕ್ಕೆ ಒಳಪಡಿಸುವ ಕಾರ್ಯ ಮುಂದಾಯಿತು. ಶೋಷಿತ ಪಾತ್ರಗಳಾದ ಸೀತೆ, ದ್ರೌಪದಿ, ಅಹಲ್ಯೆ, ರೇಣುಕೆ, ಶಕುಂತಲೆ ಮುಂತಾದ ಪಾತ್ರಗಳನ್ನು ಮಾಲತಿ ಪಟ್ಟಣಶೆಟ್ಟಿ, ಸುಕನ್ಯಾ ಮಾರುತಿ, ವಿಜಯ ದಬ್ಬೆ, ಶಶಿಕಲಾ ವೀರಯ್ಯಸ್ವಾಮಿ ಮುಂತಾದವರು ತಮ್ಮದೇ ಆದ ದೃಷ್ಟಿಕೋನದಲ್ಲಿ ಪುನರಾವಲೋಕನಕ್ಕೆ ಒಳಪಡಿಸಿದ್ದಾರೆ.

ಉಷಾ ಸ., ಪುಷ್ಪ ಎಚ್.ಎಲ್. ಅವರು ಪೌರಾಣಿಕ ಪಾತ್ರಗಳನ್ನು ಕಾವ್ಯದ ಹಿನ್ನೆಲೆಗೆ ಬಳಸಿಕೊಂಡು ಸತ್ವಯುತ ಪಾತ್ರಗಳನ್ನು ಪ್ರತಿಭಟನಾತ್ಮಕ ಪಾತ್ರಗಳನ್ನು ಕಟ್ಟಿಕೊಟ್ಟಿದ್ದಾರೆ. ಹೆಣ್ಣು ಪಾತ್ರಗಳನ್ನು ತ್ಯಾಗ, ಸಹನಶೀಲೆಯಾಗಿ, ಪತಿವ್ರತೆಯಾಗಿ ರೂಪಿಸಲ್ಪಟ್ಟ ಅಥವಾ ಆರೋಪಿಸಲ್ಪಟ್ಟ ಸಾಂಪ್ರದಾಯಿಕ ಮನೋಭಾವನೆಗಳನ್ನು ಕತೆ, ಕಾದಂಬರಿಗಳನ್ನು ಚರ್ಚೆಗೆ ಒಳಪಡಿಸಲಾಗಿದೆ.

ನಾಗಲಕ್ಷ್ಮಿ ಕೆ.ಎಂ. ಅವರು "ಎರಡು ದಶಕಗಳ ಮಹಿಳಾ ಕಾವ್ಯದ ಪರಿವರ್ತನೆಗಳು" ಎಂಬ ಸಂಶೋಧನಾ ಪ್ರಬಂಧದಲ್ಲಿ ೧೯೮೦ರಿಂದ ೧೯೯೦ರವರೆಗೆ ಈ ಎರಡು ದಶಕಗಳಲ್ಲಿ ರಚನೆಯಾದ

ಮಹಿಳಾ ಕಾವ್ಯವನ್ನು ಅನ್ವಯಿಕ ವಿಮರ್ಶೆಗೆ ಒಳಪಡಿಸಿದ್ದು, ತಮ್ಮ ಕಾಲಕ್ಕೆ, ತಮ್ಮ ಬದುಕಿಗೆ ಸ್ಪಂದಿಸಿದ ರೀತಿಯನ್ನು ತಿಳಿಸುವುದಲ್ಲದೇ ವಿಶಿಷ್ಟವಾದ ಸ್ತ್ರೀ ಸಂವೇದನೆಯು ಒಡಮೂಡಿರುವ ರೀತಿಯನ್ನು ಅದು ಕಾಲದಿಂದ ಕಾಲಕ್ಕೆ, ವ್ಯಕ್ತಿಯಿಂದ ವ್ಯಕ್ತಿಗೆ ಬದಲಾದುದನ್ನು ತಿಳಿಸಲಾಗಿದೆ.

ಈ ಪ್ರಬಂಧದ ಕೊನೆಯಲ್ಲಿ ಕೆಲವು ಸ್ತ್ರೀವಾದಿ ಲೇಖಕಿಯರ ಸಂದರ್ಶನದ ಸಾರಾಂಶವನ್ನು ನೀಡಿದ್ದಾರೆ. ಇದು ನನ್ನ ಅಧ್ಯಯನ ವಿಷಯಕ್ಕೆ ಉಪಯುಕ್ತವಾಗಿದೆ. ಈ ಮೇಲೆ ವಿಶ್ಲೇಷಿಸಲಾಗಿರುವ ಕೃತಿಗಳಲ್ಲಿ ಕೆಲವು ಪ್ರಕಟಿತ ಸಂಶೋಧನಾ ಪ್ರಬಂಧಗಳಾಗಿದ್ದು ಈ ಭಾಗದಲ್ಲಿ ಅಪ್ರಕಟಿತ ಸಂಶೋಧನಾ ಪ್ರಬಂಧಗಳನ್ನಷ್ಟೆ ವಿಶ್ಲೇಷಣೆಗೆ ಒಳಪಡಿಸುತ್ತೇನೆ.

**೨.೧.೧. ಅಪ್ರಕಟಿತ ಪಿಎಚ್.ಡಿ. ಅಧ್ಯಯನ ಪ್ರಬಂಧಗಳು :**

ಸೌಮ್ಯ ಡಿ.ಕೆ. ಅವರು "ಗೀತಾ ನಾಗಭೂಷಣ ಅವರ ಕಾದಂಬರಿಗಳಲ್ಲಿ ಪ್ರತಿಭಟನಾತ್ಮಕ ನೆಲೆಗಳು" ಎಂಬ ಶೀರ್ಷಿಕೆಯಡಿ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗಿದೆ. ಇದರಲ್ಲಿ ಗೀತಾ ನಾಗಭೂಷಣ ಅವರ ಹಸಿಮಾಂಸ ಹದ್ದುಗಳು, ಆಸರೆಗಳು, ಬದುಕು ಕಾದಂಬರಿಗಳ ವ್ಯಾಪ್ತಿಯೊಂದಿಗೆ ಪ್ರತಿಭಟನೆಯ ನೆಲೆಗಳನ್ನು ಹುಡುಕುವ ಪ್ರಯತ್ನವಿದೆ. ಈ ಕಾದಂಬರಿಗಳು ದಲಿತ ಬಂಡಾಯ ಮತ್ತು ಸ್ತ್ರೀವಾದಿ ಪ್ರಜ್ಞೆಯನ್ನು ಒಳಗೊಂಡಿವೆ. ಆದ್ದರಿಂದ ಸ್ತ್ರೀವಾದಿ ದೃಷ್ಟಿಕೋನವನ್ನು ಬಿಟ್ಟು ದಲಿತ ಬಂಡಾಯದ ಹಿನ್ನೆಲೆ, ದಲಿತ ಬಂಡಾಯವನ್ನು ಬಿಟ್ಟು ಸ್ತ್ರೀವಾದಿ ಹಿನ್ನೆಲೆಯನ್ನು ನೋಡಲಾಗದು. ಏಕೆಂದರೆ ಈ ಎರಡೂ ಪ್ರಜ್ಞೆಗಳು ಸಹ ಒಂದರೊಳಗೊಂದು ಸೇರಿಹೋಗಿವೆ. ಈ ಎರಡೂ ವೈದಾನಿಕತೆಯನ್ನು ಈ ಪ್ರಬಂಧದಲ್ಲಿ ಅನುಸರಿಸಲಾಗಿದೆ.

ಸಾಮಾಜಿಕ ನೆಲೆಯಲ್ಲಿ ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಯೇ ರೂಪಿಸಿರುವಂತಹ ವರ್ಗ, ಲಿಂಗ, ಕುಟುಂಬ, ವಿವಾಹ, ದಾಂಪತ್ಯಗಳಲ್ಲಿನ ಹೆಣ್ಣನ್ನು ನಡೆಸಿಕೊಳ್ಳುವ ರೀತಿ ಮತ್ತು ಹೆಣ್ಣು ಪ್ರತಿಕ್ರಿಯೆ ನೀಡುವ ಕ್ರಮಗಳನ್ನು ಹಾಗೂ ಹೆಣ್ಣನ್ನು ತಾಯ್ತನ, ಜೋಗಿಣಿಯನ್ನಾಗಿ ವೈಭವೀಕರಿಸುವುದು, ಪ್ರಧಾನವರ್ಗ ಅಧೀನ ವರ್ಗಕ್ಕೆ ತಲೆಮಾರುಗಳಿಂದಲೂ ರೂಪಿಸಿರುವಂತಹ ನೀತಿ ನಿಯಮಗಳಿಗೆ, ರೀತಿ ರಿವಾಜುಗಳಿಗೆ ಕೆಳವರ್ಗದವರ ಹಾಗೂ ಸ್ತ್ರೀವಾದಿ ಲೇಖಕಿಯರ ಪ್ರತಿರೋಧವೇನು ಎಂಬುದನ್ನು ಈ ಪ್ರಬಂಧದಲ್ಲಿ ಚರ್ಚಿಸಲಾಗಿದೆ.

ಅರುಣಕುಮಾರಿ ಬಿ.ಎನ್. ಅವರು "ಆಧುನಿಕ ಮಹಿಳಾ ಕಾವ್ಯ ಸ್ತ್ರೀ ಸಂವೇದನೆಯ ನೆಲೆಗಳು" ಎಂಬ ಶೀರ್ಷಿಕೆಯಡಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಪ್ರಬಂಧ ಇದಾಗಿದ್ದು ಎಪ್ಪತ್ತರ ದಶಕದಿಂದ ಈಚೆಗೆ ಬರೆಯುತ್ತಿರುವ ಲೇಖಕಿಯರಲ್ಲಿ ಭಿನ್ನನೆಲೆಗಳು, ಆಲೋಚನೆಯ ಕ್ರಮಗಳು ಇರುವುದು ಮುಖ್ಯವಾದ ಅಂಶ. ಲೇಖಕಿಯರ ವಯೋಮಾನ, ಬೆಳೆದುಬಂದ ಪರಿಸರ, ಸಮುದಾಯ, ಸಮಾಜದೊಂದಿಗೆ ತಮ್ಮನ್ನು ತಾವು ಕಂಡುಕೊಂಡ ರೀತಿ ವಿಭಿನ್ನ

ಆಲೋಚನೆ ಮತ್ತು ದೃಷ್ಟಿಕೋನಗಳ ಒಟ್ಟಾರೆ ಅಂಶಗಳಿಂದ ಅವರ ಕಾವ್ಯಗಳಲ್ಲಿ ಮೂಡಿಬಂದಂತಹ ಸ್ತ್ರೀ ಸಂವೇದನೆಯ ನೆಲೆಗಳು ಯಾವ ಬಗೆಯವು ಎಂಬುದನ್ನು ಇಲ್ಲಿ ಗಮನಿಸಿ ಶಶಿಕಲಾ ವೀರಯ್ಯಸ್ವಾಮಿ, ಸವಿತಾ ನಾಗಭೂಷಣ, ಮಾಲತಿ ಪಟ್ಟಣಶೆಟ್ಟಿ, ಎಚ್.ಎಲ್. ಪುಷ್ಪ, ಪ್ರತಿಭಾ ನಂದಕುಮಾರ್ ಮುಂತಾದ ಸ್ತ್ರೀವಾದಿ ಲೇಖಕಿಯರ ಕವಿತೆಗಳಲ್ಲಿ ವ್ಯಕ್ತವಾಗಿರುವ ಸ್ತ್ರೀ ಸಂವೇದನೆಯ ಅಂಶ ಮತ್ತು ಆಶಯಗಳನ್ನು ಗುರುತಿಸುವ ಕಾರ್ಯವನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ.

ಮಂಗಳಾ ಪ್ರಿಯದರ್ಶಿನಿ ಅವರು "ವೈದೇಹಿ ಅವರ ಆಯ್ದ ಕಥೆಗಳು ಸ್ತ್ರೀವಾದಿ ನೋಟ" ಎಂಬ ಶೀರ್ಷಿಕೆಯಡಿಯಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಪ್ರಬಂಧವಾಗಿದೆ. ಕುಟುಂಬ ಹಾಗೂ 'ಪಿತೃ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣು' ಎಂಬ ಅಧ್ಯಾಯದಲ್ಲಿ ಪಿತೃ ಪ್ರಧಾನ ವ್ಯವಸ್ಥೆಯ ಸಮಾಜ ಮಹಿಳೆಗೆ ಆರೋಪಿಸಿರುವ ಮೌಲ್ಯಗಳನ್ನು ವೈಚಾರಿಕವಾದ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದ್ದು, ಧರ್ಮ ಎಂಬ ಮೂಲಭೂತವಾದಿತದಿಂದ ರಕ್ಷಣೆಯನ್ನು ನೀಡುವ ನೆಪದಲ್ಲಿ ಭಕ್ತನಾಗಿ ಪ್ರಧಾನ ವರ್ಗ ಮತ್ತು ಪುರುಷ ಲಿಂಗಗಳು ಹೆಣ್ಣನ್ನು ನಡೆಸಿಕೊಳ್ಳುವ ರೀತಿ ಮತ್ತು ಆ ರೀತಿಗೆ ಹೆಣ್ಣು ಪ್ರತಿಕ್ರಿಯೆ ನೀಡುವ ವಿಧಾನ ಹಾಗೂ ಭಾಷೆಗಳಲ್ಲಿನ ಗಂಡು-ಹೆಣ್ಣಿನ ನೋಟ ಕ್ರಮ ಏನು ಎಂಬುದನ್ನು ಚರ್ಚಿಸಲಾಗಿದೆ.

ಗಾಯಿತ್ರಿ ಎಸ್.ಜಿ. ಅವರು "ಸ್ತ್ರೀವಾದದ ಹಿನ್ನೆಲೆಯಲ್ಲಿ ಪ್ರತಿಭಾ ನಂದಕುಮಾರ ಕಾವ್ಯದ ಅಧ್ಯಯನ" ಎಂಬ ಶೀರ್ಷಿಕೆಯಡಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಪ್ರಬಂಧವಾಗಿದೆ. ಪ್ರತಿಭಾ ನಂದಕುಮಾರ ಅವರ ಬಹುತೇಕ ಕತೆಗಳು ಸ್ತ್ರೀಯರು ತೆಗೆದುಕೊಳ್ಳುವ ಮನೆಯ ಒಳಗಿನ, ಮನೆಯ ಹೊರಗಿನ ಆಯ್ಕೆಯ ಸ್ವಾತಂತ್ರ್ಯವನ್ನು ಕುರಿತುವುಗಳಾಗಿವೆ. ಅವರ ಕಾವ್ಯದ ಮತ್ತೊಂದು ಆಯಾಮವು ಲಿಂಗ ತಾರತಮ್ಯಕ್ಕೆ ಸಂಬಂಧಿಸಿದ್ದು. ಈ ದೃಷ್ಟಿಯಿಂದ ಪ್ರತಿಭಾರ ಬಹುತೇಕ ಕವಿತೆಗಳು ಲೈಂಗಿಕ ಯಜಮಾನಿಕೆಯನ್ನು ವಿರೋಧಿಸುತ್ತವೆ. ಪ್ರತಿಭಾ ಅವರ ಕವಿತೆಗಳಲ್ಲಿ ಎದ್ದು ಕಾಣುವ ಇತರೆ ಗುಣಗಳೆಂದರೆ ಸಂಪ್ರದಾಯ ಮತ್ತು ಮಹಿಳೆಯ ನಡುವಣ ಪ್ರಬಂಧ-ಸಂಪ್ರದಾಯ ಚೌಕಟ್ಟನ್ನು ಮುರಿವ ಮನೋಭಾವದ ಚಿತ್ರಣ ಮುಂತಾದ ಅವರ ಕಾವ್ಯದ ಆಶಯಗಳನ್ನು ಇಲ್ಲಿ ಚರ್ಚಿಸಲಾಗಿದೆ.

ರಾಜೇಶ್ವರಿ ಎಂ. ಅವರು "ನೇಮಿಚಂದ್ರರ ಕಥಾ ಸಾಹಿತ್ಯ : ಒಂದು ಅಧ್ಯಾಯನ" ಎಂಬ ಶೀರ್ಷಿಕೆಯಡಿ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗಿದ್ದು, ಪರಂಪರಾಗತ ಸ್ತ್ರೀ-ಪುರುಷ ಅಸಮಾತೆ, ಸ್ತ್ರೀಯರಿಗೆ ಎದುರಾಗುವ ಸಮಸ್ಯೆಗಳು ಮತ್ತು ಅವರು ಪ್ರಜ್ಞಾಪೂರ್ವಕವಾಗಿಯೇ ಪರಂಪರೆಯನ್ನು ದಿಕ್ಕರಿಸಿ ಕೈಗೊಳ್ಳುವ ನಿಲುವುಗಳನ್ನು ನೇಮಿಚಂದ್ರ ಅವರು ಆಧುನಿಕ ಬದುಕಿನ ನೆಲೆಯಲ್ಲಿ ಚಿತ್ರಿಸುತ್ತಾರೆ. ಸ್ತ್ರೀವಾದಿ ಚಿಂತನೆಗಳನ್ನು ಪ್ರತಿನಿಧಿಸುವಂತಹ ಪಾತ್ರ, ಸನ್ನಿವೇಶ, ಸಂಭಾಷಣೆಗಳನ್ನು ಅವರು ತಮ್ಮ ಕತೆಗಳಲ್ಲಿ ಬಿಂಬಿಸುತ್ತಾರೆ. ಸ್ತ್ರೀವಾದಕ್ಕಿರುವ ಅನಂತ ಮಗ್ಗಲುಗಳಿಂದ ಲೇಖಕಿಯ ಕಥೆಗಳನ್ನು ಇಲ್ಲಿ ವಿಶ್ಲೇಷಣೆಗೆ ಒಳಪಡಿಸಲು ಸಾಧ್ಯವಾಗಿಲ್ಲ.

ಪೂರ್ಣಿಮ ಎನ್. ಅವರು "ಆಧುನಿಕ ಮಹಿಳಾ ಕಾವ್ಯದಲ್ಲಿ ಆದರ್ಶ ಪುರುಷನ ಹುಡುಕಾಟ" ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗಿದೆ. ಮಹಿಳಾ ಕಾವ್ಯದಲ್ಲಿ ಆದರ್ಶ ಪುರುಷನನ್ನು ಹುಡುಕ ಹೊರಟ ನನಗೆ ನಕಾರಾತ್ಮಕ ಪುರುಷ ಸಿಕ್ಕಿದ್ದೆ ಹೆಚ್ಚು ಎಂಬುದಾಗಿ ಸಂಶೋಧಕರು ಹೇಳುತ್ತಾರೆ. ಇಲ್ಲಿ ಚರ್ಚಿತವಾದ ವಿಷಯಗಳನ್ನು ಅವಲೋಕಿಸಿದಾಗ ಪುರುಷ ಸಾಮಾಜಿಕ ಧೋರಣೆ, ಲಿಂಗ ಅಸಮಾನತೆ, ದೌರ್ಜನ್ಯ, ಸಂಪ್ರದಾಯ, ಬಿಗಿ ಹಿಡಿತದ ಭಾವನೆಗಳ ಅಳಕು, ಹಿಂಜರಿಕೆ, ಮೂಲಭೂತ ಅವಶ್ಯಕತೆಗಳ ಕೊರತೆ, ಪಾತಿವ್ರತ್ಯದ ಪ್ರಶ್ನೆ, ಲೈಂಗಿಕ ಸ್ವಾತಂತ್ರದ ಪರಿಕಲ್ಪನೆ ಮುಂತಾದವುಗಳ ದೀರ್ಘ ಚರ್ಚೆಯನ್ನು ಇಲ್ಲಿ ಕಾಣಬಹುದಾಗಿದೆ.

ಶ್ರೀಮತಿ ಸಾವಿತ್ರಮ್ಮ ಅವರು "ಇತ್ತೀಚಿನ ಕನ್ನಡ ಕಥೆಗಾರ್ತಿಯರು ಒಂದು ಅಧ್ಯಯನ (೧೯೭೦-೨೦೦೦) ಎಂಬ ಶೀರ್ಷಿಕೆಯಡಿ ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪ್ರಬಂಧವಾಗಿದೆ. ಈ ಪ್ರಬಂಧದಲ್ಲಿ ವೀಣಾಶಾಂತೇಶ್ವರ, ಬಿ.ಟಿ. ಲಲಿತನಾಯಕ್, ಸಾರಾ ಅಬೂಬಕರ್, ಬಾನುಮುಷ್ತಾಕ್, ನೇಮಿಚಂದ್ರ, ವೈದೇಹಿ ಮುಂತಾದ ಸ್ತ್ರೀವಾದಿ ಲೇಖಕಿಯರ ಕಥನಗಳಲ್ಲಿ ವ್ಯಕ್ತವಾಗಿರುವ ಸ್ತ್ರೀವಾದಿ ಚಿಂತನೆಗಳನ್ನು ವಿಶ್ಲೇಷಣೆಗೆ ಒಳಪಡಿಸಿದ್ದು ಪಾಶ್ಚಾತ್ಯ ಸ್ತ್ರೀವಾದಿ ಲೇಖಕಿಯರು ಭಾರತೀಯ ಲೇಖಕಿಯರ ಮೇಲೆ ಆದ ಪ್ರೇರಣೆ-ಪ್ರಭಾವ ಹಾಗೂ ಇವರ ಕಾವ್ಯ ಮಾಧ್ಯಮದಲ್ಲಾದ ಬದಲಾವಣೆಗಳನ್ನು ಕುರಿತಾಗಿ ಚರ್ಚಿಸಲಾಗಿದೆ.

ಆಧುನಿಕ ಕನ್ನಡ ಸಾಹಿತ್ಯದ ವಿವಿಧ ಪ್ರಕಾರ ಮತ್ತು ಕಾಲಘಟ್ಟಗಳನ್ನು ಗುರುತಿಸಿ ಆ ಮೂಲಕ ಅಧ್ಯಯನಕ್ಕೆ ತೊಡಗಿದರು. ಸ್ತ್ರೀ ಸಂವೇದನೆಯು ಎಲ್ಲ ಲೇಖಕಿಯರಲ್ಲಿ ಕಂಡುಬರುವುದಿಲ್ಲ. ಆದರೆ ೧೯೭೦ರ ನಂತರದ ಬರಹಗಾರ್ತಿಯರು ಬಹುತೇಕ ಸ್ತ್ರೀವಾದಿ ನೆಲೆಯಲ್ಲಿಯೇ ಬರೆದದ್ದನ್ನು ಗುರುತಿಸಬಹುದು. ಸ್ತ್ರೀಯ ಸ್ವತಂತ್ರತೆಯನ್ನು, ಅಸೂಯೆ, ಜಿಗುಪ್ಸೆ, ತ್ಯಾಗ ಮೊದಲಾದ ಭಾವಗಳನ್ನು ಸ್ಪಷ್ಟವಾಗಿ ಚಿತ್ರಿಸುವ ವೀಣಾ ಶಾಂತೇಶ್ವರ ಕಥೆಗಳು ಆ ಕಾಲಕ್ಕೆ ಹೊಸದೊಂದು ಅಧ್ಯಯನವನ್ನೇ ಸೃಷ್ಟಿಸಿವೆ. ತಮ್ಮ ಸಮುದಾಯದ ಜನರ ನೋವುಗಳನ್ನು ಕಥೆಯ ಮೂಲಕ ಅಭಿವ್ಯಕ್ತಿಸಿದ ಬಿ.ಟಿ. ಲಲಿತನಾಯಕ್ ಬಂಡಾಯದ ಹಾದಿಯನ್ನೇ ಸೃಷ್ಟಿಸಿದಳು. ಹೀಗೆ ವಿವಿಧ ಸ್ತ್ರೀವಾದಿ ಲೇಖಕಿಯರ ಕಾವ್ಯದಲ್ಲಿ ವ್ಯಕ್ತವಾದ ಸ್ತ್ರೀ ಸಂವೇದನೆಯ ಸ್ವರೂಪವನ್ನು ಈ ಪ್ರಬಂಧದಲ್ಲಿ ವಿಶ್ಲೇಷಿಸಲಾಗಿದೆ.

**೨.೨. ತೆಲುಗು ಸ್ತ್ರೀವಾದಿ ಅಧ್ಯಯನಗಳ ಸಮೀಕ್ಷೆ :**

**೨.೨.೧. ಪ್ರಕಟಿತ ಮತ್ತು ಅಪ್ರಕಟಿತ**

ಎಂಬತ್ತರ ದಶಕದ ಆರಂಭದ ವೇಳೆಗೆ ತೆಲುಗು ಭಾಷೆಯಲ್ಲಿಯು ಸಹ ಸ್ತ್ರೀವಾದಿ ವಿಮರ್ಶೆ ಗಂಭೀರವಾಗಿ ತೊಡಗಿದ್ದನ್ನು ಕಾಣಬಹುದು. ಹಾಗೆಯೆ ತೆಲುಗು ಸ್ತ್ರೀವಾದಿ ಸಾಹಿತ್ಯವನ್ನು ಕುರಿತ

ಅಧ್ಯಯನಗಳು ಕೂಡ ಇದೇ ಕಾಲಘಟ್ಟದಲ್ಲಿ ನಡೆದವು. ಇಂತಹ ಅಧ್ಯಯನಗಳು ಉಪಯುಕ್ತವಾಗಿದ್ದು ವಿಶ್ಲೇಷಣೆಗೆ ಅನುಕೂಲವಾಗಿ ಪ್ರಕಟಿತ ಮತ್ತು ಅಪ್ರಕಟಿತ ಎಂಬುದಾಗಿ ಎರಡು ವಿಭಾಗ ಮಾಡಿಕೊಂಡಿದ್ದೇನೆ.

ಸ್ತ್ರೀವಾದಿ ದೃಷ್ಟಿಕೋನದಿಂದ ಲೇಖನಗಳನ್ನು ಬರೆಯುತ್ತಿರುವವರಲ್ಲಿ ಪ್ರಮುಖರಾದವರೆಂದರೆ ಕಾತ್ಯಾಯಿನಿ ವಿದ್ಮಹ, ಓಲ್ಗಾ, ವಸಂತ ಕನ್ನಾಭಿರಾನ್, ಜಯಪ್ರಭ, ಮೃಣಾಳಿನಿ, ಮಲ್ಲಾದಿ ಸುಬ್ಬಮ್ಮ, ಶಿಲಾಲೊಲಿತ ಮುಂತಾದವರು. ಕಾತ್ಯಾಯಿನಿ ವಿದ್ಮಹ ಅವರು "ಅಲಂಕಾರ ಶಾಸ್ತ್ರದಲ್ಲಿ ಸ್ತ್ರೀ" ಎಂಬ ಲೇಖನದಲ್ಲಿ ಹೇಳುವಂತೆ ಅಲಂಕಾರಶಾಸ್ತ್ರವೆಂಬ ಹೆಸರಿನಲ್ಲಿ ಖ್ಯಾತಿವೆತ್ತ ಸಾಹಿತ್ಯಶಾಸ್ತ್ರ, ಸಾಹಿತ್ಯ ಹೇಗೆ ಇರಬೇಕು, ಅದರ ಲಕ್ಷಣಗಳೇನು ಎಂಬುದನ್ನು ನಿರ್ದೇಶಿಸಿ ತೋರಿಸುತ್ತದೆ. ಸಂಸ್ಕೃತದಿಂದ ತೆಲುಗು ಸಾಹಿತ್ಯದೊಳಗೆ ಕಾವ್ಯ ಬಂದಿರುವಂತೆಯೇ ಈ ಅಲಂಕಾರಶಾಸ್ತ್ರ ರಚನೆಗಳು ಕೂಡ ಬಂದವು. ಅವು ಸಂಸ್ಕೃತ ಗ್ರಂಥಗಳಿಗೆ ಅನುವಾದಗಳಾಗಿಯೂ ಇಲ್ಲವೆ ಸಂಸ್ಕೃತ ಕಾವ್ಯಲಂಕಾರ ಗ್ರಂಥಗಳ ಮಾರ್ಗವನ್ನು ಅನುಸರಿಸುವ ಸ್ವತಂತ್ರ ರಚನೆಗಳಾಗಿಯೂ ತೆಲುಗಿನಲ್ಲಿ ಬಂದವು. ಈ ಅಲಂಕಾರಶಾಸ್ತ್ರ ಗ್ರಂಥಗಳು ಕಾವ್ಯದಲ್ಲಿ ಸ್ತ್ರೀ ಹೇಗೆ ಇರಬೇಕು ಎಂದು ಹೇಳಿದ್ದಾವೆ ಎಂಬುದನ್ನು ವಿಶ್ಲೇಷಿಸುವುದು ಈ ಲೇಖನದ ಉದ್ದೇಶವಾಗಿದೆ.

ಸಂಜೀವಮ್ಮ ಪಿ. ಅವರ "ಚಲಂ-ಸ್ತ್ರೀವಾದಿ ಸಾಹಿತ್ಯ" ಎಂಬ ಲೇಖನದಲ್ಲಿ ಆಧುನಿಕಾಂಧ್ರದ ಸಾಹಿತ್ಯದಲ್ಲಿ ಚರಿತ್ರೆಯನ್ನು ಸೃಷ್ಟಿಸಿದ ಯುಗಪುರುಷ ಚಲಂ ಇವರ ಬಹುಪಾಲು ಸೃಜನಶೀಲ ಸಾಹಿತ್ಯದ ಮುಖ್ಯ ಧೋರಣೆ ಸ್ತ್ರೀ ವಿಮುಕ್ತಿಯಾಗಿದೆ. ಸ್ತ್ರೀಯರ ಸಮಸ್ಯೆಗಳಿಗೆ ಮೂಲ ಕಾರಣ ಯಾವುದು, ಅದು ಎಲ್ಲಿದೆ ಎಂಬುದನ್ನು ಆತ ಅಷ್ಟಾಗಿ ಆಲೋಚಿಸಲಿಲ್ಲ. ಆತನು ಹೇಗೆ ಆಲೋಚಿಸಿದರು ಆತನ ಸಾಹಿತ್ಯವು ಮಾತ್ರ ಒಂದು ಚಾರಿತ್ರಿಕವಾದ ಕರ್ತವ್ಯವನ್ನು ನಿರ್ವಹಿಸಿದೆ. ಚಲಂ ಹೇಳುವಂತೆ "ಸ್ತ್ರೀಯರಿಗೂ ಶರೀರವಿದೆ ಅದಕ್ಕೆ ವ್ಯಾಯಾಮ ಕೊಡಬೇಕು, ಅವಳಿಗೂ ಮೇದುಳಿದೆ ಅದಕ್ಕೆ ಜ್ಞಾನವನ್ನು ಕೊಡಬೇಕು, ಅವಳಿಗೂ ಹೃದಯವಿದೆ ಅದಕ್ಕೆ ಅನುಭವವನ್ನು ಕೊಡಬೇಕೆಂದು ಪುರುಷ ಪ್ರಧಾನ ಸಮಾಜಕ್ಕೆ ಕರೆಕೊಟ್ಟಿದ್ದಾನೆ.

ಚಲಂ ಕಾಲದ ಸ್ತ್ರೀವಾದಿ ಸಾಹಿತ್ಯಕ್ಕೂ ಈಗಿನ ಸ್ತ್ರೀವಾದಿ ಸಾಹಿತ್ಯಕ್ಕೂ ಇರುವ ವ್ಯತ್ಯಾಸವನ್ನು ಹೇಳುತ್ತಾ ಚಲಂ ಕಾಲದಲ್ಲಿ "ಪ್ರೇಮ ಭಾವನೆ ಪಾತಿವ್ರತ್ಯದ ಕಾರಣದಿಂದಾಗಿ ಸೊರಗಿ ಹೋದರೆ ಇಂದು ದುಡ್ಡಿನ ಕಾರಣದಿಂದಾಗಿ ಪ್ರೇಮ ಭಾವನೆ ದಹಿಸಲ್ಪಡುತ್ತಿದೆ" ಇಷ್ಟೇ ವ್ಯತ್ಯಾಸ ಚಲಂ ಸ್ತ್ರೀವಾದಿ ಸಾಹಿತ್ಯ ತೆಲುಗು ಸ್ತ್ರೀವಾದಿ ಕವಿಯತ್ರಿಯರಿಗೆ ಸ್ಫೂರ್ತಿಯನ್ನು ನೀಡಿದ್ದಲ್ಲದೆ ಮತ್ತಷ್ಟು ಚಲವನ್ನು ನೀಡಿದೆ ಎನ್ನುವಂತ ಅಂಶವನ್ನು ಈ ಲೇಖನದಲ್ಲಿ ಕಾಣಬಹುದು.

ಮೃಣಾಳಿನಿ ಸಿ. ಅವರು "ಮಹಿಳಾ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರಗಳ ಸ್ಥೂಲ ವಿವೇಚನೆ" ಎನ್ನುವ ಲೇಖನದಲ್ಲಿ ಸ್ವಾತಂತ್ರ್ಯ ನಂತರದ ರಚನಗಾರ್ತಿಯರು ತಮ್ಮ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರಗಳನ್ನು ಹೇಗೆ ಚಿತ್ರಿಸಲಾಗಿದೆ ಎಂಬುದನ್ನು ವಿಶ್ಲೇಷಿಸಿದ್ದು, ಪುರುಷ ಪ್ರಧಾನ ಸಂಸ್ಕೃತಿಯು

ಮಹಿಳೆಯರ ಪಾತ್ರಗಳನ್ನು ಪುರುಷನ ಅಧೀನವಾಗಿರುವಂತ ಚಿತ್ರಿಸಿಕೊಂಡಿರುವುದರ ಬಗ್ಗೆ ಧ್ವನಿ ಎತ್ತಲಾಗಿದೆ. ಸ್ತ್ರೀವಾದಿ ಸಾಹಿತ್ಯದ ಧೋರಣೆಗಳು ತೆಲುಗು ಸಾಹಿತ್ಯದಲ್ಲಿ ಮೊಳಕೆಯೊಡೆದಂದಿನಿಂದ ಪುರುಷ ಪ್ರಧಾನ ವ್ಯವಸ್ಥೆಯನ್ನು ಪ್ರಶ್ನಿಸುವ, ಧಿಕ್ಕರಿಸುವ, ವಿವಾಹ ವ್ಯವಸ್ಥೆಯಲ್ಲಿನ ಲೋಪ–ದೋಷಗಳನ್ನು ಎತ್ತಿ ತೋರಿಸುವ ಮನೋಭಾವನೆಗಳು ತೆಲುಗು ಮಹಿಳಾ ಕಾದಂಬರಿಗಳಲ್ಲಿ ವಿಸ್ತಾರ ರೂಪವನ್ನು ಪಡೆದುಕೊಂಡಿವೆ. ಅಂದರೆ ೧೯೮೦ರ ನಂತರ ಸ್ತ್ರೀವಾದಿ ಸಾಹಿತ್ಯ ಕವಿತೆಯಿಂದ ಉಗಮವಾಗಿ ಕಥೆ, ಕಾದಂಬರಿಯಲ್ಲಿ ವಿಕಾಸವನ್ನು ಹೊಂದಿತು ಎನ್ನುವಂತಹ ವಿಚಾರಗಳನ್ನು ಕುರಿತು ಇಲ್ಲಿ ಚರ್ಚಿಸಲಾಗಿದೆ.

ಪಾಟಬಂಡ್ಲ ರಜನಿ ಅವರು "ಪುರುಷಾಧಿ ಪತ್ಯಕ್ಕೆ ಧಿಕ್ಕಾರವಾಗಿ : ಸ್ತ್ರೀವಾದ" ಎಂಬ ಲೇಖನದಲ್ಲಿ ನಮ್ಮ ಭಾರತೀಯ ಸಂಸ್ಕೃತಿಯು ಹೆಣ್ಣನ್ನು ಪುರುಷನ ಅಧೀನಳನ್ನಾಗಿಸಿ ಹೊರಗಡೆ ಅವಳನ್ನು ಪೂಜನೀಯ ಸ್ಥಾನದಲ್ಲಿ ಕೂರಿಸಲಾಗಿದೆ. ಪ್ರತಿದಿನವೂ ಒಂದಲ್ಲ ಒಂದು ರೀತಿಯಿಂದ ಈ ವ್ಯವಸ್ಥೆ ಅವಳನ್ನು ಶೋಷಣೆ ಮಾಡುತ್ತಲೇ ಇದೆ. ಇಂತಹ ಶೋಷಣೆಯ ಮೂಲವಾಗಿರುವ ಪುರುಷ ಪ್ರಧಾನ ವ್ಯವಸ್ಥೆಯನ್ನು ಬುಡಮೇಲು ಮಾಡಿ ಸಮಾಜದಲ್ಲಿ ಸಮಾನತೆಯನ್ನು ತರಬೇಕೆಂಬ ಆಶಯವನ್ನು ವ್ಯಕ್ತಪಡಿಸಿದ್ದಾರೆ. ಸ್ತ್ರೀವಾದಿ ಸಾಹಿತ್ಯದ ತಾತ್ವಿಕ ಚಿಂತನೆಗೆ ಸಂಬಂಧಿಸಿದಂತೆ ಸ್ತ್ರೀವಾದಿ ಸಾಹಿತ್ಯವನ್ನು ಬಲಪಡಿಸಬೇಕು ಎನ್ನುವಂತಹ ವಿಚಾರಗಳನ್ನು ಕುರಿತಂತೆ ಚರ್ಚಿಸಲಾಗಿದೆ.

ಕಾತ್ಯಾಯಿನಿ ವಿದ್ಮಹ (ಸಂ) ಅವರ "ಜಂಡರ್ ಸ್ಪೃಹ" (ಲಿಂಗ ಅಸಮಾನತೆ) ಎಂಬ ಕೃತಿಯು ವಿಚಾರ ಸಂಕಿರಣದಲ್ಲಿ ಮಂಡಿಸಲಾದ ಪ್ರಬಂಧ ಲೇಖನಗಳ ಸಂಗ್ರಹವಾಗಿದೆ. ಈ ಕೃತಿಯು ಮೂರು ಭಾಗಗಳನ್ನು ಒಳಗೊಂಡಿದ್ದು, ಮೂರನೇ ಭಾಗದಲ್ಲಿ ಲಿಂಗ ಅಸಮಾನತೆಗೆ ತೆಲಂಗಾಣ ರಚನಗಾರ್ತಿಯರ ಪ್ರತಿಕ್ರಿಯೆ ಏನು ಎಂಬುದನ್ನು ಚರ್ಚಿಸುತ್ತ ೧೯೮೦ರ ದಶಕದಲ್ಲಿ ವಿಪ್ಲವದ (ಬಂಡಾಯ) ಅಲೆಯಾಗಿ ಬಂದ ಸ್ತ್ರೀವಾದಿ ಸಾಹಿತ್ಯ ಚಳವಳಿಗೆ ತೆಲಂಗಾಣದಲ್ಲಿನ ಮಹಿಳಾ ಲೇಖಕಿಯರ ಸ್ಪಂದನೆ, ಪ್ರತಿಕ್ರಿಯೆ ದೊಡ್ಡದಾಗಿಯೇನು ಇಲ್ಲ. ಸ್ತ್ರೀವಾದಿ ಸಾಹಿತ್ಯ ಚಳವಳಿಯಲ್ಲಿ ತೀವ್ರವಾಗಿ ಪಾಲ್ಗೊಂಡ ಮಹಿಳೆಯರು ಸಹ ಇಲ್ಲ ಎನ್ನುವಂತಹ ವಿಚಾರಗಳನ್ನು ಈ ವಿಚಾರ ಸಂಕಿರಣದಲ್ಲಿ ಸ್ತ್ರೀವಾದಿ ಕವಿತೆಯ ಮೇಲೆ ವಿಷಯ ಮಂಡಿಸಿದ ಡಾ. ನಂದಿನಿ ಸೀತಾರೆಡ್ಡಿ ಅವರು ಇದಕ್ಕೆ ಕಾರಣಗಳನ್ನು ಸಹ ಕೊಡುತ್ತಾರೆ. ತೆಲಂಗಾಣ ಪ್ರದೇಶವು ನಗರೀಕರಣದ ಪ್ರಭಾವಕ್ಕೆ ಸಿಲುಕದೆ ಇರುವುದು ಒಂದು ಕಾರಣವಾದರೆ, ಶ್ರಮದ ಶೋಷಣೆಯೇ ಅಧಿಕವಾಗಿದ್ದರಿಂದ ಸ್ತ್ರೀವಾದಿ ಚಿಂತನೆಗಳೆಡೆಗೆ ಹೆಚ್ಚಿನ ಗಮನವನ್ನು ಹರಿಸಲಿಲ್ಲ ಎಂಬುದು ಇನ್ನೊಂದು ಕಾರಣವಾಗಿದೆ. ಬಂಡಾಯ ಚಳವಳಿಯ ಪ್ರಧಾನ ಆಶಯ ಸಮಾಜದ ವಿಮುಕ್ತಿಯೇ ಆದರೂ ಅದರ ಒಂದು ಭಾಗವಾಗಿ ಸ್ತ್ರೀ ವಿಮುಕ್ತಿಯನ್ನು ಅರ್ಥಮಾಡಿಕೊಳ್ಳದೆ ಇರುವುದೇ ತೆಲಂಗಾಣದಲ್ಲಿ ಸ್ತ್ರೀವಾದಿ ಚಿಂತನೆಗಳಿಗೆ ಅವಕಾಶ ಕೊಡದೆ ಹೊಯಿತು ಎಂಬುದಾಗಿ ಹೇಳಿದ್ದಾರೆ.

ಇದೇ ವಿಚಾರ ಸಂಕಿರಣದಲ್ಲಿ ಪ್ರಬಂಧ ಮಂಡಿಸಿದ ಜೆ. ಸುಭದ್ರ ಅವರು ಹೇಳುವಂತೆ ಲಿಂಗ ಅಸಮಾನತೆಗೆ ಜಾತಿ, ವರ್ಗಗಳು ಕಾರಣವಾಗಿರುವಂತೆ ಪ್ರಾಂತಿಯತೆಯು ಸಹ ಲಿಂಗ ಅಸಮಾನತೆಗೆ ಕಾರಣವಾಗಿದೆ ಎಂಬ ವಿಚಾರವನ್ನು ವ್ಯಕ್ತಪಡಿಸಿದ್ದಾರೆ. ತೆಲುಗು ಸ್ತ್ರೀವಾದಿ ಲೇಖಕಿಯರಾದ ಪಿ. ಸತ್ಯವತಿ, ಜಯಪ್ರಭ, ಕೊಂಡಪೋಡಿ ನಿರ್ಮಲ, ಅಬ್ಬೂರಿ ಛಾಯಾದೇವಿ ಮುಂತಾದ ಲೇಖಕಿಯರು ಸಾಹಿತ್ಯದ ಮೂಲಕ ಲಿಂಗ ಅಸಮಾನತೆಗೆ ತೋರಿದ ಪ್ರತಿಕ್ರಿಯೆ ಏನು ಎಂಬುದನ್ನು ಈ ಕೃತಿಯಲ್ಲಿ ಚರ್ಚಿಸಲಾಗಿದೆ.

ಮಲ್ಲೇಶ್ವರಿ ಕೆ.ಎನ್. (ಸಂ), "ಪಿ. ಸತ್ಯವತಿ ಕಥೆಗಳು" ಎಂಬ ಕೃತಿಯು ಸತ್ಯವತಿ ಅವರ ಸಮಗ್ರ ಕಥಾ ಸಾಹಿತ್ಯವನ್ನು ಕುರಿತಾಗಿ ವಿಶ್ಲೇಷಣೆ ಇದೆ. ಪುರುಷ ಪ್ರಧಾನ ವ್ಯವಸ್ಥೆಯ ಸಂಸ್ಕೃತಿಯು ಮಹಿಳೆಯರಿಗೆ ನೀಡಿರುವ ಸ್ಥಾನಮಾನ ಶೋಷಣೆಯನ್ನು ವಿರೋಧಿಸುವ ಹಾಗೂ ಸ್ತ್ರೀ ಸ್ವಾತಂತ್ರದ ಪರಿಕಲ್ಪನೆಯನ್ನು ಎತ್ತಿಹಿಡಿಯುವಂತಹ ಪಾತ್ರಗಳನ್ನು ಸೃಷ್ಟಿಸಿ ಅನೇಕ ಕಥೆಗಳನ್ನು ಬರೆಯಲಾಗಿದೆ.

ಪಿತೃ ಪ್ರಧಾನ ವ್ಯವಸ್ಥೆಯ ಪುರುಷಾಧಿಕಾರದ ತಾತ್ವಿಕತೆಯು ಅಪ್ರಜ್ಞಾಪೂರ್ವಕ ನೆಲೆಯಲ್ಲಿದ್ದು ಪ್ರತಿನಿಧೀಕರಣದ ಮೂಲಕ ಅದು ಮಹಿಳೆಯರ ಮೇಲೆ ಹೇರಲ್ಪಡುತ್ತದೆ. ಮಹಿಳೆಯರಲ್ಲಿ ರೂಢಿಗತವಾಗಿ ಧಾರ್ಮಿಕ ಆಚರಣೆಗಳು, ವಿಧ್ಯುಕ್ತ ಕ್ರಿಯೆಗಳ ಮೂಲಕ ಅದು ಸಾಂಸ್ಕೃತಿಕವಾಗಿ ಪುನರುತ್ಪಾದಿತವಾಗುತ್ತಿರುತ್ತದೆ. ಈ ಯಜಮಾನಿಕೆಯ ಒಂದು ಅಂಗವೆ ಲಿಂಗಪ್ರಬೇಧ. ಇದು ಮಹಿಳೆಯರ ಶೋಷಣೆಗೆ ಕಾರಣವಾಗುತ್ತದೆ ಎಂಬ ವಿಚಾರಗಳನ್ನು ಹೇಳಿದ್ದಾರೆ.

ಅಬ್ಬೂರಿ ಛಾಯಾದೇವಿ, ಮೃಣಾಳಿನಿ, ಪಂಟಿಬಂಡ್ಲ ರಜನಿ (ಸಂ) "ಓಲ್ಗಾ ತರಂಗಾಲು" ಕೃತಿಯು ಪ್ರಸಿದ್ಧ ತೆಲುಗು ಸ್ತ್ರೀವಾದಿ ಲೇಖಕಿಯ ಜೀವನ ಹಾಗೂ ಸಾಹಿತ್ಯ ಕೃತಿಯ ಮೇಲೆ ಬೆಳಕು ಚೆಲ್ಲುತ್ತದೆ. ಓಲ್ಗಾ ಅವರ ಸಾಹಿತ್ಯದಲ್ಲಿ ವ್ಯಕ್ತವಾಗಿರುವ ಕೆಲವೊಂದು ಚಿಂತನೆಗಳನ್ನು ಇಲ್ಲಿ ನೀಡುತ್ತಿದ್ದೇನೆ.

- ಮಹಿಳೆಯರಿಗೆ ಮಹಿಳೆ ಶತ್ರು ಎನ್ನುವ ಅಭಿಪ್ರಾಯವನ್ನು ಖಂಡಿಸಿ ಸ್ತ್ರೀಯರಿಗೆ ಸ್ತ್ರೀಯರೆ ಸಹಕರಿಸಬೇಕು. ಮಹಿಳೆಯರೆಲ್ಲ ಒಗ್ಗಟ್ಟಾಗಿ ಇರುವುದರಿಂದಲೇ ಏನನ್ನಾದರೂ ಸಾಧಿಸಬಹುದು ಎಂದು ಓಲ್ಗಾ ಸಾಹಿತ್ಯ ಹೇಳುತ್ತದೆ.
- ಪಿತೃ ಪ್ರಧಾನ ವ್ಯವಸ್ಥೆಯ ಸಂಸ್ಕೃತಿಯಿಂದ ನಷ್ಟವನ್ನು ಅನುಭವಿಸುವುದು ಮಹಿಳೆ ಒಬ್ಬಳೇ ಅಲ್ಲ ಪುರುಷನು ಕೂಡ ಈ ವಿಷಯವನ್ನು ತಿಳಿಯಬೇಕು ಎನ್ನುವಂತಹದ್ದನ್ನು ಓಲ್ಗಾ ಸಾಹಿತ್ಯ ಹೇಳುತ್ತದೆ.
- ಮಹಿಳೆಯರ ಹಕ್ಕುಗಳೆಲ್ಲ ಮಾನವ ಹಕ್ಕುಗಳೆಂದು, ಯಾವುದೆ ಹಕ್ಕುಗಳಿಗೆ ಚ್ಯುತಿ ಉಂಟಾದರೂ ಮಹಿಳೆಯರು ಸಹಿಸಿಕೊಂಡು ಸುಮ್ಮನಿರಬಾದು. ಅವುಗಳನ್ನು ಹೋರಾಟ ಮಾಡಿಯಾದರೂ ಪಡೆಯಬೇಕೆಂದು ಇವರ ಸಾಹಿತ್ಯ ಹೇಳುತ್ತದೆ.

• ಮಹಿಳೆಯರ ಅಸ್ತಿತ್ವ ಕೌಟುಂಬಿಕ ಸಂಬಂಧಗಳಿಗಷ್ಟೆ ಸೀಮಿತವಲ್ಲ, ಸಾಮಾಜಿಕ ಅಭಿವೃದ್ಧಿಯಲ್ಲಿ ಮಹಿಳೆ ಒಂದು ಭಾಗವಾಗಿದ್ದಾಳೆ ಎಂಬುದನ್ನು ಓಲ್ಗಾ ಅವರ ರಚನೆಗಳು ತಿಳಿಸುತ್ತವೆ.
• ಸ್ತ್ರೀವಾದದಿಂದಾಗಿ ಮಹಿಳೆಯರ ಬದುಕು ಹಸನಾಗುವುದು ಅಷ್ಟೇ ಅಲ್ಲ ಒಂದು ಶಾಂತಿಯುತವಾದ ಸಹ ಜೀವನ ವ್ಯವಸ್ಥೆ ನಿರ್ಮಾಣವಾಗಬಲ್ಲದೆಂದು ಓಲ್ಗಾ ಅವರ ಸಾಹಿತ್ಯ ಹೇಳುತ್ತದೆ.
• ಸಕಲ ಶಾಸ್ತ್ರಗಳನ್ನು, ಸಕಲ ಜ್ಞಾನ ಶಾಖೆಗಳನ್ನು ಮಹಿಳಾ ದೃಷ್ಟಿಕೋನದಲ್ಲಿ ನೋಡಬೇಕೆಂದು ಓಲ್ಗಾ ಅವರ ಸಾಹಿತ್ಯ ತಿಳಿಸುತ್ತದೆ.
• ಮಹಿಳೆಯನ್ನು ಒಂದು ಬುದ್ಧಿಜೀವಿಯಾಗಿ ಓಲ್ಗಾ ಅವರ ಸಾಹಿತ್ಯ ನಿರ್ಮಿಸುತ್ತದೆ.

ಹೀಗೆ ಇನ್ನು ಎಷ್ಟೋ ವಿಚಾರಗಳನ್ನು ಓಲ್ಗಾ ಅವರ ಸಾಹಿತ್ಯ ರಚನೆಗಳಲ್ಲಿ ಗುರುತಿಸಬಹುದು ಎಂಬುದಾಗಿ ಸಿ. ಮೃಣಾಳಿನಿ ಹೇಳುತ್ತಾರೆ.

ಕೊಂಡವೀಟಿ ಸತ್ಯವತಿ ಅವರ "ಭಂಡಾರು ಅಚ್ಚಮಾಂಬ ಸಚ್ಚರಿತ್ರ" ಎಂಬ ಕೃತಿಯು ತೆಲುಗು ಸಾಹಿತ್ಯದಲ್ಲಿ ಚಿರಕಾಲ ವಿಮರ್ಶಕರ, ಚಿಂತಕರ ನಿಂದನೆ, ಅವಮಾನಗಳಿಗೆ ಗುರಿಯಾದ ಸ್ತ್ರೀವಾದಿ ಲೇಖಕಿ ಭಂಡಾರು ಅಚ್ಚಮಾಂಬ ಅವರನ್ನು ಕುರಿತದ್ದಾಗಿದೆ. ಸ್ತ್ರೀವಾದಿ ಚಿಂತನೆಗಳನ್ನೊಳಗೊಂಡ ಪಾತ್ರಗಳನ್ನು ಸೃಷ್ಟಿಸಿ ಕಥೆಗಳನ್ನು ಬರೆದು ಮೊದಲ ಬಾರಿಗೆ ಮಹಿಳೆಯರ ಚರಿತ್ರೆಯನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ವಿಶ್ಲೇಷಿಸಿದವರೂ ಕೂಡ ಭಂಡಾರು ಅಚ್ಚಮಾಂಬನವರೆ ಮಹಿಳೆಯರಿಗೋಸ್ಕರ ಸಂಘಗಳನ್ನು ನಿರ್ಮಿಸಿದವರಲ್ಲಿ ಮೊದಲಿಗರಾಗಿದ್ದಾರೆ. ನೂರು ವರ್ಷಗಳ ಹಿಂದಿನ ಸ್ತ್ರೀಯರ ಸ್ಥಿತಿಗತಿಗಳನ್ನು ಕುರಿತು ಅತ್ಯಾಧುನಿಕವಾಗಿ ಆಲೋಚಿಸಿ, ಸ್ತ್ರೀಯರ ಅಭ್ಯುದಯಕ್ಕಾಗಿ ಕನವರಿಸಿ, ಆ ಕಾಲದ ಸ್ತ್ರೀಯರ ಪರಿಸ್ಥಿತಿಗಳ ಬಗೆಗಿನ ಆವೇದನೆ, ಅಂತರಂಗದ ತೊಳಲಾಟವನ್ನು ಕಥೆಗಳನ್ನಾಗಿ, ಪ್ರಬಂಧಗಳಾಗಿ, ಚರಿತ್ರೆಯಾಗಿ, ಉಪನ್ಯಾಸಗಳನ್ನಾಗಿ ರಚಿಸಿದ ಸಾಹಿತ್ಯವನ್ನು ಸವಿವರವಾಗಿ ಈ ಕೃತಿಯಲ್ಲಿ ಚರ್ಚಿಸಲಾಗಿದೆ.

ತೆಲುಗಿನಲ್ಲಿ ಬರುತ್ತಿರುವ ಏಕೈಕ ಸ್ತ್ರೀವಾದಿ ಪತ್ರಿಕೆ "ಭೂಮಿಕ"ಗೆ ಸತತ ಇಪ್ಪತ್ತು ವರ್ಷಗಳ ಕಾಲ ಸಂಪಾದಕರಾಗಿ ಕೆಲಸ ಮಾಡಿದ್ದಾರೆ. ಸಮಸ್ಯೆಗಳಲ್ಲಿ ಸಿಲುಕಿರುವ ಮಹಿಳೆಯರಿಗೋಸ್ಕರ ಭೂಮಿಕ ಹೆಲ್ಪ್‌ಲೈನ್ ಅನ್ನು ನಡೆಸುವುದರೊಂದಿಗೆ ಮಹಿಳೆಯರಿಗೆ ಸಕಲ ಸೌಲಭ್ಯಗಳನ್ನು ಕಲ್ಪಿಸಿಕೊಡಲು ಸತತವಾಗಿ ದುಡಿದ ಧೀಮಂತ ಸ್ತ್ರೀವಾದಿ ಲೇಖಕಿಯಾಗಿದ್ದಾರೆ.

ಸ್ನೇಹಪ್ರಭ ಕೆ.ಬಿ. ಅವರ "ವಾಸಿರೆಡ್ಡಿ ಸೀತಾದೇವಿ 'ಮರಿಚಿಕ ಸಾಮಾಜಿಕ ಮನೋ ವಿಶ್ಲೇಷಣಾ' ಎಂಬ ಕೃತಿಯು ಎಂ.ಫಿಲ್. ಸಂಪ್ರಬಂಧವಾಗಿದ್ದು, ಇದರಲ್ಲಿ ಮರಿಚಿಕೆ ಎಂಬ ಕಾದಂಬರಿಯನ್ನು ಸ್ನೇಹಪ್ರಭ ಅವರು ಸಾಮಾಜಿಕ ಮನೋ ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಇದು ಒಂದು ವಿವಾದಾತ್ಮಕ ಕಾದಂಬರಿಯಾಗಿದ್ದು ಆಂಧ್ರಪ್ರದೇಶ ಸರ್ಕಾರವು ಈ ಕೃತಿಯನ್ನು ಮುಟ್ಟುಗೋಲು ಹಾಕಿಕೊಂಡರು. ಸಹೃದಯ ಓದುಗರು ಈ ಕೃತಿಯನ್ನು ಸ್ವಾಗತಿಸಿದ್ದಾರೆ.

ಸಾಮಾಜಿಕ ಬದಲಾವಣೆಯನ್ನು ಚಿತ್ರಿಸಿರುವ ಕಾದಂಬರಿಯಾಗಿದ್ದು, ಆ ದಿನಗಳಲ್ಲಿಯೇ ಸ್ತ್ರೀವಾದಿ ದೃಷ್ಟಿ ಧೋರಣೆಗಳೊಂದಿಗೆ ಪುರುಷ ಪ್ರಧಾನ ವ್ಯವಸ್ಥೆಯನ್ನು ಪ್ರಶ್ನಿಸಿದೆ. ಮಹಿಳೆಯರಿಗೆ ಸ್ವಾವಲಂಬನೆ, ಸ್ವೇಚ್ಛೆ, ಆತ್ಮಗೌರವ, ಆತ್ಮವಿಶ್ವಾಸ ಇರಬೇಕೆಂದು ಹೇಳುತ್ತಾ ಸ್ವತಹ ಬದುಕಿ ತೋರಿಸಿ ಇತರ ಮಹಿಳೆಯರಿಗೆ ಮಾದರಿಯಾಗಿದ್ದಾರೆ. ನಲವತ್ತಕ್ಕೂ ಹೆಚ್ಚಿನ ಕಾದಂಬರಿಗಳನ್ನು ಬರೆದಿದ್ದು ತೆಲುಗು ಸಾಹಿತ್ಯ ಚರಿತ್ರೆಯಲ್ಲಿ ಶಿಖರಪ್ರಾಯವಾಗಿ ನಿಲ್ಲುತ್ತಾರೆ.

೧೯೭೦ರ ದಶಕದಲ್ಲಿ ಯುವ ಜನತೆಯನ್ನು ಆಕರ್ಷಿಸಿದ ಎರಡು ಪಾರ್ಶ್ವಗಳಲ್ಲಿ ಹಿಪ್ಪಿ ಸಂಸ್ಕೃತಿ, ಎರಡನೆಯದು. ನಕ್ಸಲಿಜಂ ಈ ಎರಡರಲ್ಲಿ ಯಾವುದು ಒಳ್ಳೆಯದು, ಯಾವುದು ಕೆಟ್ಟದ್ದು ಎಂಬುದನ್ನು ವಿಶ್ಲೇಷಿಸುತ್ತ ಬರೆದ ಕಾದಂಬರಿ ಮರಿಚಿಕೆಯಾಗಿದೆ.

ನಳಿನಿ ಅವರ "ಸ್ತ್ರೀವಾದಿ ಸಾಹಿತ್ಯ ಒಂದು ವಿಶ್ಲೇಷಣೆ" ಎಂಬ ಕೃತಿಯು ಓಲ್ಗಾ, ಸತ್ಯವತಿ, ಸುಜಾತ ಮುಂತಾದ ಸ್ತ್ರೀವಾದಿ ಲೇಖಕಿಯರ ಸಾಹಿತ್ಯವನ್ನು ಕುರಿತ ವಿಮರ್ಶಾತ್ಮಕ ಲೇಖನಗಳ ಸಂಗ್ರಹವಾಗಿದ್ದು, ಇವರ ಮುಖ್ಯ ಧೋರಣೆಗಳೇನು ಎಂಬುದನ್ನು ಇಲ್ಲಿ ವಿಶ್ಲೇಷಿಸುತ್ತ ಮಹಿಳೆಯರ ಶೋಷಣೆಗೆ ಕಾರಣವಾದಂತಹ ಪಿತೃ ಪ್ರಧಾನ ವ್ಯವಸ್ಥೆ, ಲಿಂಗ ಅಸಮಾನತೆ, ಜಾತಿಯತೆ ಮುಂತಾದ ವಿಷಯಗಳನ್ನು ಕುರಿತಾದ ಸಂಕ್ಷಿಪ್ತ ವಿವರಣೆಯನ್ನು ಒಳಗೊಂಡಿದೆ.

ಕಿನ್ನರಿ ಶ್ರೀದೇವಿ ಅವರ "ಸ್ನೇಹಿತ" ಎಂಬ ಕೃತಿಯು ಸ್ತ್ರೀವಾದಿ ಲೇಖನಗಳನ್ನು ಒಳಗೊಂಡ ಕೃತಿಯಾಗಿದ್ದು, "ತೆಲುಗು ಸಾಹಿತ್ಯದಲ್ಲಿ ಸ್ತ್ರೀವಾದಿ ವಿಮರ್ಶೆ" ಎಂಬ ಲೇಖನದಲ್ಲಿ ಜಯಪ್ರಭ, ಕಾತ್ಯಾಯಿನಿ ವಿದ್ಮಹ, ಓಲ್ಗಾ ಅವರ ಸಾಹಿತ್ಯವನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಛಾಯಾದೇವಿ ಕಥೆಗಳಲ್ಲಿ ದೇಸೀಯ ಸ್ತ್ರೀವಾದಿ ಭೂಮಿಕೆಗಳು, ಸಿ. ಸುಜಾತ ಅವರ ಕಥೆಗಳಲ್ಲಿ ಸ್ತ್ರೀವಾದಿ ದೃಷ್ಟಿ ಧೋರಣೆಗಳು, ಎರಡು ದಶಕಗಳ ಸ್ತ್ರೀವಾದಿ ಕಥನ ಸಾಹಿತ್ಯದಲ್ಲಿ ವೀರಲಕ್ಷ್ಮಿ ಅವರ ಕಥೆಗಳ ವೈಶಿಷ್ಟ್ಯತೆ ಎನ್ನುವಂತಹ ಉಪಯುಕ್ತ ಲೇಖನಗಳನ್ನು ಈ ಕೃತಿಯು ಒಳಗೊಂಡಿದೆ.

ಅಬ್ಬೂರಿ ಛಾಯಾದೇವಿ (ಸಂ) "ಇಪ್ಪತ್ತನೆಯ ಶತಮಾನದ ತೆಲುಗು ಮಹಿಳಾ ಬರಹಗಾರ್ತಿಯರ ರಚನೆಗಳು" ಎಂಬ ಕೃತಿಯು ತೆಲುಗು ಸಾಹಿತ್ಯದಲ್ಲಿ ಒಂದು ಉತ್ಕೃಷ್ಟವಾದ ಕೃತಿಯಾಗಿದೆ. ಇಪ್ಪತ್ತನೇ ಶತಮಾನದ ಪೂರ್ವಾರ್ಧದಲ್ಲಿ ಕನಿಷ್ಠ ಪಕ್ಷ ಎಂಭತ್ತು ಜನ ರಚನಾಗಾರ್ತಿಯರು, ಮೂರ್‍ನಾಲ್ಕು ಜನ ಕಾದಂಬರಿ ರಚನಾಗಾರ್ತಿಯರು, ಮತ್ತೆ ಕೆಲವು ಹತ್ತು ಜನ ನಾಟಕ ರಚನಾಗಾರ್ತಿಯರು, ಮತ್ತೆ ಹತ್ತು ಜನ ಪ್ರಬಂಧ ರಚನಾಗಾರ್ತಿಯರು ಇದ್ದಾರೆ. ಇವರಲ್ಲಿ ಕೆಲವರು ಎರಡೂ ಮೂರು ಪ್ರಕಾರಗಳಲ್ಲಿ ರಚನೆ ಮಾಡಿದವರಿದ್ದಾರೆ. (ತೆಲುಗು ಸಾಹಿತ್ಯ ಕೋಶಮು ಆಧುನಿಕ ಸಾಹಿತ್ಯಮು ೧೮೫೧–೧೯೫೦) ತೆಲುಗು ಅಕಾಡೆಮಿ ಹೈದರಬಾದ್ ತೆಲುಗು ಭಾಷೆಯಲ್ಲಿ ಸ್ತ್ರೀವಾದಿ ಚಿಂತನೆಗಳು ೧೯೭೫ರಲ್ಲಿ ಹುಟ್ಟಿಕೊಂಡವು. ಆರಂಭಿಕ ಸ್ತ್ರೀವಾದಿ ಕವಯತ್ರಿಯರು ಕಾವ್ಯವನ್ನೆ ಯಾಕೆ ಅಭಿವ್ಯಕ್ತಿ ಮಾಧ್ಯಮವಾಗಿ ಮಾಡಿಕೊಂಡರು. ಅವರ ದೃಷ್ಟಿ ಧೋರಣೆಗಳೇನು ಎಂಬುದನ್ನು ಕುರಿತಾದ ಸಂಕ್ಷಿಪ್ತ ಮಾಹಿತಿಯನ್ನು ಒಳಗೊಂಡಿದ್ದು, ಕೆಲವೊಂದು ಸ್ತ್ರೀವಾದಿ ಲೇಖಕಿಯರ ಕುರಿತಾದ ಮಾಹಿತಿಯನ್ನು ಕೂಡ ಈ ಕೃತಿಯಲ್ಲಿ ಕೊಟ್ಟಿದ್ದಾರೆ.

**ತೆಲುಗು ಪಿಎಚ್.ಡಿ. ಅಪ್ರಕಟಿತ ಪ್ರಬಂಧಗಳು :**

ಲಕ್ಷ್ಮಿ ಪಿ. ಅವರ "ಕವಯತ್ರಿಯರ ಕವಿತೆಗಳಲ್ಲಿ ಸ್ತ್ರೀ ಮನೋಭಾವನೆಗಳು" ಎಂಬ ಶೀರ್ಷಿಕೆಯಡಿ ಪಿಎಚ್.ಡಿ. ಪ್ರಬಂಧವನ್ನು ಉಸ್ಮಾನಿಯ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗಿದೆ. ತಾಳಪಾಕ ತಿಮ್ಮಕ್ಕಳ ಕಾಲಘಟ್ಟದ ಕಾವ್ಯದಿಂದ ಹಿಡಿದು ಆಧುನಿಕ ಸ್ತ್ರೀವಾದಿ ಲೇಖಕಿಯರ ಕಾವ್ಯದಲ್ಲಿನ ಸ್ತ್ರೀ ಮನೋಭಾವನೆಯ ದೃಷ್ಟಿ ಧೋರಣೆಗಳನ್ನು ಕುರಿತಾಗಿ ವಿಶ್ಲೇಷಿಸಲಾಗಿದ್ದು, ಪಿತೃ ಪ್ರಧಾನ ವ್ಯವಸ್ಥೆ, ಲಿಂಗ ಅಸಮಾನತೆ, ಲೈಂಗಿಕ ಸ್ವೇಚ್ಛೆ, ಮಾತೃತ್ವ, ವಿಷಯಗಳಿಗೆ ಸ್ತ್ರೀವಾದಿ ಲೇಖಕಿಯರ ನಿಲುವುಗಳೇನು, ಇವರ ಕಾವ್ಯ ನೀಡಿದ ಪ್ರತಿಕ್ರಿಯೆ ಏನು? ಎಂಬುದನ್ನು ಈ ಪ್ರಬಂಧದಲ್ಲಿ ಚರ್ಚಿಸಲಾಗಿದೆ.

ವಿನೋದಿನಿ ಎಂ.ಎಂ. ಅವರ "ಸ್ತ್ರೀವಾದಿ ಕವಿತೆ–ಭಾಷೆ, ವಸ್ತು, ರೂಪ ನವೀನತೆ" ಎಂಬುದು ಸಂಶೋಧನಾ ಪ್ರಬಂಧವಾಗಿದೆ. ಎಪ್ಪತ್ತರ ದಶಕದಿಂದ ಹಿಡಿದು ಎರಡು ಸಾವಿರದ ಮೂರರವರೆಗೂ ಬಂದಿರುವ ಸ್ತ್ರೀವಾದಿ ಕವಿತೆಯನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡು ಚಾರಿತ್ರಿಕ, ಸಾಮಾಜಿಕ, ರಾಜಕೀಯ, ಸೈದ್ಧಾಂತಿಕ ದೃಷ್ಟಿಕೋನದಿಂದ ವಿಶ್ಲೇಷಿಸಲಾಗಿದೆ. ಸ್ತ್ರೀವಾದಿ ಕವಿತೆ–ಭಾಷೆಯ ನವೀನತೆಗೆ ಸಂಬಂಧಿಸಿದಂತೆ ಚರ್ಚಿಸುತ್ತಾ ಭಾಷೆಯು ಕೂಡ ಪಿತೃ ಪ್ರಧಾನ ವ್ಯವಸ್ಥೆ ನಿರ್ಮಿಸಿರುವುದೇ ಆಗಿದೆ. ಪ್ರಪಂಚದ ಯಾವುದೇ ಭಾಷೆಯನ್ನು ತೆಗೆದುಕೊಂಡು ಆ ಭಾಷೆಯಲ್ಲಿನ ಬೈಗುಳು, ನಿಂದನೆಗಳು, ಸ್ತ್ರೀಯರ ಶರೀರ, ಲೈಂಗಿಕತೆಗೆ ಸಂಬಂಧಿಸಿದವುಗಳಾಗಿರುತ್ತವೆ. ಇವುಗಳಲ್ಲಿ ಸ್ತ್ರೀಯನ್ನು ಕನಿಷ್ಟಳೆಂದು ಕೀಳು ಎಂಬ ಮನೋಭಾವನೆ ವ್ಯಕ್ತವಾಗುತ್ತದೆ.

ಯಾವ ಭಾಷೆ ತಮ್ಮನ್ನು ಹೀನಾಯವಾಗಿ ಕಾಣುತ್ತದೆಯೋ, ಯಾವ ಭಾಷೆ ತಮ್ಮನ್ನು ಅವಮಾನ ಪಡಿಸುತ್ತದೆಯೋ, ಯಾವ ಪದಗಳು ತಮ್ಮನ್ನು ಚುಚ್ಚುತ್ತಿದ್ದಾವೆಯೋ ಅವುಗಳನ್ನೇ ಸ್ತ್ರೀವಾದಿಗಳು ಆಯುಧವನ್ನಾಗಿ ಪ್ರಯೋಗಿಸಿದರು. ಇಂತಹ ಪದಗಳನ್ನೇ ಸ್ವೇಚ್ಛವಾಗಿ ತಮ್ಮ ಕಾವ್ಯದಲ್ಲಿ ಬಳಸಲಾಯಿತು. ಎನ್ನುವಂತಹ ವಿಚಾರಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಸರಳಾದೇವಿ ಎಸ್. ಅವರು "ಕುಪ್ಪಿಲ ಪದ್ಮ ಅವರ ಕಥೆಗಳ ಸಮಾಲೋಚನ" ಎಂಬ ಶೀರ್ಷಿಕೆಯಡಿ ಸಂಪ್ರಬಂಧವನ್ನು ತೆಲುಗು ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗಿದೆ. ಕುಪ್ಪಿಲ ಪದ್ಮ ಅವರ ಕಥೆಗಳಲ್ಲಿ ಆರ್ಥಿಕ ಸ್ವಾತಂತ್ರ್ಯ, ಸಮಾನತೆಯನ್ನು ಕುರಿತಾಗಿ ಚರ್ಚಿಸಲಾಗಿದ್ದು, ಇವರ ಕಥೆಗಳಲ್ಲಿನ ಭಾಷಾಶೈಲಿಯ ಕುರಿತಾಗಿಯೂ ಕೂಡ ಚರ್ಚಿಸಲಾಗಿದೆ.

ಶ್ರೀಮತಿ ಪ್ರಮಿಳಾ ಅವರು "ಓಲ್ಗಾ ಸಾಹಿತ್ಯ–ಸ್ತ್ರೀವಾದ" ಎಂಬ ಶೀರ್ಷಿಕೆಯಡಿ ಸಂಪ್ರಬಂಧವನ್ನು ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಇದರಲ್ಲಿ ಓಲ್ಗಾ ಅವರ ಸ್ವೇಚ್ಛ, ಮಾನಸ, ಆಕಾಶಂಲೋಸಗಂ, ಸಹಜ ಎಂಬ ಈ ಐದು ಕಾದಂಬರಿಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದ್ದು, ಈ ಕಾದಂಬರಿಗಳ ಮೂಲಕ ಲೇಖಕಿ ಹೇಳಲು ಹೊರಟಿರುವ ಸ್ತ್ರೀವಾದಿ ಚಿಂತನೆಗಳ ವಿಶ್ಲೇಷಣೆಯನ್ನು ಈ ಸಂಪ್ರಬಂಧದಲ್ಲಿ ಕಾಣಬಹುದು.

ಮಾರ್ವಿನ್‌ನಾಗ ಸುರೇಶ ಅವರು "ನಿಷಿದ್ದಾಕ್ಷರಿ ಸ್ತ್ರೀವಾದಿ ಕವಿತ ವಸ್ತು, ರೂಪ ವಿಶ್ಲೇಷಣೆ" ಎಂಬ ಶೀರ್ಷಿಕೆಯಡಿ ಸಂಪ್ರಬಂಧವನ್ನು ತೆಲುಗು ವಿಶ್ವವಿದ್ಯಾಲಕ್ಕೆ ಸಲ್ಲಿಸಲಾಗಿದೆ. ನಿಷಿದ್ದಾಕ್ಷರಿ ಹೈಮಾವತಿ ಅವರ ಕವನ ಸಂಕಲನವಾಗಿದ್ದು ಇಲ್ಲಿನ ಬಹುತೇಕ ಕವನಗಳು ಪಿತೃ ಪ್ರಧಾನ ವ್ಯವಸ್ಥೆ ನಿರ್ಮಿಸಿರುವ ವಿಷಮ ಸಂಸ್ಕೃತಿಯನ್ನು ಪ್ರಶ್ನಿಸಿದವುಗಳಾಗಿವೆ. ಜಾಗತೀಕರಣದ ಪರಿಣಾಮದಿಂದ ಮಹಿಳೆ ಮಾರುವ ಸರಕಾಗಿ ರೂಪುಗೊಳ್ಳುತ್ತಿದ್ದಾಳೆ ಎನ್ನುವಂತಹ ಎಚ್ಚರಿಕೆಯನ್ನು ಇಲ್ಲಿನ ಕವನಗಳು ನೀಡುತ್ತವೆ ಎನ್ನುವಂತಹ ವಿಚಾರಗಳನ್ನು ಈ ಪ್ರಬಂಧದಲ್ಲಿ ಎತ್ತಲಾಗಿದೆ.

**೩. ಅಧ್ಯಯನಗಳ ಸ್ವರೂಪ :**

ಎರಡೂ ಸ್ತ್ರೀವಾದಿ ಅಧ್ಯಯನಗಳ ಸಮೀಕ್ಷೆಯಿಂದ ಈ ಕೆಳಗಿನ ಅಂಶಗಳನ್ನು ಗುರುತಿಸಿಕೊಳ್ಳಬಹುದಾಗಿದೆ.

- ಕನ್ನಡ-ತೆಲುಗು ಸ್ತ್ರೀವಾದಿ ಅಧ್ಯಯನಗಳು ಹೆಚ್ಚು ಕಡಿಮೆ ಒಂದೇ ಕಾಲಘಟ್ಟಕ್ಕೆ (ಎಂಭತ್ತರ ದಶಕ) ಆರಂಭಗೊಂಡಿವೆ.
- ಈ ಎರಡೂ ಅಧ್ಯಯನಗಳ ಹಿನ್ನೆಲೆಯಲ್ಲಿಯೂ ಪಾಶ್ಚಾತ್ಯ ಸ್ತ್ರೀವಾದದ ಪ್ರೇರಣೆ, ಪ್ರಭಾವಗಳು ಇರುವುದು ಕಂಡುಬರುತ್ತದೆ. ಹಾಗಾಗಿ ಸ್ತ್ರೀವಾದಿ ಸಾಹಿತ್ಯ ಅಧ್ಯಯನದ ಜೊತೆ ಜೊತೆಗೆ ಪಶ್ಚಿಮದ ಸ್ತ್ರೀವಾದವನ್ನು ತಮ್ಮ ತಮ್ಮ ಭಾಷೆಗಳಿಗೆ ಭಾಷಾಂತರಿಸಿಕೊಳ್ಳುವ ಕೆಲಸವನ್ನು ಇವು ಮಾಡಿವೆ. ಉದಾ: ಕನ್ನಡ ಆರಂಭಿಕ ಸ್ತ್ರೀವಾದಿ ವಿಮರ್ಶಕಿಯರಾದ ವಿಜಯದಬ್ಬೆ, ಸುಮಿತ್ರಾಬಾಯಿ... ಮುಂತಾದವರು. ತೆಲುಗಿನ : ವಸಂತ ಕನ್ನಿಬಿರಾನ್, ಕೊಂಡಪೋಡಿ ನಿರ್ಮಲ, ಅಬ್ಬೂರಿ ಛಾಯಾದೇವಿ, ಓಲ್ಗಾ ಇತ್ಯಾದಿ. ಇವರುಗಳು ಸ್ತ್ರೀವಾದ ಎಂದರೇನು ಎನ್ನುವ ಬಗ್ಗೆ ಸಾಹಿತ್ಯ ನಿರ್ಮಾಣ ಮಾಡುವ ಕೆಲಸದಲ್ಲಿ ತೊಡಗಿಸಿಕೊಂಡಿರುವುದನ್ನು ಕಾಣಬಹುದು.
- ಸ್ತ್ರೀವಾದಿ ಸಾಹಿತ್ಯ ಅಧ್ಯಯನವನ್ನು ಸ್ತ್ರೀವಾದಿ ಚಿಂತನೆಯ ಒಂದು ಪ್ರಮುಖ ಭಾಗವಾಗಿ ಗ್ರಹಿಸಿರುವುದನ್ನು ಕಾಣಬಹುದು. ಅದಕ್ಕೆ ಅನುಗುಣವಾಗಿಯೆ ಕೃತಿಗಳ ವಿಶ್ಲೇಷಣೆಗೆ ತೊಡಗಿರುವುದನ್ನು ಕಾಣಬಹುದು.
- ಎರಡೂ ಅಧ್ಯಯನಗಳು ಪ್ರಧಾನವಾಗಿ ಮಹಿಳಾ ಸಾಹಿತ್ಯದ ವಿಮರ್ಶೆಗೆ ತೊಡಗಿಕೊಂಡವಾಗಿವೆ. ಉದಾ: ಕನ್ನಡ: ನಂಜನಗೂಡು ತಿರುಮಲಾಂಬಾ ಅವರನ್ನು ಕುರಿತು ಬಿ.ಎನ್. ಸುಮಿತ್ರಬಾಯಿ, ಆರ್. ಕಲ್ಯಾಣಮ್ಮನವರನ್ನು ಕುರಿತು ಡಿ.ಎಸ್. ಶಶಿಕಲಾ ಇತ್ಯಾದಿ. ತೆಲುಗು : ಭಂಡಾರು ಅಚ್ಚಮಾಂಬ ಸಚ್ಚರಿತ್ರ, ಕೊಂಡವಿಟಿ ಸತ್ಯವತಿ (ಲೇ), ವಾಸಿರೆಡ್ಡಿ ಸೀತಾದೇವಿ ಮರಿಚಿಕ ಸಾಮಾಜಿಕಮನೋ ವಿಶ್ಲೇಷಣೆ-ಕೆ.ಬಿ. ಸ್ನೇಹಪ್ರಭ (ಲೇ) ಇತ್ಯಾದಿ.

- ಮಹಿಳಾ ಸಾಹಿತ್ಯದ ಜೊತೆಗೆ ನಂತರದ ದಿನಗಳಲ್ಲಿ ವಿಮರ್ಶೆಗೆ ಒಳಪಡಿಸುವ ಕೆಲಸವನ್ನು ಕೈಗೊಂಡಿದ್ದಾರೆ. ಉದಾ: ವಚನ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು–ವಿದ್ಯಾವತಿ, ಸ್ತ್ರೀವಾದಿ ನೆಲೆಯಲ್ಲಿ ಪಂಪ–ಕುಮಾರವ್ಯಾಸ ಕೃತಿಗಳ ಪುನರಾಧ್ಯಯನ–ಪೂರ್ಣಿಮಾ ಇತ್ಯಾದಿ. ತೆಲುಗು: ಚಲಂ–ಸ್ತ್ರೀವಾದಿ ಸಾಹಿತ್ಯ–ಪಿ. ಸಂಜೀವಮ್ಮ, ಅಲಂಕಾರಶಾಸ್ತ್ರಂಲೋ, ಸ್ತ್ರೀ–ಕಾತ್ಯಾಯನಿ ವಿದ್ಮಹ ಇತಾದಿ.
- ಸಾಮಾಜಿಕ ನೆಲೆಯಲ್ಲಿ ಪುರುಷ ಪ್ರಧಾನ, ಸಾಮಾಜಿಕ ವ್ಯವಸ್ಥೆಯೇ ರೂಪಿಸಿರುವಂತಹ ಲಿಂಗ ಅಸಮಾನತೆ, ಲೈಂಗಿಕ ಶೋಷಣೆ ಮತ್ತು ಅವುಗಳಿಗೆ ಪ್ರತ್ಯೇಕವಾದ ಜಾತಿ, ವರ್ಗದಂತಹ ವಿಷಯಗಳನ್ನು ಕೇಂದ್ರಿತಗೊಂಡು ಕನ್ನಡ–ತೆಲುಗು ಭಾಷೆಗಳೆರಡರಲ್ಲಿನ ಸ್ತ್ರೀವಾದಿ ಅಧ್ಯಯನಗಳು ನಡೆದಿರುವುದು ಕಂಡುಬರುತ್ತದೆ.
- ಮಹಿಳಾ ಸಾಹಿತ್ಯದಲ್ಲಿ ವಿಶೇಷವೆಂಬಂತೆ ಕಂಡುಬರುವ ಪುರಾಣ ಭಂಜಕತೆಯ (ರಾಮಾಯಣ, ಮಹಾಭಾರತ ಇತ್ಯಾದಿ) ಅಂಶವನ್ನು ಎರಡೂ ಭಾಷೆಗಳ ಅಧ್ಯಯನಗಳು ಗುರುತಿಸಿ ವಿಶ್ಲೇಷಿಸುವ ಕೆಲಸವನ್ನು ಮಾಡಿವೆ. ಅದರ ಇತಿಮಿತಿಗಳನ್ನು ಕುರಿತು ಎರಡೂ ಭಾಷೆಗಳು ಚರ್ಚಿಸಿದ್ದು, ಪುರಾಣದ ಸ್ತ್ರೀ ಪಾತ್ರಗಳನ್ನು ಮುರಿದು ಕಟ್ಟುವ ಹಾಗೂ ಸಮಕಾಲೀನ ಆಶೋತ್ತರಗಳನ್ನು ಬಿಂಬಿಸುವ ಪುರಾಣಗಳಲ್ಲಿ ಅಂತರ್ಗತವಾಗಿರುವ ಅವೈಜ್ಞಾನಿಕತೆ, ಅವೈಚಾರಿಕತೆ ಮತ್ತು ವೈಭವೀಕರಣವನ್ನು ಅಲ್ಲಗಳೆದು ಸಮಕಾಲೀನ ಅಗತ್ಯಗಳಿಗೆ ಕೃತಿಗಳನ್ನು ಪುನರ್ ಸೃಷ್ಟಿಸುವ ಕೆಲಸ ಕನ್ನಡದ ಸಂದರ್ಭದಲ್ಲಿ ಹೆಚ್ಚು ನಡೆದಿದ್ದು ಇದು ತೆಲುಗಿನಲ್ಲಿ ಕಡಿಮೆಯಾಗಿದೆ.
- ಕಾಲದಿಂದ ಕಾಲಕ್ಕೆ ಕನ್ನಡ–ತೆಲುಗು ಸ್ತ್ರೀವಾದಿ ಕಾವ್ಯದಲ್ಲಿ ಆದ ಬದಲಾವಣೆಗಳೇನು? ಆಯಾ ಭಾಷೆಯ ಒಳಗಿನ ಸ್ತ್ರೀವಾದಿ ಕವಯತ್ರಿಯರ ಅಭಿವ್ಯಕ್ತಿ ಕ್ರಮದಲ್ಲಿನ ಭಿನ್ನತೆ ಉದಾ: ಮೇಲು ವರ್ಗದ ಸ್ತ್ರೀವಾದಿ ಲೇಖಕಿಯರ ಅಭಿವ್ಯಕ್ತಿ ಕ್ರಮಕ್ಕೂ ದಲಿತ (ಕೆಳವರ್ಗದ) ಲೇಖಕಿಯರ ಅಭಿವ್ಯಕ್ತಿ ಕ್ರಮಕ್ಕೂ ವ್ಯತ್ಯಾಸವಿದೆ. ಈ ಭಿನ್ನತೆಗಳಿಗೆ ಕಾರಣವಾದ ಸಾಂಸ್ಕೃತಿಕ ಅಂಶಗಳನ್ನು ಕುರಿತಾಗಿ ಸಂಕ್ಷಿಪ್ತ ರೂಪದ ಅಧ್ಯಯನಗಳು ಎರಡೂ ಭಾಷೆಗಳಲ್ಲಿ ನಡೆದಿವೆ.
- ಎರಡೂ ಅಧ್ಯಯನ ಪರಂಪರೆಗಳು ಪ್ರಮುಖ ಲೇಖಕಿಯರ ಸುತ್ತಲೇ ಸುತ್ತುವುದನ್ನು ಗಮನಿಸಬಹುದು. ಇತ್ತೀಚೆಗೆ ಮಾತ್ರ ಈ ಬಗೆಯ ಲೇಖಕಿ ಕೇಂದ್ರ ಅಧ್ಯಯನಕ್ಕೆ ಹೊರತಾದ ವಿಷಯ ಕೇಂದ್ರಿತ (ಥೀಮಿಯಾಟಿಕ್) ಅಧ್ಯಯನಗಳು ಕಾಣಿಸಿಕೊಳ್ಳುತ್ತಿವೆ.
- ಕನ್ನಡ–ತೆಲುಗು ಭಾಷೆಗಳೆರಡರಲ್ಲಿಯು ಸ್ತ್ರೀವಾದಿ ಸಾಹಿತ್ಯ ಅಧ್ಯಯನಗಳು ಆರಂಭಕ್ಕೆ ಕಾವ್ಯವನ್ನು ವಿಶೇಷವಾಗಿ ಕುರಿತದ್ದಾಗಿದ್ದು, ನಂತರದ ದಿನಗಳಲ್ಲಿ ಅದು ಕಥೆ, ಕಾದಂಬರಿ, ವಿಮರ್ಶೆ ಇತ್ಯಾದಿ ಪ್ರಕಾರಗಳ ಕಡೆ ಹೊರಳಿರುವುದು ಕಂಡುಬರುತ್ತದೆ.

ಎರಡೂ ಭಾಷೆಗಳ ಸ್ತ್ರೀವಾದಿ ಅಧ್ಯಯನಗಳಲ್ಲಿ ಕಂಡುಬರುವ ಸಾಮ್ಯತೆಯು ಅಚ್ಚರಿ ಎನಿಸುವಷ್ಟು ಇದ್ದು, ಈ ಅಂಶವನ್ನು ಗಮನದಲ್ಲಿಟ್ಟುಕೊಂಡು ಎರಡೂ ಸಾಹಿತ್ಯ ಪರಂಪರೆಗಳನ್ನು ತೌಲನಿಕ ಅಧ್ಯಯನಕ್ಕೆ ಒಳಪಡಿಸುವ ಕುತೂಹಲದೊಂದಿಗೆ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಅಧ್ಯಯನಗಳ ಸಾಮ್ಯತೆಗೆ ಅನುಗುಣವಾಗಿ ಸಾಹಿತ್ಯದಲ್ಲಿಯೂ ಸಾಮ್ಯತೆಯನ್ನು ಕಾಣಲು ಸಾಧ್ಯವೆ ಎನ್ನುವ ಪ್ರಶ್ನೆ ಈ ಅಧ್ಯಯನದ ಮುಂದಿದೆ.

## ಅಧ್ಯಾಯ : ಮೂರು

# ಕನ್ನಡ-ತೆಲುಗು ಸ್ತ್ರೀವಾದಿ ಸಾಹಿತ್ಯಗಳ ಹುಟ್ಟು ಮತ್ತು ಬೆಳವಣಿಗೆ

ಸ್ತ್ರೀವಾದ ಏಕರೂಪಿ ಪರಿಕಲ್ಪನೆ ಅಲ್ಲ. ಯಾವುದೇ ಒಂದು ಸಿದ್ಧಸೂತ್ರದಿಂದ ಸ್ತ್ರೀವಾದ ತನ್ನ ಪರಿಕಲ್ಪನೆ ಮತ್ತು ತಾತ್ವಿಕ ನೆಲೆಗಟ್ಟನ್ನು ರೂಪಿಸಿಕೊಂಡಿಲ್ಲ. ಬದಲಾಗಿ ಅದು ಬಹುಮುಖವಾದ ವಿಚಾರಗಳಿಂದ ಮತ್ತು ಚಟುವಟಿಕೆಗಳಿಂದ ರೂಪುಗೊಂಡಿದೆ. ಹಾಗಿದ್ದರೆ ಸ್ತ್ರೀವಾದ ಎಂದರೆ ಏನು..? ಈ ಪ್ರಶ್ನೆಗೆ ಉತ್ತರ ಹುಡುಕುವ ಅನೇಕ ಪ್ರಯತ್ನಗಳು ನಡೆದಿವೆ. ಆದರೆ ಸ್ತ್ರೀವಾದದ ಹಲವು ಎಳೆಗಳ ನಡುವೆ ಇರುವ ಸಂಕೀರ್ಣತೆಯಿಂದಾಗಿ ಎಲ್ಲಾ ಕಾಲಕ್ಕೂ ಮತ್ತು ಪ್ರದೇಶಗಳಿಗೂ ಅನ್ವಯಿಸಬಹುದಾದ ಉತ್ತರವೊಂದನ್ನು ಪಡೆಯುವುದು ಕಷ್ಟಸಾಧ್ಯ. ಹಾಗಾಗಿಯೇ ಇದಕ್ಕೆ ನಿರ್ದಿಷ್ಟ ನಿರೂಪಣೆ ಇಲ್ಲ. ಸ್ತ್ರೀವಾದದ ನಿರೂಪಣೆ ಚಾರಿತ್ರಿಕವಾದ ಮತ್ತು ಸಾಂಸ್ಕೃತಿವಾದ ಕೆಲವು ಕಟುವಾಸ್ತವಗಳು, ತಿಳುವಳಿಕೆಯ ಮಟ್ಟ, ಗ್ರಹಿಕೆ ಮತ್ತು ಕಾರ್ಯಚಟುವಟಿಕೆಗಳನ್ನು ಆಧರಿಸಿ ಬದಲಾಗಬಹುದು ಮತ್ತು ಬದಲಾಗುತ್ತದೆ ಕೂಡ. ಹೀಗಾಗಿ ಎಲ್ಲಾ ಕಾಲಘಟ್ಟದಲ್ಲಿಯೂ ಸ್ತ್ರೀವಾದ ತನ್ನ ಅರ್ಥವನ್ನು ವಿಸ್ತರಿಸಿಕೊಳ್ಳುತ್ತಾ ಅಥವಾ ಬದಲಾಗುತ್ತಾ ಸಾಗಿದೆ.

ಈ ಹಿನ್ನೆಲೆಯಲ್ಲಿ ಕನ್ನಡ-ತೆಲುಗು ಎಂಬ ಎರಡೂ ಭಿನ್ನ ಸಾಂಸ್ಕೃತಿಕ ಸಂದರ್ಭದಲ್ಲಿ ಸ್ತ್ರೀವಾದವು ತನ್ನ ಅರ್ಥವನ್ನು ಪಡೆದುಕೊಂಡ ಮತ್ತು ವ್ಯಾಪ್ತಿಯನ್ನು ಗುರುತಿಸಿಕೊಂಡ ವಿಚಾರವನ್ನು ಕುರಿತಂತೆ ಪ್ರಸ್ತುತ ಅಧ್ಯಯನದಲ್ಲಿ ಗಮನಿಸಲಾಗಿದೆ. ಅದಕ್ಕೆ ಪೂರ್ವಭಾವಿಯಾಗಿ ಪಾಶ್ಚಿಮಾತ್ಯ ಜಗತ್ತಿನಲ್ಲಿ ಮತ್ತು ಭಾರತೀಯ ಸಂದರ್ಭದಲ್ಲಿ ಸ್ತ್ರೀವಾದ ಹೇಗೆ ಬೆಳೆದು ಬಂತು ಎಂಬುದನ್ನು ಸ್ಥೂಲವಾಗಿ ಪರಿಚಯಿಸಿಕೊಡುವ ಪ್ರಯತ್ನವನ್ನು ಮಾಡಲಾಗಿದೆ.

**ಪಾಶ್ಚಾತ್ಯ ಸಂದರ್ಭ :**

"ಸ್ತ್ರೀವಾದ" ಎಂಬ ಪದ ಬಹುಪಾಲು ಆಧುನಿಕವಾದುದು. ಇದನ್ನು ೧೮೭೧ರಲ್ಲಿ ಫ್ರೆಂಚ್ ವೈದ್ಯಕೀಯ ಗ್ರಂಥವೊಂದರಲ್ಲಿ ಮೊದಲ ಬಾರಿಗೆ ಬಳಸಲಾಯಿತು. ಪುರುಷರ ಲೈಂಗಿಕ ಅಂಗಗಳ ಬೆಳವಣಿಗೆ ಕುಂಠಿತವಾದಾಗ ಕಾಣಿಸಿಕೊಳ್ಳುವ ಲಕ್ಷಣಗಳನ್ನು ಗುರುತಿಸಿ ಅದರಿಂದಾಗಿ ಅವರ ದೇಹ "ಸ್ತ್ರೀತ್ವ"ದಿಂದ ನರಳುತ್ತಿದೆ ಎಂದು ವಿವರಿಸಲು ಈ "ಫೆಮಿನಿಸಂ" ಎಂಬ ಪದ ಬಳಸಲಾಯಿತು.

ನಂತರ ೧೮೭೨ರಲ್ಲಿ ಫ್ರೆಂಚ್ ಲೇಖಕ ಅಲೆಗ್ಸಾಂಡರ್ ಡೋಮಸ್ "ಫೆಮಿನಿಸಂ" ಎನ್ನುವ ಪದವನ್ನು "ವ್ಯಭಿಚಾರ" ಎನ್ನುವ ಪದಕ್ಕೆ ಸಮನಾಂತರವಾಗಿ ಬಳಸಿದ. ಮಹಿಳೆಯರನ್ನು ವಿಟ ಪುರುಷರಂತೆ ವರ್ಣಿಸಲು ಈ ಪದವನ್ನು ಅದೇ ಅರ್ಥದಲ್ಲಿ ಬಳಸಲಾಯಿತು. (ಸುಧಾ ಸೀತಾರಾಮ್ : ಮಹಿಳಾ ಅಧ್ಯಯನ (ಸಮಾಜಶಾಸ್ತ್ರೀಯ ದೃಷ್ಟಿಕೋನ), ಸ್ತ್ರೀಲೇಖ -ಪುಟ-೧೯)

ಮೇಲಿನ ಈ ಎರಡೂ ಹೇಳಿಕೆಗಳು ಕೂಡ ಈ ಹೊತ್ತು "ಫೆಮಿನಿಸಂ" ಎನ್ನುವ ಪದವನ್ನು ಬಳಸುತ್ತಿರುವುದಕ್ಕಿಂತ ಅತ್ಯಂತ ಭಿನ್ನವಾದ ಅರ್ಥದಲ್ಲಿ ಬಳಕೆಗೊಂಡಿದೆ. ಇವುಗಳಲ್ಲಿ ಮೊದಲನೆಯ ವ್ಯಾಖ್ಯಾನವು ಪುರುಷರಿಗಿರುವ ಒಂದು ಕೊರತೆಯನ್ನು ಗುರುತಿಸುತ್ತ ಅದಕ್ಕೆ "ಸ್ತ್ರೀತ್ವ" ಮತ್ತು "ಫೆಮಿನಿಸಂ" ಎನ್ನುವ ಪದವನ್ನು ಬಳಸುತ್ತದೆ. ಮತ್ತು ಅದರ ಕೊರತೆ ಕುಂಟಿತ, ನರಳುವಿಕೆ ಇತ್ಯಾದಿ ಪದಗಳನ್ನು ಬಳಸುವ ಮೂಲಕ ಅದನ್ನು ಋಣಾತ್ಮಕವಾದ ಪರಿಕಲ್ಪನೆಯಾಗಿ ಪರಿಭಾವಿಸಿದೆ.

ಎರಡನೆಯ ಹೇಳಿಕೆಯು ಹೆಚ್ಚು ಕಡಿಮೆ ಇದೇ ಕಾಲಘಟ್ಟದಲ್ಲಿ ಕಾಣಿಸಿಕೊಂಡ ವ್ಯಾಖ್ಯಾನವಾಗಿದ್ದು, ಈ ವ್ಯಾಖ್ಯಾನದಲ್ಲಿ "ಫೆಮಿನಿಸಂ" ಎಂಬ ಪದವು ಪುರುಷನಿಗೆ ಸಂಬಂಧಪಟ್ಟಂತೆ ಬಳಕೆಗೊಂಡಿಲ್ಲ. ಆದರೆ ಮಹಿಳೆಗೆ ಸಂಬಂಧಪಟ್ಟಂತೆ ಬಳಕೆಗೊಳ್ಳುವ ಸಂದರ್ಭದಲ್ಲಿ ಅದು ನಿರ್ಭಿಡೆಯ ವ್ಯಕ್ತಿತ್ವದ ಮಹಿಳೆಯರನ್ನು ಪುರುಷ ಪ್ರಧಾನ ಸಮಾಜವು ಗ್ರಹಿಸುವ ದೃಷ್ಟಿಕೋನದ ಹಿನ್ನೆಲೆಯಲ್ಲಿ ಗ್ರಹಿಸಿದೆ. ಹಾಗಾಗಿ ಇದು "ಫೆಮಿನಿಸಂ" ಎಂಬ ಪದವನ್ನು "ವ್ಯಭಿಚಾರ" ಎನ್ನುವ ಅರ್ಥಕ್ಕೆ ಸಂವಾದಿಯಾಗಿ ಬಳಸುತ್ತದೆ.

೧೯ನೇ ಶತಮಾನದ ಕೊನೆಯಲ್ಲಿ "ಸ್ತ್ರೀವಾದ" ಎಂಬ ಪದ ವ್ಯಾಪಕ ಬಳಕೆಗೆ ಒಳಪಟ್ಟಿತು. ಮಹಿಳೆಯರು ತಮ್ಮನ್ನು ವಿವರಿಸಿಕೊಳ್ಳುವ ಒಂದು ವಿಶ್ಲೇಷಣಾತ್ಮಕ ಪದವಾಗಿ ಅದನ್ನು ಬಳಸಿಕೊಂಡಿದ್ದು. ಸಮಾಜದಲ್ಲಿ ಸ್ತ್ರೀ–ಪುರುಷರ ನಡುವಿನ ಅಸಮಾನತೆ ಮತ್ತು ಸ್ತ್ರೀಯರ ಮೇಲೆ ನಡೆಸುತ್ತಿದ್ದ ಅನ್ಯಾಯದ ವಿರುದ್ಧ ಸಾಕಷ್ಟು ಬರವಣಿಗೆ, ಹೋರಾಟ ಮತ್ತು ಚಳವಳಿಗಳು ನಡೆದ ನಂತರವೇ ಈ ಪರಿಕಲ್ಪನೆ ಬಳಕೆಗೆ ಬಂದಿತು. ಇಷ್ಟಾಗಿಯೂ ಬಹಳ ಕಾಲದವರೆಗೆ ಮಹಿಳಾ ಹಕ್ಕುಗಳ ಬಗ್ಗೆ ಹೋರಾಟ ನಡೆಸುತ್ತಿದ್ದ ಅನೇಕರು ಇದನ್ನು ಬಳಸುತ್ತಿರಲಿಲ್ಲ. ೧೯೬೦ರ ಅಂತ್ಯದಲ್ಲಿ ಮತ್ತು ೧೯೭೦ರ ಆರಂಭದಲ್ಲಿ ಹೋರಾಟ ನಡೆಸುತ್ತಿದ್ದ ಅನೇಕ ಮಹಿಳಾ ಸಂಘಟನೆಗಳು ತಮ್ಮನ್ನು ಸ್ತ್ರೀವಾದಿಗಳೆಂದು ಕರೆದುಕೊಂಡಿರಲಿಲ್ಲ. ನಂತರವಷ್ಟೇ ಮಹಿಳಾ ಹಕ್ಕುಗಳಿಗಾಗಿ ಹೋರಾಟ ನಡೆಸುವ ಎಲ್ಲಾ ಸಂಘಟನೆಗಳನ್ನೂ "ಸ್ತ್ರೀವಾದಿ" ಎಂದು ಕರೆಯಲಾಯಿತು.

ಮುಖ್ಯವಾಗಿ ಸಮತಾವಾದ, ಮಾನವತಾವಾದಗಳು ಸ್ತ್ರೀವಾದ ಹುಟ್ಟಿಕೊಳ್ಳಲು ಪ್ರೇರಣೆಯನ್ನೊದಗಿಸಿದವು. ಜಗತ್ತಿನಾದ್ಯಾಂತ ಕಾಣಿಸಿಕೊಂಡ ಜಾಗೃತಿ ಚಳವಳಿಗಳು, ಹೋರಾಟಗಳು ಮುಖ್ಯವಾಗಿ ಫ್ರೆಂಚ್ ಕ್ರಾಂತಿ, ಅಮೆರಿಕಾದ ಕ್ರಾಂತಿಗಳು ಪ್ರಭಾವ ಬೀರಿದವು. ಬಲಿಷ್ಠರು, ದುರ್ಬಲರ ಮೇಲೆ ನಡೆಸುವ ಕ್ರೌರ್ಯ, ಶೋಷಣೆ, ಅನ್ಯಾಯ, ಹಿಂಸೆಗಳಿಂದ ಎಚ್ಚೆತ್ತು, ಪ್ರಜ್ಞಾವಂತರು ವಿರೋಧಿಸಿದರೂ, ಪ್ರಶ್ನಿಸಿದರೂ ಇಂತಹ ಎಲ್ಲಾ ಅನ್ಯಾಯಗಳಿಗೆ ಒಳಗಾದ ಹೆಣ್ಣಿನ ಬಗೆಗಿನ ಕಳಕಳಿಯು ಕೂಡ ಸ್ತ್ರೀವಾದದ ಹುಟ್ಟಿಗೆ ಕಾರಣವಾಯಿತು.

ಪಶ್ಚಿಮದ ಮಹಿಳೆಯರ ಈ ಸಂಘಟಿತ ಹೋರಾಟಗಳ ಕೇಂದ್ರದಲ್ಲಿ ಬೇರೆ ಬೇರೆ ಮಹಿಳಾ ಸಮಸ್ಯೆಗಳಿದ್ದವು. ಆದರೆ ಆ ಎಲ್ಲಾ ಹೋರಾಟಗಳಿಗೂ ಅಂತಿಮವಾಗಿ ಮಹಿಳೆಯರ ಬಿಡುಗಡೆಯೇ ಗುರಿಯಾಗಿದ್ದುದರಿಂದ ಪಶ್ಚಿಮದ ಮಹಿಳೆಯರ ಈ ೧೯೬೦–೭೦ರ ದಶಕಗಳ ಹೋರಾಟಗಳನ್ನು

ಒಟ್ಟಾಗಿ "ಮಹಿಳಾ ವಿಮೋಚನೆಯ ಚಳವಳಿ" ಎಂಬುದಾಗಿ ಘೋಷಿಸಲಾಯಿತು. ಇದು ನಿರ್ಧಿಷ್ಟವಾದ, ನಿಕರವಾದ ಸ್ತ್ರೀವಾದಿ ಚಿಂತನೆಗಳಿಗೆ ಎಡೆಮಾಡಿಕೊಟ್ಟಿತು.

ರೊಮ್ಯಾಂಟಿಕ್ ಚಳವಳಿಯ ಸಂದರ್ಭದಲ್ಲಿ ಮೂಡಿಬಂದ ಮಾನವತಾವಾದ, ಆದರ್ಶವಾದ, ಉದಾರವಾದ ಹಾಗೂ ವಿಚಾರವಾದಗಳ ಫಲವಾಗಿ ಸ್ತ್ರೀಯರ ಸ್ಥಿತಿಗತಿಗಳ ಸೂಕ್ಷ್ಮಾವಲೋಕನವು ನಡೆಯಿತು. ಯಂತ್ರನಾಗರೀಕತೆಯ ಪರಿಣಾಮದಿಂದ ಸಾಮಾಜಿಕ, ರಾಜಕೀಯ, ಶೈಕ್ಷಣಿಕ ವ್ಯವಸ್ಥೆಗಳಲ್ಲಿ ಸಾಕಷ್ಟು ಮಾರ್ಪಾಡುಗಳು ಕಾಣಿಸಿಕೊಂಡವು. ಬಂಡವಾಳಶಾಹಿ, ಜಮೀನ್ದಾರಿ ಪದ್ಧತಿ, ಬಂಧನದ ಸ್ಥಿತಿಗತಿಗಳೂ ಶೋಷಣೆಯ ಕೇಂದ್ರಗಳಾದವು. ವರ್ಗ ವರ್ಣಪದ್ಧತಿಗಳೂ ಸಮಾಜದಲ್ಲಿ ಅಸಮಾನತೆಗಳೂ ಕಾಣಿಸಿಕೊಳ್ಳಲು ಕಾರಣವಾಗಿದ್ದವು. ಶೋಷಿತ–ಶೋಷಕ ಪ್ರವೃತ್ತಿ ಇದ್ದೇ ಇತ್ತು. ದಮನಕ್ಕೊಳಗಾದವರೂ ಎಂದಾದರೊಂದುದಿನ ತಮ್ಮ ಸ್ವಾತಂತ್ರ್ಯ ರಹಿತ ಬಂಧನದ ಸ್ಥಿತಿಯಿಂದ ಎಚ್ಚೆತ್ತುಕೊಂಡು ತಮ್ಮ ವ್ಯಕ್ತಿತ್ವವನ್ನು ದಾಖಲಿಸುವ ಹೋರಾಟ ಮಾಡುವುದು ಪ್ರಕೃತಿ ಸಹಜ ಗುಣ. ಈ ಹಿನ್ನೆಲೆಯಲ್ಲಿ ಲೈಂಗಿಕ ಕಾರಣದಿಂದಲೇ ದಮನಕ್ಕೆ ಒಳಪಟ್ಟ ಹೆಣ್ಣು ಎಚ್ಚೆತ್ತುಕೊಂಡಳು.

ವಾಸ್ತವವಾಗಿ ಹೆಣ್ಣೊಬ್ಬಳು ನಿರ್ವಹಿಸುತ್ತಿರುವ ತಾಯಿ, ಹೆಂಡತಿ, ಮಗಳು, ಗೃಹಿಣಿ ಮುಂತಾದ ಪಾತ್ರಗಳು ಹುಟ್ಟಿನಿಂದ ಬಂದವುಗಳಲ್ಲ. ಇತಿಹಾಸದ ಒಂದು ಘಳಿಗೆಯಲ್ಲಿ ಆಕಸ್ಮಿಕವಾಗಿ ಹುಟ್ಟಿಕೊಂಡವು. ಸಂದರ್ಭ ವಲಯಗಳು ಬದಲಾದ ಹಾಗೆ ಇವೂ ಬದಲಾಗುವ ಸಾಧ್ಯತೆ ಇದೆ ಎಂಬುದನ್ನು ಕೆಲವು ಪಾಶ್ಚಾತ್ಯ ಸ್ತ್ರೀವಾದಿ ಲೇಖಕಿಯರು ಪ್ರತಿಪಾದಿಸಿದರು.

ಪಾಶ್ಚಾತ್ಯ ಜಗತ್ತಿನಲ್ಲಿ ಸ್ತ್ರೀವಾದಕ್ಕೆ ಸಂಬಂಧಿಸಿದ ಚರ್ಚೆ ೧೯೬೦ರ ದಶಕಗಳಲ್ಲೇ ಗಂಭೀರವಾಗಿ ಕಾಣಿಸಿಕೊಂಡಿದೆ. ಆದರೆ ಇದಕ್ಕೆ ಸುಮಾರು ಎರಡು ದಶಕಗಳ ಹಿಂದೆಯೇ ಸ್ತ್ರೀ ವಿಮೋಚನಾ ಹೋರಾಟ ಪ್ರಾರಂಭವಾಗಿದ್ದು. ಅದಕ್ಕೊಂದು ಸುದೀರ್ಘ ಇತಿಹಾಸವಿತ್ತು. ೧೯೭೨ರಲ್ಲಿ ಮೇರಿ ವೋಲ್ಸಟನ್ ಕ್ರಾಫ್ಟ್ ರಚಿಸಿದ "ಎ ವಿಂಡಿಕೇಷನ್ ಆಫ್ ರೈಟ್ ಆಫ್ ವಿಮೆನ್" ಎಂಬ ಗ್ರಂಥ ೧೮೬೯ರಲ್ಲಿ ಜಾನ್ ಸ್ಟೂವರ್ಟ್‌ಮಿಲ್ ರಚಿಸಿದ "ದಿ ಸಬ್ಜೆಕ್ಷನ್ ಆಫ್ ವಿಮೆನ್" ಹಾಗೂ ೧೮೪೫ರಲ್ಲಿ ಮಾರ್ಗರೆಟ್ ಫುಲರ್ ರಚಿಸಿದ "ವುಮನ್ ಇನ್ ನೈನ್‌ಟೀನ್ತ್ ಸೆಂಚುರಿ" ಮುಂತಾದ ಕೃತಿಗಳು ಪಾಶ್ಚಾತ್ಯ ಸ್ತ್ರೀ ಹೋರಾಟ, ಚಳವಳಿಗಳ ಮುಖವಾಣಿಗಳಾಗಿವೆ. ಇದಾದ ನಂತರ ಇದೇ ಪರಂಪರೆಯಲ್ಲಿ ಬಂದ ವರ್ಜಿನಿಯಾ ವುಲ್ಫಳು ೧೯೨೯ರಲ್ಲಿ ರಚಿಸಿದ "ಎ ರೂಮ್ ಆಫ್ ಒನ್ಸ್ ಓನ್" ಗ್ರಂಥ ಈ ಚಿಂತನೆಗೊಂದು ವಿಮರ್ಶಾತ್ಮಕ ಸ್ವರೂಪವನ್ನು ತಂದುಕೊಟ್ಟಿದೆ. ಮುಖ್ಯವಾಗಿ ಈ ಕೃತಿಗಳಲ್ಲಿ ಹೆಣ್ಣಿನ ಸಾಂಸ್ಕೃತಿಕ, ಆಧ್ಯಾತ್ಮಿಕ, ಶೈಕ್ಷಣಿಕ ದುರ್ಬಲತೆಗಳನ್ನು ಕುರಿತು ಚರ್ಚಿಸುತ್ತ ಈ ಎಲ್ಲ ದಾರಿದ್ರ್ಯ ಅಜ್ಞಾನ ಸಮಸ್ಯೆಗಳಿಗೆ ಪಿತೃ ಪ್ರಧಾನ ಸಮಾಜವೇ ಕಾರಣವಾಗಿದೆ ಎಂದು ಗುರುತಿಸಲಾಗಿದೆ.

ಹೆಣ್ಣು ತನ್ನ ಸೃಜನಶೀಲತೆ, ವಿಚಾರವಂತಿಕೆಗಳನ್ನು ಬಳಸಿಕೊಳ್ಳಲು ಸಾಧ್ಯವಾಗದಿದ್ದಕ್ಕೆ ಪುರುಷ ಪ್ರಧಾನ ಕುಟುಂಬ ವ್ಯವಸ್ಥೆಯೇ ಮುಖ್ಯ ಕಾರಣ ಎಂದು ಗುರುತಿಸಿದರು. ಫ್ರಾನ್ಸ್ ದೇಶದ ಸ್ತ್ರೀವಾದಿ ಚಿಂತಕಿ ಸಿಮನ್ ದಿ ಬೋವಾ ೧೯೪೯ರಲ್ಲಿ ರಚಿಸಿದ "ದ ಸೆಕೆಂಡ್ ಸೆಕ್ಸ್" ಎಂಬ ಕೃತಿಯಲ್ಲಿ ಮುಖ್ಯವಾಗಿ ಹೆಣ್ಣಿನ ಅಧಃಪತನದ ಕಾರಣಗಳನ್ನು ಗುರುತಿಸಲು ನೆರವಾಗುವಂತೆ ಹೆಣ್ಣಿನ ಸಾಂಸ್ಕೃತಿಕ ವ್ಯಕ್ತಿತ್ವದ ಅಧ್ಯಯನವನ್ನು ನಡೆಸಿದಳು. ಆನಂತರ ಈ ಚಿಂತನೆಯನ್ನು ಮತ್ತಷ್ಟು ಪ್ರಬಲಗೊಳಿಸಿದಳು. ೧೯೬೮ರಲ್ಲಿ ಥಿಂಕಿಂಗ್ ಅಬೌಟ್ ವಿಮೆನ್" ಕೃತಿಯನ್ನು ರಚಿಸಿದ "ಮೇರಿ ಎಲ್ಮನ್ ಶೋವಾಲ್ಟರ್" ಇದರ ಹಿಂದೆಯೆ ೧೯೭೦ರಲ್ಲಿ ಪ್ರಕಟಗೊಂಡ "ಸೆಕ್ಷುವಲ್ ಪಾಲಿಟಿಕ್"ನಲ್ಲಿ ಕೇಟ್ ಮಿಲ್ಲೇಟ್ ಪಾಶ್ಚಾತ್ಯ ಸಮಾಜದ ವಿನ್ಯಾಸ ಮತ್ತು ಸಾಮಾಜಿಕ ಸಂಸ್ಥೆಗಳಲ್ಲಿ ಗಂಡಿನ ಹಿರಿಮೆ ಹಾಗೂ ಹೆಣ್ಣಿನ ಅಧೀನತೆಯನ್ನು ಎತ್ತಿಹಿಡಿಯುವ ಉದ್ದೇಶವನ್ನೇ ಹೊಂದಿದ್ದು ಬದುಕಿನ ಪ್ರತಿಯೊಂದು ಅಂಶದಲ್ಲೂ ಅಂತಹ ಸಂದರ್ಭಗಳನ್ನೇ ಸೃಷ್ಟಿಮಾಡಿಕೊಳ್ಳುತ್ತದೆ ಎಂದು ಪ್ರತಿಪಾದಿಸುತ್ತಲೇ ಪ್ರಾಯ್ಡ್‌ನ ಮನೋವಿಶ್ಲೇಷಣಾ ಸಿಂದ್ಧಾಂತವೂ ಕೂಡ ಪುರುಷ ಪಕ್ಷಪಾತ ಹಾಗೂ ಪೂರ್ವಗ್ರಹಗಳನ್ನು ಹೊಂದಿದೆ ಎಂಬುದನ್ನು ಅತ್ಯಂತ ತಾರ್ಕಿಕವಾಗಿ ತೋರಿಸಿಕೊಟ್ಟಳು. ಮುಖ್ಯವಾಗಿ ಆಕೆ ಸಾಹಿತ್ಯ ಕೃತಿಗಳಲ್ಲಿ ಹೇಗೆ ಪುರುಷ ಲೇಖಕರು ತಮ್ಮ ಕೃತಿಗಳ ನಾಯಕನ ಲೈಂಗಿಕ ಸಾಮರ್ಥ್ಯದ ವಿಜೃಂಭಣೆಗೆ ಹೆಚ್ಚು ಒತ್ತುಕೊಡುತ್ತ ಹೆಣ್ಣನ್ನು ಸೋಲಿನ ಪ್ರತಿಮೂರ್ತಿಯಾಗಿ ಚಿತ್ರಿಸುತ್ತಾರೆ ಎಂಬುದನ್ನು ಎತ್ತಿ ತೋರಿಸಿದಳು.

ಹೀಗೆ ಪಾಶ್ಚಾತ್ಯ ಸ್ತ್ರೀವಾದಿಗಳಲ್ಲಿ ಅನೇಕರು ಸ್ತ್ರೀವಾದಿ ಸಾಹಿತ್ಯದ ಗೊತ್ತು ಗುರಿಗಳನ್ನು ಕುರಿತಂತೆ ತಮ್ಮ ವಿಚಾರಗಳನ್ನು ಮಂಡಿಸಿದ್ದಲ್ಲದೆ, ಇವರೆಲ್ಲರ ಪ್ರಧಾನ ಆಶಯವೂ ಕೂಡ ಮಹಿಳಾ ಸಾಹಿತ್ಯವು ಪರಂಪರಾಗತ ಅಂಗೀಕೃತ ಮಾದರಿಗಳನ್ನು ತಿರಸ್ಕರಿಸಿ ಸ್ತ್ರೀ ಸಮಾನತೆ, ಸ್ತ್ರೀ ಸ್ವಾತಂತ್ರ್ಯದ ಗಳಿಕೆಗಾಗಿ ಇತ್ಯಾತ್ಮಕ ಮಾದರಿಗಳನ್ನು ಕಟ್ಟಿಕೊಡಬೇಕು ಎಂಬುದೇ ಆಗಿದೆ.

**ಭಾರತದ ಸಂದರ್ಭ :**

ಸ್ತ್ರೀವಾದದ ಅರ್ಥವು ಕಾಲ-ದೇಶಗಳಿಗೆ ತಕ್ಕಂತೆ ಬೇರೆ ಬೇರೆಯಾಗುತ್ತದೆ. ವಿದೇಶಗಳಲ್ಲಿ ಸ್ತ್ರೀವಾದಕ್ಕೆ ಭಾರತಕ್ಕಿಂತ ಭಿನ್ನ ಅರ್ಥ ಇರಬಹುದು. ಹಾಗೆಯೇ ಹದಿನೇಳನೇ ಶತಮಾನದಲ್ಲಿ ಅದಕ್ಕಿದ್ದ ಅರ್ಥ ಎಂಭತ್ತನೇ ದಶಕದಲ್ಲಿ ಬದಲಾಗಿರಬಹುದು. ಒಂದೇ ಹಿನ್ನೆಲೆಯ ಮಹಿಳೆಯರಲ್ಲಿ ಸಹ ವಿವಿಧ ಅಭಿಪ್ರಾಯ ಮತ್ತು ಅನಿಸಿಕೆಗಳಿರಬಹುದು. ಮತ್ತು ಬೇರೆ ಬೇರೆ ರೀತಿಯಲ್ಲಿ ಇದನ್ನು ವ್ಯಾಖ್ಯಾನಿಸಬಹುದು. ಆದರೆ ಎಲ್ಲರ ಮೂಲ ಆಶಯ ಮುಖ್ಯ ಅಭಿಪ್ರಾಯದಲ್ಲಿ ಭಿನ್ನತೆ ಇರಲಿಲ್ಲ. ಅದು ಒಂದೇ ಆಗಿತ್ತು ಎನ್ನುವ ಕಮಲಾ ಭಾಸಿನ್ ಮತ್ತು ನಿಘಾತ ಸಯ್ಯದ್‌ಖಾನ್ ಅವರು ಬರೆದ "ಸ್ತ್ರೀವಾದ" (೧೯೮೯ ದಕ್ಷಿಣ ಏಷ್ಯಾದಲ್ಲಿ ಅದರ ಪ್ರಸ್ತುತತೆ (ಅನುವಾದ: ವೆಂ. ವನಜ ಮತ್ತು ಎಚ್.ಆರ್. ರಾಜೇಶ್ವರಿ) ಎಂಬ ಪುಸ್ತಕದಲ್ಲಿ ಎಲ್ಲರ ತರ್ಕ, ಎಲ್ಲರ ಅನಿಸಿಕೆ, ವಿಚಾರಗಳನ್ನೆಲ್ಲ ಒಟ್ಟಾಗಿ ಹಾಕಿ ಮಥಿಸಿ ಒಂದು ವ್ಯಾಪಕ ಪರಿಭಾಷೆಯನ್ನು

ಸ್ತ್ರೀವಾದಿಗಳು ನೀಡಿದ್ದಾರೆ. ಅದೇಂದರೆ ಸಮಾಜದಲ್ಲಿ ಕಾರ್ಯಕ್ಷೇತ್ರದಲ್ಲಿ (ಉದ್ಯೋಗ ಸ್ಥಳ ಎಂದರ್ಥ) ಹಾಗೂ ಕುಟುಂಬದಲ್ಲಿ ನಡೆಯಬಹುದಾದ ಸ್ತ್ರೀಶೋಷಣೆಯ ಬಗೆಗಿನ ಅರಿವು ಹಾಗೂ ಈ ಸನ್ನಿವೇಶವನ್ನು ಬದಲಾಯಿಸಲು ಹೆಂಗಸರು ಮತ್ತು ಗಂಡಸರು ಕೈಗೊಳ್ಳುವ ಪ್ರಜ್ಞಾಪೂರ್ವಕ ಕ್ರಿಯೆಯೇ "ಸ್ತ್ರೀವಾದ" ಎಂದು ಆ ಸಮಯದಲ್ಲಿ ಅಂದರೆ ೮೦ರ ದಶಕದಲ್ಲಿ ನಡೆದ ದಕ್ಷಿಣ ಏಷ್ಯಾ ಸಮ್ಮೇಳನದಲ್ಲಿ ಭಾರತ, ಬಾಂಗ್ಲಾದೇಶ, ನೇಪಾಳ, ಪಾಕಿಸ್ತಾನ ಮತ್ತು ಶ್ರೀಲಂಕಾದ ಹೆಂಗಸರು ಸ್ವೀಕಾರಾರ್ಹವೆಂದು ಪರಿಗಣಿಸಿದರು. (ಕೆ.ಎಂ. ವಿಜಯಲಕ್ಷ್ಮಿ : ಸ್ತ್ರೀವಾದ-ಸಾಹಿತ್ಯದ ಒಂದು ಚಳವಳಿ) ಈ ವ್ಯಾಖ್ಯೆಯ ಪ್ರಕಾರ ಲಿಂಗಬೇಧ ನಡೆಯುತ್ತಿದೆ ಎಂದು ಗುರುತಿಸುವ ಪಿತೃ ಪ್ರಧಾನತೆ ಮತ್ತು ಪುರುಷ ದಬ್ಬಾಳಿಕೆಗಳನ್ನು ಅರಿವಿಗೆ ತಂದುಕೊಳ್ಳುವ ಹಾಗೂ ಇವುಗಳನ್ನು ತಡೆಯಲು ಏನಾದರೂ ಕ್ರಿಯೆಯನ್ನು ಕೈಗೊಳ್ಳುವ ಯಾರೇ ಆಗಲಿ ಅವರನ್ನು ಸ್ತ್ರೀವಾದಿ ಎಂದು ಕರೆಯಬಹುದು.

ಭಾರತೀಯ ಸ್ತ್ರೀವಾದಿ ಚಿಂತನೆ ಪಾಶ್ಚಾತ್ಯ ಸ್ತ್ರೀವಾದಿ ಚಿಂತನೆಗಳಿಂದ ಸಾಕಷ್ಟು ಪ್ರಭಾವವನ್ನು ಪಡೆದರೂ ಕೂಡ ಜಾಗತಿಕವಾಗಿ ಸ್ತ್ರೀವಾದ ರೂಪಗೊಂಡ ಸ್ಥಿತಿಗಿಂತ ಬೇರೆ ಪರಿಸರ ಹಾಗೂ ಮಹಿಳಾ ಬದುಕು ನಮ್ಮ ದೇಶದಲ್ಲಿದೆ. ಇಲ್ಲಿನ ವಿಭಿನ್ನ ಜಾತಿ, ವರ್ಗ, ವರ್ಣಗಳೂ ಕೂಡ ಮಹಿಳಾ ಬದುಕಿನ ಮೇಲೆ ಪರಿಣಾಮ ಉಂಟುಮಾಡಿವೆ. ಹೀಗಾಗಿ ಭಾರತೀಯ ಮಹಿಳೆಯರ ಸಮಸ್ಯೆಗಳನ್ನು ವಿಶ್ವಾತ್ಮಕ ನೆಲೆಯಲ್ಲಾಗಲಿ, ರಾಷ್ಟ್ರೀಯ ನೆಲೆಯಲ್ಲಾಗಲಿ ವಿಶ್ಲೇಷಿಸುವುದು, ಪರಿಹಾರವನ್ನು ಸೂಚಿಸುವುದು ಸರಿಯಾಗಲಾರದು. ಆಯಾ ಕಾಲದ ನಿರ್ದಿಷ್ಟ ಸಾಮಾಜಿಕ ಹಿನ್ನೆಲೆಯುಳ್ಳ ಪ್ರದೇಶದಲ್ಲಿ ಹುಟ್ಟಿಕೊಂಡ ಸಾಮಾಜಿಕ ಆಂದೋಲನಗಳ ಹಾಗೂ ಮಹಿಳಾ ಹೋರಾಟಗಳ ಚರಿತ್ರೆಯು ಅನೇಕ ವೈರುಧ್ಯಗಳಿಂದ ಕೂಡಿದೆ.

ಕಪ್ಪು ಸ್ತ್ರೀವಾದವು ಬಿಳಿಯ ಮಹಿಳೆಯರ ಸ್ತ್ರೀವಾದಕ್ಕಿಂತ ತನ್ನನ್ನು ಭಿನ್ನ ನೆಲೆಯಲ್ಲಿ ಗುರುತಿಸಿಕೊಂಡಿದೆ. ಹಾಗೆಯೆ ಅಭಿವೃದ್ಧಿಗೊಂಡ ರಾಷ್ಟ್ರಗಳ ಸ್ತ್ರೀವಾದಿ ಚಿಂತನೆಗಿಂತ ಭಿನ್ನವಾದ ತಾತ್ವಿಕತೆಯನ್ನು ಅಭಿವೃದ್ಧಿಶೀಲ ರಾಷ್ಟ್ರಗಳ ಸ್ತ್ರೀವಾದಿಗಳು ಕಟ್ಟಿಕೊಳ್ಳಲೆತ್ನಿಸಿದ್ದಾರೆ. ಸ್ತ್ರೀವಾದಿ ಪಂಥಗಳ ಚಾರಿತ್ರಿಕ ಬೆಳವಣಿಗೆಯು ಸ್ತ್ರೀವಾದವನ್ನು ಸಿದ್ಧಾಂತದ ಚೌಕಟ್ಟಿನಲ್ಲಿರಿಸುವುದಕ್ಕಿಂತ ಸಾಪೇಕ್ಷ ನೆಲೆಯಲ್ಲಿರಿಸುವುದು ಸೂಕ್ತ ಎಂಬ ತಿಳುವಳಿಕೆಗೆ ನಮ್ಮನ್ನು ಕೊಂಡೊಯ್ಯುತ್ತದೆ. ಆದ್ದರಿಂದ ಪಶ್ಚಿಮದ ಸ್ತ್ರೀವಾದದೊಂದಿಗೆ ದೇಶಿಯ ನೆಲೆಯ "ಸ್ತ್ರೀವಾದಿ" ಆಲೋಚನೆಗಳ ಪ್ರಭಾವ ಹಾಗೂ ಪ್ರೇರಣೆಗಳ ಹಿನ್ನೆಲೆಯಲ್ಲಿ ಭಾರತೀಯ ಸ್ತ್ರೀವಾದದ ಸ್ವರೂಪವನ್ನು ಕಂಡುಕೊಳ್ಳಬಹುದಾಗಿದೆ. ಭಾರತದ ಇಂದಿನ ಸಾಂಸ್ಕೃತಿಕ ಪರಿಸರವು ಊಳಿಗಮಾನ್ಯ ಕೃಷಿ ಪ್ರಧಾನ ಆರ್ಥಿಕ ವ್ಯವಸ್ಥೆ, ವಸಾಹತು ಆಳ್ವಿಕೆಯ ಫಲವಾದ ಬಂಡವಾಳಶಾಹಿ ಮತ್ತು ಸ್ವಾತಂತ್ರ್ಯೋತ್ತರ ಜನ ತಾಂತ್ರಿಕ ಬಂಡವಾಳಶಾಹಿಗಳೆಲ್ಲವನ್ನು ಒಟ್ಟಾಗಿಯೇ ದರ್ಶಿಸುತ್ತಿರುವಂಥದ್ದು.

ಇಲ್ಲಿನ ಚಿಂತನೆಯು ಲಿಂಗ ಪ್ರಭೇದ ಲಕ್ಷಣವನ್ನೇ ಹೊಂದಿದ್ದರೂ ಇಲ್ಲಿನ ಬಲವಾದ ಜಾತಿ ವ್ಯವಸ್ಥೆ, ವರ್ಗ ವ್ಯವಸ್ಥೆ, ಗ್ರಾಮೀಣ ನೆಲೆಯ ಊಳಿಗಮಾನ್ಯ ಶಕ್ತಿಗಳೂ ಜನಜೀವನದ ಬಲವಾದ ರೂವಾರಿಗಳೆನ್ನಬಹುದು. ಪುರೋಹಿತಶಾಹಿ ಶ್ರೇಣೀಕೃತ ಧಾರ್ಮಿಕ ವ್ಯವಸ್ಥೆಗಳಿದ್ದರೂ ಭೂಮಿಯ ಒಡೆತನ, ಸಂಖ್ಯಾಬಲ, ರಾಜಕೀಯ ಅಧಿಕಾರದ ಒಡೆತನಗಳು, ಮಧ್ಯಮ ಜಾತಿಗಳ ಯಜಮಾನ್ಯಕ್ಕೆ ವರ್ತಮಾನದ ಸಾಂಸ್ಕೃತಿಕ ಪರಿಸರ ಹೀಗಿದ್ದರೆ ಗತಿಸಿದ ಕಾಲದ ಮಾತೃಪ್ರಧಾನ ಸಾಂಸ್ಕೃತಿಕ ಅಂಶಗಳು ಪಳೆಯುಳಿಕೆಯ ರೀತಿಯಲ್ಲಿ ಈ ಮುಖ್ಯ ವ್ಯವಸ್ಥೆಯ ಅಧೀನ ನೆಲೆಗಳಲ್ಲಿ ಉಸಿರಾಡುತ್ತಿವೆ. ಅಂದರೆ ಇಲ್ಲಿನ ಕೆಳಜಾತಿ, ಕೆಳವರ್ಗದ ಜನರ ಸಾಮಾಜಿಕ, ಧಾರ್ಮಿಕ, ವಿಧ್ಯುಕ್ತ ಆಚರಣೆಗಳಲ್ಲಿ ನಾಡಿನ ಜಾನಪದ ಹಬ್ಬ, ಉತ್ಸವ, ಹಾಡು, ಕಥೆ, ಕುಣಿತಗಳಲ್ಲಿ ಸ್ತ್ರೀ ಸಬಲತೆಯ ಲಕ್ಷಣಗಳು ಮುಖ್ಯವಾಗಿ ಕಾಣಿಸುತ್ತವೆ. ಮುಖ್ಯವಾಗಿ ಭಾರತೀಯ ಸ್ತ್ರೀವಾದ ಪಾಶ್ಚಾತ್ಯ ಸ್ತ್ರೀವಾದ ಒತ್ತಿ ಹೇಳುವ ಸಮಾನತೆಯ ಪರಿಕಲ್ಪನೆಯನ್ನು ನಮ್ಮ ನಾಡಿನ ಜನರ ಬದುಕಲ್ಲಿ ಹಾಸುಹೊಕ್ಕಾಗಿರುವ ಜನಪದ, ಕಲೆ, ಆಚರಣೆಗಳಲ್ಲಿ ಹುಡುಕಿ ಇಲ್ಲಿನ ಸಾಂಸ್ಕೃತಿಕ ಪರಿಸರಕ್ಕೆ ಹೊಂದಿಕೊಳ್ಳುವ ಸ್ತ್ರೀವಾದಿ ಪರಿಕಲ್ಪನೆಯೊಂದನ್ನು ಕಟ್ಟಿಕೊಂಡಿದ್ದಾರೆ. ಸ್ತ್ರೀವಾದಿ ಚಳವಳಿಯ ಕವಲಾಗಿಯೆ ಹುಟ್ಟಿಕೊಂಡ ಸ್ತ್ರೀವಾದಿ ವಿಮರ್ಶೆಯು ತಲತಲಾಂತರದಿಂದಲೂ ಸಾಹಿತ್ಯ ಕೃತಿಗಳಲ್ಲಿ ಹೆಣ್ಣನ್ನು ಪುರುಷ ಪ್ರಧಾನ ವ್ಯವಸ್ಥೆ ರೂಪಿಸಿದ ಕೆಲವೊಂದು ಮಾದರಿಗಳಿಗೆ ಸೀಮಿತಗೊಳಿಸಿ ಚಿತ್ರಿಸುತ್ತಿರುವುದನ್ನು ತನ್ನ ಹಿತಕ್ಕೆ ತಕ್ಕಹಾಗೆ ಅವಳ ವ್ಯಕ್ತಿತ್ವವನ್ನು ತಿರುಚಿರುವುದನ್ನು ಬಯಲು ಮಾಡುತ್ತದೆ. ಮತ್ತು ಸ್ತ್ರೀಯ ಬೆಳವಣಿಗೆಗೆ ಅಗತ್ಯವಾದ ಇತ್ಯಾತ್ಮಕ ಮಾದರಿಗಳನ್ನು ರೂಪಿಸಬೇಕಾದ ಅಗತ್ಯವನ್ನು ಮನದಟ್ಟು ಮಾಡುತ್ತದೆ.

ವಿಮನ್ಸ್ ಇಂಟರ್‌ನ್ಯಾಷನಲ್ ಡೆಮಾಕ್ರಟಿಕ್ ಫೆಡರೇಶನ್ ನೀಡಿದ ಸಲಹೆಯಂತೆ ೧೯೭೫ನೇ ವರ್ಷವನ್ನು ಅಂತಾರಾಷ್ಟ್ರೀಯ ಮಹಿಳಾ ವರ್ಷವನ್ನಾಗಿ ವಿಶ್ವಸಂಸ್ಥೆ ಘೋಷಿಸಿತು. ಈ ಆಚರಣೆಯು ಮುಖ್ಯವಾಗಿ ಸಮಾನತೆ, ಅಭಿವೃದ್ಧಿ ಮತ್ತು ಶಾಂತಿಯ ಮಂತ್ರವನ್ನು ಕುರಿತಾಗಿದ್ದು, ವಿಶ್ವಸಂಸ್ಥೆಯು ಈ ಉದ್ದೇಶಗಳಿಗಾಗಿ ಕೆಲಸ ಮಾಡಬೇಕೆಂದು ಕರೆ ನೀಡಿತು.

- ಸ್ತ್ರೀ–ಪುರುಷರ ನಡುವೆ ಸಮಾನತೆಯನ್ನು ತರುವುದು.
- ಸಮಗ್ರ ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಮಹಿಳೆಯರ ಪಾತ್ರವನ್ನು ಒಳಗು ಮಾಡಿಕೊಳ್ಳುವುದು. ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಮಹಿಳೆಯರ ಜವಾಬ್ದಾರಿ ಮತ್ತು ಪಾತ್ರವನ್ನು ಒತ್ತಿ ಹೇಳುವುದು.
- ಜಾಗತೀಕ ಶಾಂತಿಯ ಪ್ರಯತ್ನಗಳಲ್ಲಿ ಸೌಹಾರ್ದ ಸಂಬಂಧ ಮತ್ತು ಸಹಕಾರದ ಅಗತ್ಯವನ್ನು ಮತ್ತು ಇದಕ್ಕೆ ಮಹಿಳೆಯರ ಕೊಡುಗೆಯ ಪ್ರಾಮುಖ್ಯತೆಯನ್ನು ಒತ್ತಿ ಹೇಳುವುದು.

ಭಾರತದ ಸಂದರ್ಭದಲ್ಲಿ ಅಂತಹ ರಾಷ್ಟ್ರೀಯ ಮಹಿಳಾ ವರ್ಷ ತುರ್ತು ಪರಿಸ್ಥಿತಿಯನ್ನು ಎದುರಿಸಿದ ವರ್ಷವೂ ಆಗಿರುವುದು ಒಂದು ಕಾಕತಾಳೀಯವಾದ ಅಂಶ. ಮಹಿಳಾ ವರ್ಷ ಕೊನೆಗೊಂಡ ಸಂದರ್ಭದಲ್ಲಿ ಉಂಟಾದ ಫಲಶ್ರುತಿಯನ್ನು ಅಭ್ಯಾಸಿಸಿದ ವಿಶ್ವಸಂಸ್ಥೆಯು ಶತಮಾನಗಳಿಂದ ದಮನಕ್ಕೊಳಗಾದ ಮಹಿಳೆಯ ಪ್ರಗತಿಗೆ ಒಂದು ವರ್ಷ ಅತ್ಯಂತ ಕಡಿಮೆ ಅವಧಿಯೆಂದು ತೀರ್ಮಾನಕ್ಕೆ ಬಂದು ೧೯೭೫-೧೯೮೫ರ ಇದೇ ದಶಕವನ್ನು ಮಹಿಳಾ ದಶಕವಾಗಿ ಆಚರಿಸುವ ತೀರ್ಮಾನ ಕೈಗೊಂಡಿತು.

ಅಂತಾರಾಷ್ಟ್ರೀಯ ಮಹಿಳಾ ದಶಕ ಕೊನೆಗೊಳ್ಳುವ ವರ್ಷ ೧೯೮೫ರಲ್ಲಿ ಮೂರನೆಯ ಅಂತಾರಾಷ್ಟ್ರೀಯ ಜಾಗತೀಕ ಸಮಾವೇಶವು ನೈರೋಬಿಯಲ್ಲಿ ನಡೆಯಿತು. ಈ ಸಮ್ಮೇಳನದಲ್ಲಿ ಸೇರಿದ್ದ ಮಹಿಳೆಯರು ಕೇವಲ ತಮ್ಮ ಸಮಸ್ಯೆಗಳನ್ನು ಮಾತ್ರ ಚರ್ಚಿಸಲಿಲ್ಲ, ವಿಚಾರ ಸಂಕಿರಣ ಹಾಗೂ ಕಾರ್ಯಾಗಾರಗಳಲ್ಲಿ ಪ್ರತಿನಿಧಿಗಳು ತಮ್ಮ ಕೌಟುಂಬಿಕ ಪ್ರಶ್ನೆಗಳು ಮತ್ತು ಸಮುದಾಯ ಸಮಸ್ಯೆಗಳ ಜೊತೆಗೆ ರಾಷ್ಟ್ರೀಯ ಸವಾಲುಗಳನ್ನು ಚರ್ಚಿಸಿದರು.

'ಫೆಮಿನಿಸಂ' ಕುರಿತ ವಿಚಾರ ಗೋಷ್ಠಿಯಲ್ಲಿ ಭಾರತದ ಚಂದ್ರಲೇಖ 'ಫೆಮಿನಿಸಂ' ಅನ್ನು ನಾವು ಹೇಗೆ ವಿವರಿಸುತ್ತೇವೆ ಎಂಬ ಬಗ್ಗೆ ಸ್ಪಷ್ಟವಾಗಿರಬೇಕು ಏಕೆಂದರೆ ಇದೇ ಸಮ್ಮೇಳನದಲ್ಲಿ ನಮ್ಮ ಪರ ಮಾತನಾಡುತ್ತೇವೆ ಎಂದು ಹೇಳುವ ಮಾರೀನ್ ರೇಗನ್, ಇಮಲ್ಡಾ ಮಾರ್ಕಸ್ ಅವರಂಥವರಿದ್ದಾರೆ ಎಂಬ ಬಗ್ಗೆ ನಾವು ಎಚ್ಚರದಿಂದ ಇರಬೇಕು ಎಂದರು. ಇವರಲ್ಲದೆ ಮಾರ್ಗರೇಟ್ ಪಪಾನ್ ಪ್ರಯೋ, ಸ್ಮಿತಾ ಪಾಟೀಲ್ ಹಾಗೂ ಭಾರತದ ಸ್ತ್ರೀವಾದಿ ದೇವಕಿ ಜೈನ್ ಕೂಡ ಈ ವಿಚಾರ ಸಂಕಿರಣದಲ್ಲಿ ಭಾಗವಹಿಸಿ ಭಾರತೀಯ ಸಂಸ್ಕೃತಿಯಲ್ಲಿ ಮಹಿಳೆಯ ಸ್ಥಿತಿಗತಿಗಳ ಬಗ್ಗೆ ಮಾತನಾಡಿದ್ದಲ್ಲದೇ ಪಾಶ್ಚಾತ್ಯ ಸ್ತ್ರೀವಾದಿ ಚಿಂತನೆಗಳಿಂದ ಪ್ರೇರಣೆ ಹೊಂದಿ ಭಾರತೀಯ ಸಾಂಸ್ಕೃತಿಕ ಪರಿಸರಕ್ಕೆ ಹೊಂದುವಂತಹ ಸ್ತ್ರೀವಾದಿ ಚಿಂತನೆಗಳನ್ನು ಹುಟ್ಟುಹಾಕಲು ಮುಂದಾದರು.

ಭಾರತದಲ್ಲಿ ಸ್ತ್ರೀವಾದಿ ಚಿಂತನೆಗಳು ೧೯೭೫ರ ಕಾಲಘಟ್ಟದಲ್ಲಿ ಹುಟ್ಟಿಕೊಂಡವು. ಸ್ತ್ರೀವಾದಿ ಚಿಂತನೆಗಳ ಫಲವಾಗಿ ಮಹಿಳಾ ಸಾಹಿತ್ಯದ ಸ್ವರೂಪ, ಗೊತ್ತು-ಗುರಿಗಳನ್ನು ಕುರಿತಂತೆ ಖಚಿತವಾದ ಅಭಿಪ್ರಾಯಗಳು ರೂಪುಗೊಳ್ಳತೊಡಗಿದ್ದು, ಇದರ ವ್ಯಾಪ್ತಿಗೆ ಒಳಪಡುವಂತಹ ಸಾಹಿತ್ಯದ ಸ್ವರೂಪ, ಉದ್ದೇಶಗಳನ್ನು ಕುರಿತಂತೆ ಗಂಭೀರವಾದ ಚರ್ಚೆ ಆರಂಭವಾಗಿದ್ದು ೧೯೮೦ರ ನಂತರದಲ್ಲಿಯೇ. (ಬಿ.ಎನ್. ಸುಮಿತ್ರಾಬಾಯಿ : ಸ್ತ್ರೀವಾದ, ಪುಟ-೯೩)

**ಕನ್ನಡದ ಸಂದರ್ಭ :**

ಸಾಮಾಜಿಕ ಪರಿಸ್ಥಿತಿ ಮತ್ತು ಘಟನೆಗಳು ಯಾವುದೇ ಒಂದು ಚಳವಳಿಯ ಹುಟ್ಟಿಗೆ ಪ್ರೇರಣೆಯಾಗುತ್ತವೆ. ಒಂದು ತುರ್ತು ಪರಿಸ್ಥಿತಿ. ಇನ್ನೊಂದು ೧೯೭೫ನೇ ಇಸವಿಯನ್ನು ಮಹಿಳಾ ವರ್ಷವೆಂದು ಘೋಷಿಸಿದ್ದು, ಆನಂತರ ೧೯೭೫ ರಿಂದ ೧೯೮೫ರವರೆಗೆ ಮಹಿಳಾ ದಶಕವೆಂದೂ

ಘೋಷಿಸಿದ್ದು, ಸ್ತ್ರೀವಾದಕ್ಕೆ ಪ್ರೇರಣೆಯಾದ ಮೂರು ಪ್ರಮುಖ ಘಟನೆಗಳು ಇವು ಕನ್ನಡ ಸ್ತ್ರೀವಾದಿ ಅಲೆ ಏಳಲು ಮುಖ್ಯ ಕಾರಣವಾದವು. (ಎಚ್.ಎಸ್. ಶ್ರೀಮತಿ : ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ)

ಕರ್ನಾಟಕದಲ್ಲಿ ಸ್ತ್ರೀ ಶಿಕ್ಷಣಕ್ಕಿದ್ದ ಪ್ರೋತ್ಸಾಹದ ಲಾಭ ಪಡೆದುಕೊಂಡ ಮೇಲ್ಜಾತಿ ಮತ್ತು ವರ್ಗಗಳ ಕೆಲವರಾದರೂ ಮಹಿಳೆಯರು ಸಾಮಾಜಿಕ ಸುಧಾರಣೆಯ ಲೋಕಕ್ಕೆ ತಮ್ಮನ್ನು ತೆರೆದುಕೊಂಡರು. ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಕರ್ನಾಟಕದ ಹಲವಾರು ಮಂದಿ ವಿದ್ಯಾರ್ಥಿ ವಿದ್ಯಾರ್ಥಿನಿಯರು ಗಿರಣಿ ಕಾರ್ಖಾನೆಗಳಲ್ಲಿ ದುಡಿಯುವ ಮಹಿಳೆಯರು ಮತ್ತು ಸ್ವಾತಂತ್ರ್ಯ ಹೋರಾಟಗಾರರ ಕುಟುಂಬದಿಂದ ಬಂದವರು ಭಾಗವಹಿಸಿದ್ದರು.

ಕರ್ನಾಟಕ ಕಾರ್ಮಿಕ ಸಂಘಟನೆಗಳಲ್ಲಿ ದಿಟ್ಟತನದಿಂದ ನೇತೃತ್ವ ವಹಿಸಿದ್ದ ಮೇರಿ ದೇವಾಸಿಯಾ, ಸುಜಾತಾ ರಾಧಾಕೃಷ್ಣ ಮತ್ತು ಅಸಂಖ್ಯೆ ಸಂಖ್ಯೆಯಲ್ಲದೆ ಬೀಡಿ, ಅಗರಬತ್ತಿ, ಗೇರುಬೀಜ ಮುಂತಾದ ವಿಭಾಗಗಳಲ್ಲಿ ದುಡಿಯುವ ಮಹಿಳೆಯರಲ್ಲದೆ ರಾಜ್ಯದ ಕೃಷಿ ಕಾರ್ಮಿಕರ ಮಹಿಳೆಯರು ಸಹ ಹೋರಾಟದಲ್ಲಿ ಭಾಗವಹಿಸಿದ್ದರು.

ಈ ಎಲ್ಲ ಹಿನ್ನೆಲೆಯಲ್ಲಿ ಕರ್ನಾಟಕದ ಮಹಿಳಾ ಚಳವಳಿಯ ಹೆಜ್ಜೆಗಳನ್ನು ಗುರುತಿಸ ಹೊರಟರೆ ಅಂತಾರಾಷ್ಟ್ರೀಯ ಮಹಿಳಾ ವರ್ಷ ಒಂದು ಸ್ಪಷ್ಟ ದಿಕ್ಸೂಚಿಯಾಗಬಹುದು. ೧೯೫೪ರಲ್ಲಿ ಅಖಿಲ ಭಾರತ ಮಟ್ಟದಲ್ಲಿ ಹುಟ್ಟಿದ 'ನ್ಯಾಷನಲ್ ಫೆಡರೇಷನ್ ಆಫ್ ಇಂಡಿಯನ್ ವಿಮನ್'ನ ಕರ್ನಾಟಕ ಶಾಖೆ ೧೯೭೫ರಲ್ಲಿ ಬೆಂಗಳೂರಿನಲ್ಲಿ ಸಮ್ಮೇಳನವೊಂದರಲ್ಲಿ ಆರಂಭವಾಯಿತು. ಕರ್ನಾಟಕ ರಾಜ್ಯ ಮಹಿಳಾ ಸಂಘ ಎಂದು ಕರೆದುಕೊಂಡ ಈ ಸಂಘಟನೆಯ ಸ್ಥಾಪಕ ಅಧ್ಯಕ್ಷೆ ಅನುಪಮ ನಿರಂಜನರವರಾಗಿದ್ದರು. ೧೯೭೫ರಲ್ಲಿ ಈ ಸಂಘಟನೆಯು ದುಡಿಯುವ ಮಹಿಳೆಯರ ಸಮ್ಮೇಳನವೊಂದನ್ನು ನಡೆಸಿತು. ಮಧ್ಯಮ ವರ್ಗದ ಮಹಿಳೆಯರನ್ನು ಸೇರಿಸಿಕೊಂಡಿದ್ದ ದುಡಿಯು ವ ಮಹಿಳೆಯರ ಈ ಸಮ್ಮೇಳನ ಆರಂಭದ ದಿನಗಳಲ್ಲಿ ಕ್ರಿಯಾಶೀಲವಾಗಿ ಕೆಲಸವನ್ನು ಮಾಡಿತು. ಇದಲ್ಲದೆ ದಲಿತ ಸಂಘರ್ಷ ಸಮಿತಿ, ರೈತ ಸಂಘ, ಪ್ರಗತಿಪರ ಬರಹಗಾರರ ಒಕ್ಕೂಟ, ಜೆ.ಪಿ. ಚಳುವಳಿಗಳು ಕೂಡ ಕನ್ನಡ ಸ್ತ್ರೀವಾದಿ ಚಳವಳಿ ಹುಟ್ಟಿಕೊಳ್ಳಲು ಪ್ರೇರಣೆಯಾದವು.

ಇತರೆ ದೇಶಗಳ ಸ್ತ್ರೀವಾದಿ ಸಿದ್ಧಾಂತಗಳು ಮತ್ತು ಈ ದೇಶದ ಇತರೆ ಭಾಗಗಳಲ್ಲಿ ನಡೆದ ಮಹಿಳಾ ಹೋರಾಟಗಳೂ ಕನ್ನಡದ ಸ್ತ್ರೀವಾದಕ್ಕೆ ಹೆಚ್ಚು ಪ್ರಭಾವ ಬೀರಿವೆ. ಆತ್ಮ ವಿಶ್ವಾಸವನ್ನು ಬೆಳೆಸಿವೆ. ಕರ್ನಾಟಕದಲ್ಲಿ ಎಪ್ಪತ್ತರ ದಶಕದ ಉತ್ತರಾರ್ಧದಲ್ಲಿ ಸ್ಥಾಪನೆಗೊಂಡ ಕೆಲವು ಸಾಹಿತ್ಯಿಕ ಮತ್ತು ಸಾಮಾಜಿಕ ಸಂಘಟನೆಗಳು ಸ್ತ್ರೀವಾದವನ್ನು ಇದರ ಹಿನ್ನೆಲೆಯಲ್ಲಿ ಬರೆದ ಸಾಹಿತ್ಯವನ್ನು ಬೆಳೆಸುವಲ್ಲಿ ಇದನ್ನೊಂದು ಚಳವಳಿಯಾಗಿ ರೂಪಿಸುವಲ್ಲಿ ಬಹಳಷ್ಟು ಸಹಾಯ ಮಾಡಿ ಬೆಂಬಲ ನೀಡಿವೆ.

ಮೊದಲ ಸಾಹಿತ್ಯಿಕ ಸಂಘಟನೆಯೆಂದರೆ ೧೯೭೯ರ ಜನವರಿಯಲ್ಲಿ ಕಾರ್ಯಾರಂಭ ಮಾಡಿದ ಬೆಂಗಳೂರಿನ ಕರ್ನಾಟಕದ ಲೇಖಕಿಯರ ಸಂಘ. ಈ ಸಂಘವು ಭಾಗ ಒಂದರಲ್ಲಿ ಹೇಳಲಾಗಿರುವುದರ ಜೊತೆಗೆ ಮರಾಠಿ ಸಾಹಿತ್ಯದಲ್ಲಿ ಸ್ತ್ರೀ ಶಿಕ್ಷಣಕ್ಕೆ ಮತ್ತು ಜಾಗೃತಿಗೆ ಒತ್ತುಕೊಟ್ಟ ಲೇಖಕಿಯರಾದ ವಿಬಾವರೀ, ಆನಂದಿಬಾಯಿ, ಗಿರಿಜಾಬಾಯಿ, ಲಕ್ಷ್ಮೀಬಾಯಿ ತಿಳಕ, ಪಂಡಿತ ರಮಾಬಾಯಿ ಮುಂತಾದವರು ಹಿಂದಿಯ ಮನ್ನೂ ಭಂಡಾರಿ, ಬೆಂಗಾಲಿಯ ಸ್ತ್ರೀಪರ ಕಾಳಜಿಯ ಮಹಾಶ್ವೇತಾದೇವಿ, ನವನೀತ ದೇಬ್‌ಸೇನ್, ಆಶಾಪೂರ್ಣ, ತೆಲುಗಿನ ವಾಸಿರೆಡ್ಡಿ ಸೀತಾದೇವಿ, ಗುಜರಾತಿನ ವರ್ಷ ಮಹೇಂದ್ರ ಅಡಾಲಜ ಮುಂತಾದ ಹೊರನಾಡ ಲೇಖಕಿಯರ ಕೃತಿಗಳ ಬಗ್ಗೆ ತನ್ನ ಪುಟಗಳ ಇತಿಮಿತಿಯೊಳಗೆ ಸಂಘದ ಮುಖವಾಣಿಯಾದ “ಲೇಖಕಿ” ಪತ್ರಿಕೆಯಲ್ಲಿ ಪರಿಚಯಿಸಿ ಇಲ್ಲಿಯ ಲೇಖಕಿಯರನ್ನು ಪ್ರೇರೆಪಿಸಿದೆ. ಕೆಲವು ಹೊರನಾಡ ಲೇಖಕಿಯರನ್ನು ಕರೆಸಿ ತನ್ನ ಸದಸ್ಯೆಯರೊಂದಿಗೆ ಸಂವಾದಿಸಲು ಅವಕಾಶ ಕಲ್ಪಿಸಿಕೊಟ್ಟು ಇಲ್ಲಿಯ ಲೇಖಕಿಯರ ಆಲೋಚನೆಗಳನ್ನು ವಿಸ್ತರಿಸಲು ಅನುವು ಮಾಡಿಕೊಟ್ಟಿದೆ.

ಇದಲ್ಲದೆ ಪಾಶ್ಚಾತ್ಯ ಸ್ತ್ರೀವಾದದಿಂದ ಪ್ರಭಾವಿತರಾದ ದೇಸಿ ಲೇಖಕಿಯರು ಈ ಪರಿಕಲ್ಪನೆಗೆ ಸಂಬಂಧಿಸಿದ ಲೇಖನಗಳನ್ನು ಹಾಗೂ ಸ್ತ್ರೀವಾದಿ ಸಾಹಿತ್ಯ ಕೃತಿಗಳನ್ನು ರಚಿಸುವ ಅಥವಾ ಅನುವಾದಿಸುವ ಮೂಲಕ ಈ ವಿಚಾರದ ಒಂದು ಸ್ಪಷ್ಟ ಪರಿಕಲ್ಪನೆ ಮೂಡಿಸಿದರು. ಇದು ಸಾಶ್ಚಾತ್ಯ ಹಾಗೂ ಭಾರತೀಯ ಸ್ತ್ರೀವಾದಿ ಚಿಂತನೆಗಳು ಕನ್ನಡ ಸಾಹಿತ್ಯದ ಮೇಲೆ ಪ್ರಭಾವ–ಪ್ರೇರಣೆ ಬೀರಿ ಸ್ತ್ರೀವಾದದ ಹುಟ್ಟಿಗೆ ಕಾರಣವಾದವು.

**ತೆಲುಗು ಸಂದರ್ಭ :**

ಪಾಶ್ಚಾತ್ಯ ಹಾಗೂ ಭಾರತೀಯ ಸ್ತ್ರೀವಾದಿ ಚಿಂತನೆಗಳ ಪ್ರಭಾವ ಪ್ರೇರಣೆಯಿಂದ ತೆಲುಗಿನಲ್ಲಿ ಸ್ತ್ರೀವಾದಿ ಚಿಂತನೆಗಳು ೧೯೭೫ರಲ್ಲಿ ಹುಟ್ಟಿಕೊಂಡರೂ ಸ್ಥಳಿಯ ಇತರೆ ಚಿಂತನೆ, ಚಳವಳಿಗಳ ಪ್ರಭಾವದಿಂದಾಗಿ ಸ್ತ್ರೀವಾದಿ ಚಿಂತನೆಗಳು ವಿಸ್ತೃತವಾದ ವ್ಯಾಪ್ತಿಯನ್ನು ಪಡೆದುಕೊಂಡವು.

**ಸ್ಥಳಿಯ ಪ್ರೇರಣೆ :** ಗುಡಿಪಾಟಿ ವೆಂಕಟ ಚಲಂ (೧೮೯೪–೧೯೭೯) ಮಹಿಳೆಯನ್ನು ದಾಸಿಯನ್ನಾಗಿಸಿ ಅವಳ ಚೈತನ್ಯವನ್ನು ಕಸಿದುಕೊಂಡಿರುವ ಪುರುಷ ಪ್ರಧಾನ ವ್ಯವಸ್ಥೆಯ ವಿಷಮ ಪರಿಸರವನ್ನು ಪ್ರಶ್ನಿಸಿ ಸ್ತ್ರೀ–ಪುರಷ ಸಮಾನತೆಯ ತತ್ವವನ್ನು ಎತ್ತಿ ಹಿಡಿದಿದ್ದಾರೆ. “ಮಹಿಳೆಗೆ ಲೈಂಗಿಕ ಸಮಾನತೆ ಬೇಕು. ಅವಳ ದೇಹದ ಮೇಲಿನ ಹಕ್ಕು ಅವಳದೆ” ಎಂದು ವಾದಿಸಿದ್ದಾರೆ. ಚಲಂ ಅವರ ಈ ಸ್ತ್ರೀಪರ ನಿಲುವುಗಳು ತೆಲುಗು ಸ್ತ್ರೀವಾದಿ ಚಿಂತನೆಗಳಿಗೆ ಮತ್ತಷ್ಟು ಪುಷ್ಠಿಯನ್ನು ನೀಡಿವೆ.

ಆಂಧ್ರ ಮಹಿಳಾ ಸಭಾ ಚಳವಳಿಯ ಕಾರ್ಯಕರ್ತೆಯಾದ ದುರ್ಗಾಬಾಯ್ ದೇಶ್‌ಮುಖ್ ಅವರು ೧೯೪೨ರಲ್ಲಿ “ಆಂಧ್ರ ಮಹಿಳಾ ಮಾಸ ಪತ್ರಿಕೆ”ಯನ್ನು ಪ್ರಾರಂಭಿಸಿ ಇದರಲ್ಲಿ ಮಹಿಳೆಯರ ಸಮಸ್ಯಗಳ ಬಗ್ಗೆ ಬರೆಯುತ್ತಾ ಸಮಾಜದ ಕಣ್ಣು ತೆರೆಸುವಲ್ಲಿ ಯಶಸ್ವಿಯಾದರು.

ಗಾಂಧೀಜಿ ನಾಯಕತ್ವದ ಸ್ವಾತಂತ್ರ ಹೋರಾಟ ಚಳವಳಿಯಲ್ಲಿ ದುವ್ವೂರಿ ಸುಬ್ಬಮ್ಮ, ಯಾಮಿನಿ ಪೂರ್ಣ ತಿಲಕಂ, ಉನ್ನವ ಲಕ್ಷ್ಮಿಬಾಯಮ್ಮ, ಸೂರ್ಯದೇವರ ರಾಜಲಕ್ಷ್ಮಿಯವರಂತಹ ಅನೇಕ ಮಹಿಳೆಯರು ಉತ್ಸಹದಿಂದ ಪಾಲ್ಗೊಂಡು ತಮ್ಮ ಹಕ್ಕುಗಳಿಗಾಗಿ ಹೋರಾಡಿದ್ದಾರೆ. ಈ ಚಳವಳಿಯ ಭಾಗವಾಗಿಯೇ ಮಹಿಳಾ ವಿಮುಕ್ತಿ ಚಳವಳಿಯ ಹೋರಾಟಕ್ಕೆ ಬುನಾದಿಯನ್ನು ಹಾಕಿದರು. ಶ್ರೀಮತಿ ಬಂಡಾರು ಅಚ್ಚಮಾಂಬ ಓರುಗಂಟಿ ಸುಂದರಿ ರತ್ನ ಮಾಂಬ ನಾಯಕತ್ವದಲ್ಲಿ ೧೯೦೩ ರಂದು "ಬೃಂದಾವನ ಪುರ ಸ್ತ್ರೀ ಸಮಾಜ" ಎಂಬ ಸಂಘವನ್ನು ಕಟ್ಟಿದರು ಅರ್ಧ ದಶಕದಿಂದ ಮಹಿಳೆಯರ ವಿದ್ಯಾಭ್ಯಾಸಕ್ಕೊಸ್ಕರ ದುಡಿದ ಮಹಿಳಾ ಶಿರೋಮಣಿ ಕನುಪರ್ತಿ ವರಲಕ್ಷ್ಮಮ್ಮ ೧೯೩೧ ರಲ್ಲಿಯೇ ಬಾಪಟ್ಲದಲ್ಲಿ "ಸ್ತ್ರೀ ಹಿತೈಷಿಣಿ" ಮಂಡಳಿಯನ್ನು ಸ್ಥಾಪಿಸಿದಳು ವರಲಕ್ಷ್ಮಮ್ಮ ಅವರು ತಮ್ಮ "ಶಾರದ ಲೇಖಲು" ಎಂಬ ಗ್ರಂಥದಲ್ಲಿ ಸಮಕಾಲೀನ ಸಾಮಾಜಿಕ ರಾಜಕೀಯ, ಆರ್ಥಿಕ ಹಾಗೂ ಸಂಘಟನಾತ್ಮಕ ಸಮಸ್ಯಗಳ ಬಗ್ಗೆ ದೀರ್ಘವಾಗಿ ಚರ್ಚಿಸಲಾಗಿದೆ. ರಾಷ್ಟ್ರೀಯ ಚಳುವಳಿಯ ಕಾಲದಲ್ಲೇ ಆಂಧ್ರ-ತೆಲಂಗಾಣದಲ್ಲಿ ಕಮ್ಯುನಿಷ್ಟರು ಸ್ಥಾನವನ್ನು ಪಡೆದು ಮಹಿಳಾ ಸಮಾನತೆ ಹಾಗೂ ಸ್ವಾತಂತ್ರ್ಯಯವನ್ನು ಎತ್ತಿಹಿಡಿದರು.

ಸ್ತ್ರೀ ವಿಮುಕ್ತಿ ಚಳವಳಿಗಳಲ್ಲಿ ಮತ್ತೇರಡು ಚಳವಳಿಗಳೆಂದರೆ ತೆಲಂಗಾಣ ಹೋರಾಟ, ಶ್ರೀ ಕಾಕುಳಂದಲ್ಲಿನ ಗಿರಿಜನ ಮಹಿಳೆಯರ ಹೋರಾಟ ೧೯೪೬ ರಿಂದ ೧೯೫೧ ರ ವರೆಗೆ ನಡೆದ ತೆಲಂಗಾಣ ಹೋರಾಟದಲ್ಲಿ ಮಹಿಳೆಯರ ಪಾತ್ರ ಒಂದು ಚಾರಿತ್ರಿಕ ಮೈಲಿಗಲ್ಲಾಗಿದೆ. ಇವರು ಆತ್ಮ ಸ್ಥೈರ್ಯದಿಂದ ನಿಂತು ಗೆರಿಲ್ಲಾ ದಳಕ್ಕೆ ಚೈತನ್ಯ ತುಂಬಿ ಸಶಸ್ತ್ರ ಹೋರಾಟದ ವಿಜಯಕ್ಕೆ ಮೂಲ ಕಾರಣ ಕರ್ತರಾಗಿದ್ದಾರೆ. ಇದಷ್ಟೇ ಅಲ್ಲದೆ ಮಹಿಳಾ ಶೋಷಣೆ, ಅತ್ಯಾಚಾರ ಮಾಡುತ್ತಿದ್ದ. ಜಮೀನ್ದಾರಿ ಪದ್ಧತಿಯನ್ನು ಮಟ್ಟಹಾಕುವಲ್ಲಿ ತೆಲಂಗಾಣ ಮಹಿಳೆಯರು ಯಶಸ್ವಿಯಾದರು ಆಂಧ್ರ ಸಶಸ್ತ್ರ ಹೋರಾಟದ ಇತಿಹಾಸದಲ್ಲಿ ಶ್ರೀ ಕಾಕುಳ ಚಳವಳಿಗೆ ವಿಶಿಷ್ಟವಾದ ಸ್ಥಾನವಿದೆ/ ಪಿತೃಪ್ರಧಾನ ವ್ಯವಸ್ಥೆಯೊಳಗೆ ಮಹಿಳೆಯರ ಸಾಮಾಜಿಕ, ಆರ್ಥಿಕ ಕೌಟುಂಬಿಕ ಸಂಬಂಧಗಳು ಹಾಗೂ ಸಾಂಸ್ಕೃತಿಕವಾದ ಆಚಾರ ವಿಚಾರಗಳು ಶ್ರೀ ಕಾಕುಳ ಚಳವಳಿಯ ಗಿರಿಜನ ಮಹಿಳೆಯರ ಪಾತ್ರವನ್ನು ನಿರ್ದೇಶಿಸುತ್ತಾವೆ. ಆಧುನಿಕ ಯುಗದಲ್ಲಿ ಬಂದ ಸಾಹಿತ್ಯ ಚಳವಳಿಗಳೆಲ್ಲ ಪ್ರತ್ಯೇಕ್ಷವಾಗಿಯೋ ಪರೋಕ್ಷವಾಗಿಯೋ ಸ್ತ್ರೀವಾದ ಚಳವಳಿಗೆ ಪ್ರೇರಣೆಯನ್ನಿತ್ತಿವೆ. ಆದರೆ ಇವುಗಳಲ್ಲಿನ ಮಿತಿಗಳಿಂದಾಗಿ ಈ ಚಳವಳಿಗೆ ಪ್ರತ್ಯೇಕವಾಗಿ ಕಾಣಿಸಿಕೊಳ್ಳಬೇಕಾದ ಸಂದರ್ಭ ಎದುರಾಯಿತು. ಸುಧಾರಣಾ ಚಳವಳಿಯಲ್ಲಿ ಆಚರಣೆಗಳ ಹೆಸರಲ್ಲಿ ನಡೆದಿರುವ ಸ್ತ್ರೀಯರ ಶೋಷಣೆ ಮತ್ತು ಸ್ತ್ರೀಯರ ವಿದ್ಯಾಭ್ಯಾಸದ ವಿಷಯ ಚರ್ಚೆಯ ಅಂಶಗಳಾಗಿ ಆ ಲೇಖಕರು ಮೂಢಾಚಾರಗಳನ್ನು ಖಂಡಿಸುತ್ತಾ ಸಾಹಿತ್ಯವನ್ನು ಸೃಷ್ಟಿಸಿದರು ಆದರೆ ಇವರ ವಿವೇಚನೆ ವಿಶ್ಲೇಷಣೆ ಪುರುಷ ಪ್ರಧಾನ್ಯತೆಯ ಚೌಕಟ್ಟಿನ ಭಾಗವಾಗಿಯೇ ಬಂದವು. ವ್ಯವಸ್ಥೆಯ ಮೂಲಗುಣವನ್ನು ಅರ್ಥಮಾಡಿಕೊಂಡಂಡವಲ್ಲ ಸ್ತ್ರೀಯರನ್ನು ಗತಕಾಲದ ರೂಢಿಬದ್ಧತೆಗಳಿಂದ ಬಿಡುಗಡೆಗೊಳಿಸಿ ಒಬ್ಬ ವ್ಯಕ್ತಿಯಾಗಿ, ಸಂಘಜೀವಿಯಾಗಿ

ನಾಗರೀಕಳಾಗಿ ನೋಡುವ ವ್ಯವಸ್ಥೆಯಲ್ಲಿ ಸ್ತ್ರೀಯರನ್ನು ಮತ್ತಷ್ಟು ಆದರಣೀಯವಾಗಿ ನೋಡುವುದು ಬಾಲ್ಯವಿವಾಹಗಳ ರದ್ದು ವಿಧವಾ ಪುನರ್ವಿವಾಹಗಳ ಮೂಲಕ ಸ್ತ್ರೀಯ ಬದುಕಿನಲ್ಲಿ ಸುಖಕ್ಕೆ ಅವಕಾಶ ಕಲ್ಪಿಸುವುದು ಈ ಚಳವಳಿಯ ಆಶಯಗಳು.

ಕಲ್ಪನಾತ್ಮಕ ಸಾಹಿತ್ಯ ಚಳವಳಿಯಲ್ಲಿ ಬಂದ ಮುಖ್ಯವಾದ ಬದಲಾವಣೆಯೆಂದರೆ ಸ್ತ್ರೀಯರನ್ನು ಭೋಗದ ದೃಷ್ಟಿಯಿಂದ ನೋಡುವ ಸಾಂಪ್ರದಾಯಕ್ಕೆ ವಿದಾಯ ಹೇಳಿದ್ದು ಸ್ತ್ರೀಯ ಶರೀರ ಸೌಂದರ್ಯಕ್ಕಿಂತ ಆತ್ಮಸೌಂದರ್ಯಕ್ಕೆ ಬೆಲೆ ಕೊಡುವುದಾದರೆ ಈ ಚಳವಳಿ ಸ್ತ್ರೀಯನ್ನು ಒಬ್ಬ ಮನುಷ್ಯಳನ್ನಾಗಿಯಷ್ಟೇ ಅಲ್ಲದೇ ಒಂದು ಆದರ್ಶವಾಗಿ ವರ್ಣಿಸಿತು. ಸ್ತ್ರೀಯರನ್ನು ಆದರ್ಶೀಕರಿಸುವುದು ದೇವತೆಯನ್ನಾಗಿಸುವುದು ಎರಡೂ ಈ ಚಳವಳಿಯ ಲಕ್ಷಣಗಳು ಈ ಎರಡರಿಂದ ಒಳ್ಳೆಯ ಕಾವ್ಯ ಹುಟ್ಟಿ ಬಂತೇ ಹೊರತು ಸ್ತ್ರೀವರ್ಗಕ್ಕೆ ಯಾವ ಪ್ರಯೋಜನಗಳು ಆಗಲಿಲ್ಲ. ಅಭ್ಯುದಯ ಮತ್ತು ವಿಪ್ಲವ ಚಳವಳಿಗಳು ವರ್ಗ ತಾರತಮ್ಯವನ್ನು ಖಂಡಿಸಿ ವರ್ಗ ಹೋರಾಟವನ್ನು ಸಮರ್ಥಿಸಿ ಸಮಾನ ಸಮಾಜದ ಹುಟ್ಟನ್ನು ಆಕಾಂಕ್ಷಿಸುವ ರೀತಿಯಲ್ಲಿ ಸ್ತ್ರೀಯರಿಗೆ ಕೊಡಬೇಕಾದ ಸ್ಥಾನವನ್ನು ಕೊಡಲಿಲ್ಲ. ವರ್ಗ ಮೂಲಗಳಿಂದ ಬರುವ ಸಮಸ್ಯೆಗಳಿಗಿಂತ ಲಿಂಗತಾರತಮ್ಯದ ಬಗ್ಗೆ ಬರುವಂಥವು ಭಿನ್ನವಾಗಿ ಇರುತ್ತವೆಂಬ ದೃಷ್ಟಿ ಈ ಚಳವಳಿಯಲ್ಲಿ ಕಾಣಲಿಲ್ಲ. ಆದರೆ ವರದಕ್ಷಣೆಯಂಥ ಕೆಟ್ಟ ಪದ್ಧತಿಗಳಿಗೆ, ಸ್ತ್ರೀ ಶಿಕ್ಷಣಕ್ಕೆ, ಸ್ತ್ರೀಯ ಆರ್ಥಿಕ ಸ್ವಾತಂತ್ರಕ್ಕೆ ಅಂತರ್ಜಾತಿಯ, ಅಂತರ್‌ಧರ್ಮಿಯ ಮತ್ತು ಮತಾಂತರ ವಿವಾಹಗಳಿಗೆ ಸಂಬಂಧಿಸಿದಂತೆ ಇವರಿಗಿರುವ ಬದ್ಧತೆ ಆ ಯುಗದ ಸಾಹಿತ್ಯದಲ್ಲಿ ಸ್ತ್ರೀಯರ ವಿಕಾಸಕ್ಕೆ ಪ್ರೇರಣೆಯನ್ನುಂಟು ಮಾಡಿತು. ಆದರೆ ವರ್ಣ ವ್ಯವಸ್ಥೆಯಲ್ಲಿ ಸ್ಪಷ್ಟವಾಗಿ ಕಾಣಿಸದ ಲಿಂಗತಾರತಮ್ಯವನ್ನು ಅಲಕ್ಷ್ಯ ಮಾಡಿದ್ದು ಅದನ್ನು ಒಂದು ಶೋಷಣೆಯನ್ನಾಗಿ ಗುರುತಿಸದೇ ಹೋದದ್ದು ಈ ಚಳುವಳಿಯ ಮಿತಿಗಳು.

ಈ ಹಿನ್ನೆಲೆಯಲ್ಲಿ ೧೯೭೦-೭೦ ರ ದಶಕದಲ್ಲಿ ಸ್ತ್ರೀಯರು ತಮ್ಮ ದಾಸ್ಯತ್ವದ ಮೂಲಗಳು ಸಾಮಾಜಿಕ, ರಾಜಕೀಯ, ಆರ್ಥಿಕ ವ್ಯವಸ್ಥೆಗಳಲ್ಲಿ ಮಾತ್ರವೇ ಅಲ್ಲ ಬದಲಾಗಿ ಹೆಜ್ಜೆ ಹಿಜ್ಜೆಗೂ ಹೆಡೆ ಎತ್ತುವ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಇವೆಯೆಂದು ಗುರುತಿಸುವ ಮೂಲಕ ತಮ್ಮ ಹೋರಾಟ ಮಾರ್ಗವನ್ನು ಮತ್ತಷ್ಟು ಸ್ಪಷ್ಟವಾಗಿ ನೋಡತೊಡಗಿದರು. ಸ್ತ್ರೀಯರು ಮಹಿಳಾ ಸಂಘಗಳನ್ನು ಸ್ಥಾಪಿಸಿಕೊಂಡು ದೇಶದುದ್ದಕ್ಕೂ ಸ್ತ್ರೀಯರ ಮೇಲೆ ನಡೆಯುತ್ತಿರುವ ಅತ್ಯಾಚಾರಗಳನ್ನು ವರದಕ್ಷಿಣೆಯ ಹತ್ಯೆಗಳನ್ನು ಕೌಟುಂಬಿಕ ಹಿಂಸೆ, ಆರ್ಥಿಕ ಅಭದ್ರತೆ, ತಾರತಮ್ಯಗಳಿಗೆ ಸವಾಲು ಒಡ್ಡುವುದು, ಕಾನೂನಿನ ಬದಲಾವಣೆಗಾಗಿ ಹೋರಾಡುವುದು ಪ್ರಾರಂಭವಾಯಿತು. ಈ ಸಾಮಾಜಿಕ ಪ್ರಜ್ಞೆಯೇ ಸ್ತ್ರೀವಾದಿ ಸಾಹಿತ್ಯಕ್ಕೆ ಜೀವ ಸೆಲೆಯಾಯಿತು. ತೆಲುಗಿನ ಸ್ತ್ರೀವಾದಿ ಚಿಂತಕಿಯರಾದ ವಸಂತ ಕನ್ನಬಿರಾನ್ ಓಲ್ಗಾ, ಮಲ್ಲಾದಿ ಸುಬ್ಬಮ್ಮ ಇನ್ನು ಮುಂತಾದವರು ಸ್ತ್ರೀವಾದಿ ಚಿಂತನೆಗಳ ಬಗ್ಗೆ ಸ್ಪಷ್ಟವಾದ ಪರಿಕಲ್ಪನೆಯನ್ನು ಮೂಡಿಸಿದ್ದಲ್ಲದೆ. ಸ್ತ್ರೀವಾದದ ಬಗ್ಗೆ ಸಾಂಪ್ರದಾಯಿಕ ಮನಸ್ಸುಗಳು ಅರ್ಥೈಸಿಕೊಂಡಿರುವ ಮನೋಭಾವನೆಯನ್ನು ಬದಲಾಯಿಸಿ ವೈಚಾರಿಕವಾಗಿ

ಚಿಂತಿಸುವಂತೆ ಮಾಡುವ ಮೂಲಕ ತೆಲುಗಿನಲ್ಲಿ ಸ್ತ್ರೀವಾದಿ ಚಿಂತನೆಗಳು ಪ್ರವೇಶ ಪಡೆಯಲು ಕಾರಣಕರ್ತರಾದರು.

**ಕನ್ನಡ–ತೆಲುಗು ಸ್ತ್ರೀವಾದಿ ಸಾಹಿತ್ಯದ ಹುಟ್ಟು ಮತ್ತು ಬೆಳವಣಿಗೆ :**

ಪಾಶ್ಚಾತ್ಯ ದೇಶಗಳ ಸ್ತ್ರೀವಾದಿ ಸಿದ್ಧಾಂತಗಳು ಹಾಗೂ ಈ ದೇಶದಲ್ಲಿ ನಡೆದ ತುರ್ತು ಪರಿಸ್ಥಿತಿ, ದೇಶದ ಇತರೆ ಭಾಗಗಳಲ್ಲಿ ನಡೆದ ಮಹಿಳಾ ಹೋರಾಟಗಳೇ ಕನ್ನಡ ಮತ್ತು ತೆಲುಗಿನ ಸ್ತ್ರೀವಾದಕ್ಕೆ ಹೆಚ್ಚು ಪ್ರಭಾವ ಬೀರಿವೆ. ಆತ್ಮವಿಶ್ವಾಸವನ್ನು ಬೆಳೆಸಿವೆ ಅನ್ನಬಹುದು. ಇದಲ್ಲದೆ ೧೯೭೫ನೇ ಇಸವಿಯನ್ನು ಮಹಿಳಾ ವರ್ಷವೆಂದು ಘೋಷಿಸಿದ್ದು ಆ ನಂತರ ೧೯೭೫ ರಿಂದ ೧೯೮೫ರವರೆಗೆ ಮಹಿಳಾ ದಶಕವೆಂದು ಘೋಷಿಸಿದ್ದು ಕೂಡ ಸ್ತ್ರೀವಾದ ಹುಟ್ಟಿಕೊಳ್ಳಲು ಕಾರಣವಾಯಿತು.

ಕರ್ನಾಟಕಾಂಧ್ರದಲ್ಲಿ ಇಪ್ಪತ್ತರ ದಶಕದ ಉತ್ತರಾರ್ಧದಲ್ಲಿ ಸ್ಥಾಪನೆಗೊಂಡ ಕೆಲವು ಸಾಹಿತ್ಯಿಕ ಮತ್ತು ಸಾಮಾಜಿಕ ಸಂಘಟನೆಗಳೂ ಕೂಡ ಸ್ತ್ರೀವಾದವನ್ನು ಇದರ ಹಿನ್ನೆಲೆಯಲ್ಲಿ ಬರೆದ ಸಾಹಿತ್ಯವನ್ನು ಬೆಳೆಸುವಲ್ಲಿ ಇದನ್ನೊಂದು ಚಳವಳಿಯಾಗಿ ರೂಪಿಸುವಲ್ಲಿ ಬಹಳಷ್ಟು ಸಹಾಯ ಮಾಡಿ ಬೆಂಬಲ ನೀಡಿವೆ. (ಉದಾ: ಕರ್ನಾಟಕ ಲೇಖಕಿಯರ ಸಂಘ, ಆಂಧ್ರಾ ಮಹಿಳಾ ಸಭಾ) ಕನ್ನಡ–ತೆಲುಗು ಸ್ತ್ರೀವಾದಿ ಸಾಹಿತ್ಯದ ಹುಟ್ಟು ಮತ್ತು ಬೆಳವಣಿಗೆ ದೇಶದ ವಿವಿಧ ಭಾಷೆಯ ಲೇಖಕಿಯರ ಹಾಗೂ ಅವರ ಸಾಹಿತ್ಯದ ಪ್ರೇರಣೆ–ಪ್ರಭಾವವು ಕೂಡ ಮಹತ್ವದ್ದಾಗಿದೆ. ಮರಾಠಿ ಸಾಹಿತ್ಯದಲ್ಲಿ ಸ್ತ್ರೀ ಶಿಕ್ಷಣಕ್ಕೆ ಮತ್ತು ಜಾಗೃತಿಗೆ ಒತ್ತುಕೊಟ್ಟ ಲೇಖಕಿಯರಾದ ವಿಭಾವರಿ, ಆನಂದಬಾಯಿ, ಗಿರಿಜಾಬಾಯಿ, ಲಕ್ಷ್ಮಿಬಾಯಿ ಟಿಳಕ್, ಪಂಡಿತ ರಮಾಬಾಯಿ ಮುಂತಾದವರು.

ಹಿಂದಿಯ ಮನ್ನೂ ಬಂಡಾರಿ, ಬೆಂಗಾಳಿಯ ಸ್ತ್ರೀಪರ ಕಾಳಜಿಯ ಮಹಾಶ್ವೇತಾದೇವಿ, ನವನೀತ ದೇಭ್‌ಸೇನ್, ಆಶಾ ಪೂರ್ಣದೇವಿ, ತೆಲುಗಿನ ವಾಸಿರೆಡ್ಡಿ ಸೀತಾದೇವಿ, ಗುಜರಾತಿನ ವರ್ಷ ಮಹೇಂದ್ರ, ಅಡಾಲಜಿ ಮುಂತಾದ ಹೊರನಾಡ ಲೇಖಕಿಯರ ಕೃತಿಗಳ ಬಗ್ಗೆ ತನ್ನ ಪುಟಗಳ ಇತಿಮಿತಿಯೊಳಗೆ ಕರ್ನಾಟಕಾಂಧ್ರದ ಕೆಲವು ಲೇಖಕಿಯರ ಸಂಘದ ಪತ್ರಿಕೆಯಲ್ಲಿ ಪರಿಚಯಿಸಿ ಇಲ್ಲಿಯ ಲೇಖಕಿಯರನ್ನು ಪ್ರೇರೇಪಿಸಿವೆ. ಕೆಲವು ಹೊರನಾಡ ಲೇಖಕಿಯರನ್ನು ಕರೆಸಿ ತನ್ನ ಸದಸ್ಯರೊಂದಿಗೆ ಸಂವಾದಿಸಲು ಅವಕಾಶ ಕಲ್ಪಿಸಿಕೊಟ್ಟು ಇಲ್ಲಿಯ ಲೇಖಕಿಯರ ಆಲೋಚನೆಗಳನ್ನು ವಿಸ್ತರಿಸಲು ಅನುವು ಮಾಡಿಕೊಡಲಾಯಿತು.

ಕನ್ನಡ–ತೆಲುಗು ಸ್ತ್ರೀವಾದಿ ಸಾಹಿತ್ಯದ ಪ್ರವರ್ಧಮಾನಕ್ಕೆ ಇಲ್ಲಿನ ಕೆಲವು ಪತ್ರಿಕೆಗಳ ಕೊಡುಗೆ ಅಪಾರ. ಕನ್ನಡ ಭಾಷೆಯಲ್ಲಿ ಶೂದ್ರ, ಸಂಕ್ರಮಣ, ರುಜುವಾತು, ಸಾಕ್ಷಿ, ಲಂಕೇಶ ಪತ್ರಿಕೆ, ಪ್ರಜಾವಾಣಿ ಇತ್ಯಾದಿ ತೆಲುಗಿನ ಪತ್ರಿಕೆಗಳಾದ ಆಂಧ್ರ ಮಹಿಳಾ, ಆಂಧ್ರ ವನಿತ, ಆಂಧ್ರ ಕವಿತಾ ಪತ್ರಿಕೆ, ಭೂಮಿಕ, ಭಾರತಿ, ಜನನಾ ಮುಂತಾದವು ಈ ಪರಂಪರೆಯಲ್ಲಿ ಬರೆಯುತ್ತಿದ್ದವರಿಗೆ

ಪ್ರಕಟಣೆಯ ಅವಕಾಶ ಮತ್ತು ಉತ್ತೇಜನ ಸಿಕ್ಕಿದ್ದು ಈ ಪತ್ರಿಕೆಗಳಲ್ಲಿ ಲೇಖಕಿಯರ ಕಥೆ, ಕವನ ಮಾತ್ರವಲ್ಲ ಅವುಗಳ ಪರಿಚಯ ಹಾಗೂ ವಿಮರ್ಶಾ ಬರಹಗಳು ಸಹ ಮೇಲೆ ತಿಳಿಸಿದ ಪತ್ರಿಕೆಗಳಲ್ಲಿ ನಿತ್ಯವೂ ಎಂಬಂತೆ ಪ್ರಕಟವಾಗುತ್ತಿದ್ದವು. ಹೀಗಾಗಿ ಲೇಖಕಿಯರು ಹಿಡಿದ ಹೊಸ ಮಾರ್ಗ ಹಾಗೂ ಹೊಸ ವಿಚಾರಗಳು ನಾಡಿನಾದ್ಯಂತ ಪ್ರಸಾರಗೊಂಡವು. ರಾಜಧಾನಿಯಿಂದ ದೂರದ ಪ್ರದೇಶಗಳ ಲೇಖಕಿಯರಲ್ಲಿಯೂ ಸಾಹಿತ್ಯವನ್ನು ಕುರಿತು ಒಂದು ಹೊಸ ಎಚ್ಚರ ಮೂಡಿಸುವುದಕ್ಕೆ ಈ ಪತ್ರಿಕೆಗಳು ಕಾರಣವಾದವು. ಹೊಸ ಚಿಂತನೆಯಾಗಿ ಬೆಳೆಯಿತು. ಸ್ತ್ರೀವಾದವು ೧೯೭೦ರಲ್ಲಿಯೇ ಕರ್ನಾಟಕಾಂಧ್ರಕ್ಕೆ ಕಾಲಿಟ್ಟರು ತೀವ್ರ ಸ್ವರೂಪದ ಸ್ತ್ರೀವಾದಿ ಸಾಹಿತ್ಯವು ಮಾತ್ರ ೧೯೮೦ರಲ್ಲಿಯೇ ಬೆಳಕಿಗೆ ಬಂದಿರುವುದನ್ನು ಕಾಣಬಹುದಾಗಿದೆ.

*** ಕನ್ನಡ ಸ್ತ್ರೀವಾದಿ ಸಾಹಿತ್ಯದ ಸ್ಥೂಲನೋಟ :**

ಜಿ.ಎಸ್. ಆಮೂರ ಅವರು "ಅವಳ ಕತೆಗಳು" ಎಂಬ ಕಥಾ ಸಂಕಲನದ ಪ್ರಸ್ತಾವನೆಯಲ್ಲಿ ಕನ್ನಡ ಮಹಿಳಾ ಸಾಹಿತ್ಯದ ನಾಲ್ಕು ಪೀಳಿಗೆಗಳನ್ನು ಸ್ಪಷ್ಟವಾಗಿ ಗುರುತಿಸಿದ್ದಾರೆ. ಅವರು ಅವುಗಳಲ್ಲಿನ ನಾಲ್ಕನೆಯ ಪೀಳಿಗೆಯ ಲೇಖಕಿಯರು ಮಹಿಳಾ ಚಳವಳಿಗಳಿಂದ ಪ್ರಭಾವಿತರಾಗಿದ್ದಾರೆ ಎಂದು ಹೇಳಿದ್ದಾರೆ. ೧೯೭೦ರ ನಂತರ ಬರೆಯತೊಡಗಿದ ಲೇಖಕಿಯರು ಒಂದಿಲ್ಲೊಂದು ರೀತಿಯಿಂದ ಜಾಗತಿಕ ಸ್ವರೂಪದ ಸ್ತ್ರೀಮುಕ್ತಿ ಚಳವಳಿಗಳಿಂದ ಪ್ರಭಾವಿತರಾದವರು (ಜಿ.ಎಸ್. ಆಮೂರ (ಸಂ): ಪ್ರಸ್ತಾವನೆ, ಅವಳ ಕತೆಗಳು, ಪುಟ–೧೧) ಎಂಬ ಅವರ ಮಾತುಗಳು ಕನ್ನಡ ಸ್ತ್ರೀವಾದಿ ಸಾಹಿತ್ಯಕ್ಕೆ ನಿರ್ದಿಷ್ಟ ಚೌಕಟ್ಟನ್ನು ಒದಗಿಸುತ್ತವೆ. ೧೯೭೦ಕ್ಕೂ ಹಿಂದಿನ ಎರಡು ಮತ್ತು ಮೂರನೇ ಪೀಳಿಗೆಯ ಲೇಖಕಿಯರ ಕೆಲವು ಕೃತಿಗಳಲ್ಲಿ ಪ್ರತಿಭಟನೆ ಕಾಣುತ್ತಿದೆಯಾದರೂ ಅದು ತೀರ ವೈಯಕ್ತಿಕ ನೆಲೆಯದ್ದಾಗಿದೆ. ಅಲ್ಲಿ ಪ್ರತಿಭಟನೆ ಒಂದು ಮೌಲ್ಯವಾಗಿ, ಸಮಷ್ಟಿ ಪ್ರಜ್ಞೆಯಾಗಿ ಬಂದಿಲ್ಲದಿರುವುದರಿಂದ ಹಾಗೂ ಆ ಕಾಲಕ್ಕೆ ಭಾರತದಲ್ಲಿ ಮಹಿಳಾ ಚಳವಳಿ ಅಸ್ತಿತ್ವ ಪಡೆದಿರಲಿಲ್ಲವಾದ್ದರಿಂದ ಸ್ತ್ರೀವಾದಿ ಪ್ರಜ್ಞೆ ಚಳವಳಿಯ ರೂಪ ಪಡೆಯಲು ಸಾಧ್ಯವಿರಲಿಲ್ಲ. ಈ ಹಿನ್ನೆಲೆಯಲ್ಲಿ ನಾಲ್ಕನೆಯ ತಲೆಮಾರಿನ ಲೇಖಕಿಯರ ಮೇಲೆ ಬೇರೆ ಬೇರೆ ಸಾಹಿತ್ಯ ಪಂಥಗಳ ಪ್ರಭಾವವಿದ್ದರೂ ಅವರ ಸಾಹಿತ್ಯದ ವಸ್ತುವಿನ ಮೇಲೆ ಸ್ತ್ರೀವಾದದ ಪ್ರಭಾವವೇ ಹೆಚ್ಚಾಗಿರುವುದನ್ನು ಕಾಣಬಹುದಾಗಿದೆ.

ಸ್ತ್ರೀವಾದಿ ಅಧ್ಯಯನಗಳಿಂದ ನೇರವಾಗಿ ಅಥವಾ ಪರೋಕ್ಷವಾಗಿ ಪ್ರೇರಿತವಾದ ಕೆಲವು ಹಿರಿಯ ಲೇಖಕಿಯರು ಇದುವರೆಗಿನ ತಮ್ಮ ಸಾಹಿತ್ಯದ ಜಾಡನ್ನೆ ಬದಲಾಯಿಸಿಕೊಂಡರು. ಅಂಥವರಲ್ಲಿ ಅನುಪಮ ನಿರಂಜನ, ನಿರುಪಮ, ಎಚ್.ಎಸ್. ಪಾರ್ವತಿ ಮೊದಲಾದವರು ಮುಖ್ಯರಾಗಿದ್ದಾರೆ.

೧. **ಅನುಪಮ ನಿರಂಜನ :** ವೃತ್ತಿಯಲ್ಲಿ ವೈದ್ಯರಾದರೂ ಅನುಪಮ ಅವರಿಗೆ ಮಹಿಳೆಯರ ಬಗೆಗೆ ಅಪಾರವಾದ ಕಳಕಳಿ ಇದೆ. ವಸ್ತು, ಧೋರಣೆ, ಆಶಯಗಳ ದೃಷ್ಟಿಯಿಂದ ಡಾ.

ಅನುಪಮ ನಿರಂಜನ ಅವರು ತುಂಬ ವಿಭಿನ್ನ ನೆಲೆಯಲ್ಲಿ ನಿಲ್ಲುವ ಲೇಖಕಿಯಾಗಿದ್ದಾರೆ. ನವೋದಯ ಚಳವಳಿಯ ತೀವ್ರ ಪ್ರಭಾವಕ್ಕೆ ಒಳಗಾಗಿ ಬರವಣಿಗೆ ಪ್ರಾರಂಭಿಸಿದ ಅನುಪಮ ಅವರು ಪ್ರಗತಿಶೀಲ ಚಳವಳಿಯಿಂದಲೂ ಪ್ರಭಾವಿತರಾದರೂ ನಂತರ ಶೋಷಣೆಯನ್ನು ವಿರೋಧಿಸುವ, ಪ್ರತಿಭಟಿಸುವ ಬಂಡಾಯ ಸ್ತ್ರೀವಾದಿ ಧೋರಣೆಗಳನ್ನು ಅವರ ಕೊನೆಯ ಹಂತದ ಸಾಹಿತ್ಯ ಪ್ರಕಟಿಸುತ್ತದೆ.

ಆಧುನಿಕ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಕಾಣಿಸಿದ ಎಲ್ಲಾ ಸಾಹಿತ್ಯ ಚಳವಳಿಗಳಲ್ಲೂ ಸಕ್ರಿಯವಾಗಿ ಭಾಗವಹಿಸುತ್ತ ಪ್ರತಿಯೊಂದು ಸಾಹಿತ್ಯ ಚಳವಳಿಯಿಂದಲೂ ಗಟ್ಟಿಯಾದ ಏಕೈಕ ಲೇಖಕಿ ಡಾ. ಅನುಪಮ ನಿರಂಜನ ಎನ್ನಬಹುದು. ಕೊಳಚೆ ಕೊಂಪೆಯದಾನಿಗಳು, ಘೋಷ, ಆಳ, ಮೂಲ ಮುಖಿ, ಮಾಧವಿ ಮುಂತಾದ ಕೃತಿಗಳನ್ನು ಗಮನಿಸಿದಾಗ ಅನುಪಮ ಕೃತಿಯಿಂದ ಕೃತಿಗೆ ಬೆಳೆಯುತ್ತಾರೆ. ಕನ್ನಡ ಸಾಹಿತ್ಯದಲ್ಲಿ ಬಂದ ಪ್ರಮುಖ ಸೃಜನಶೀಲ ಚಳವಳಿಗಳಲ್ಲಿ ಗಂಭೀರವಾಗಿ ತೊಡಗಿಕೊಂಡು ನಿರಂತರವಾಗಿ ಬೆಳವಣಿಗೆಯನ್ನು ಪಡೆಯುತ್ತಾರೆ.

"ಮೂಲ ಮುಖಿ", ಆಳ, ಕಣಿವೆಗೆ ಬಂತು ಬೇಸಿಗೆಗಳಲ್ಲಿ ಸ್ತ್ರೀವಾದಿ ಸಿದ್ಧಾಂತದ ದೊಡ್ಡದನಿಯಿದೆ. ಅನುಪಮಾ ಹೆಣ್ಣಿನ ದೈಹಿಕ ಆರೋಗ್ಯದ ಬಗ್ಗೆಯೂ ಕಾಳಜಿವಹಿಸಿದ ವೈದ್ಯೆ, ಹೆಣ್ಣಿನ ಆರೋಗ್ಯ ವೈದ್ಯಕೀಯಕ್ಕೆ ಸಂಬಂಧಿಸಿದ ಅವರ ಬರಹಗಳು ಪ್ರಪಂಚದ ಸುತ್ತ ಪರ್ಯಾಟನೆ ಮಾಡಿಬಂದ ಪ್ರವಾಸದ ಅನುಭವಗಳು, ನೆನಪು ಸಿಹಿ–ಕಹಿಗಳು ಅನುಪಮಾ ಅವರ ಬರಹದ ವ್ಯಾಪ್ತಿಯನ್ನು ವಿಸ್ತರಿಸಿವೆ.

ಇವರ ಕೃತಿಗಳಲ್ಲಿ ಕೆಳಸ್ತರದ ಬದುಕು, ಜೊತೆಜೊತೆಗೆ ಪುರೋಹಿತಶಾಹಿ, ಬಂಡವಾಳಶಾಹಿ, ಅಮಾನವೀಯ ಧೋರಣೆಗಳ ಚರ್ಚೆಯೂ ಆಗುತ್ತದೆ. ಇಂದಿರಾ, ತ್ರಿವೇಣಿ ಮುಂತಾದವರು ಜನಪ್ರಿಯ ನೆಲೆಯಲ್ಲಿಯೇ ಸೂಕ್ಷ್ಮವಾಗಿ ಹೆಣ್ಣಿನ ಮನಸ್ಸನ್ನು ಬಿಚ್ಚಿಟ್ಟವರಾಗಿದ್ದಾರೆ.

**೨. ಪಾರ್ವತಿ ಎಚ್.ಎಸ್.** : ಎಚ್.ಎಸ್. ಪಾರ್ವತಿಯವರು ಕನ್ನಡ ಮಹಿಳಾ ಸಾಹಿತ್ಯ ತನ್ನ ಬೆಳವಣಿಗೆಯ ದಾರಿಯನ್ನು ಸ್ಪಷ್ಟಗೊಳಿಸಿಕೊಳ್ಳುತ್ತಿರುವ ಸಂದರ್ಭದಲ್ಲಿ ಕಾಣಿಸಿಕೊಂಡ ಲೇಖಕಿ. ಕತೆ, ಕಾದಂಬರಿ, ವಿಮರ್ಶೆ, ರೇಡಿಯೋ, ನಾಟಕಗಳು, ಹೋರಾಟ, ಸಂಘಟನೆಗಳಲ್ಲಿ ತಮ್ಮನ್ನು ತಾವು ಗುರುತಿಸಿಕೊಂಡ ಅವರ ಪ್ರಾರಂಭಿಕ ಸಾಹಿತ್ಯ ಮಹಿಳೆಯರ ಸಮಸ್ಯೆಗಳನ್ನು ಕಲಾತ್ಮಕವಾಗಿ ನಿರೂಪಿಸುತ್ತವೆ. ನೇಸರ, ನೆಳಲು, ಜೀವನ ಜಾಲ, ಜಾಬಾಲಾ ಮುಂತಾದ ಕಾದಂಬರಿಗಳು ಸ್ತ್ರೀಪರ ಕಾಳಜಿಗಳನ್ನು ವ್ಯಕ್ತಪಡಿಸಿದರೆ. ಗೂಡಿನಿಂದ ಗಗನಕ್ಕೆ ಹೆಣ್ಣಿನ ವಿಮೋಚನೆಯ ಚಿಂತನೆ ಮಾಡುತ್ತದೆ. 'ಜಾಬಾಲಾ' ಕಾದಂಬರಿಯಲ್ಲಿ ಅಪರೂಪದ ವಸ್ತುವನ್ನು ಚಿತ್ರಸಿದ್ದು, ತನ್ನ ಬಂಜೆತನಕ್ಕೆ ಗಂಡನ ಅಸಾಮರ್ಥ್ಯವೇ ಕಾರಣ ಎಂಬ ನಿಜ ಸಂಗತಿಯನ್ನು ತಿಳಿದ ನಾಯಕಿ ರೊಚ್ಚಿಗೇಳುತ್ತಾಳೆ. ಬೇರೆ ಪುರುಷನಿಂದ ಗರ್ಭಿಣಿಯಾಗುತ್ತಾಳೆ.

'ಮಡಿಲು' ಕಾದಂಬರಿಯಲ್ಲಿ ತಾಯ್ತನದ ಸಮಸ್ಯೆ ಅನಾಥ ಮಕ್ಕಳಿಗೆ ದಾರಿಯಾಗುವ ದತ್ತು ಸ್ವೀಕಾರ ಅದರಲ್ಲಿರುವ ಗೊಜಲುಗಳನ್ನು ಹೇಳುವ ಹೊಸ ವಸ್ತುವನ್ನು ಪ್ರಸ್ತುತಪಡಿಸಿದ್ದಾಳೆ. ತಾಯ್ತನದ ವಿಭಿನ್ನ ಸಮಸ್ಯೆಯೊಂದರ ಬಗ್ಗೆ ಹೇಳುತ್ತಲೆ ಭಾವನಾತ್ಮಕತೆಯಿಂದ ದೂರವಾಗಬೇಕಾದ ಅಗತ್ಯವನ್ನು ಈ ಕಾದಂಬರಿ ಸೂಚಿಸುತ್ತದೆ. ಅವರ ಒಂದು ಸಂವತ್ಸರ ಚಕ್ರ ಹೆಣ್ಣೊಬ್ಬಳ ಬೌದ್ಧಿಕ ಮಾನಸಿಕ ವಿಕಾಸದ ಕಡೆಗೆ ಕಣ್ಣಿರಿಸಿಕೊಂಡಿದೆ. ವಿದ್ಯಾವಂತ, ದುಡಿಯುವ ಮಹಿಳೆ ಲಕ್ಷ್ಮಿಯ ನಾನಾಸ್ತರದ ಅನುಭವಗಳ ದಾಖಲೆಗಳಲ್ಲಿ ಹೆಣ್ಣಿಗಾಗುವ ಸೂಕ್ಷಾತಿ ಸೂಕ್ಷ್ಮಗಳ ಶೋಷಣೆಯನ್ನು ಕಟ್ಟಿಕೊಡುವುದರಲ್ಲಿ ಲೇಖಕಿ ಯಶಸ್ವಿಯಾಗುತ್ತಾರೆ.

**೩. ಸಾವಿತ್ರಿ ಎಚ್.ವಿ. :** ಎಚ್.ವಿ. ಸಾವಿತ್ರಮ್ಮನವರ ಸಣ್ಣ ಕತೆಗಳಲ್ಲಿ ಸಮಕಾಲೀನ ಸಾಮಾಜಿಕ ಬದುಕಿನ ಸಂದರ್ಭದಿಂದ ವಸ್ತುವನ್ನು ಹೆಕ್ಕಿಕೊಳ್ಳುವ ಸಹಜತನವಿದೆ. ೧೯೮೦ರಲ್ಲಿ ಇವರು ಬರೆದ "ಸೀತೆ–ರಾಮ–ರಾವಣ" ಕಾದಂಬರಿಯಲ್ಲಿ ರಾಮಾಯಣದ ಸೀತೆಯನ್ನೆ ಹೇಳಿದರೂ ಯಾವ ದೃಷ್ಟಿಯಿಂದ ನೋಡಿದರೂ ಕೇವಲ ಹೆಣ್ಣೊಬ್ಬಳು ಮಾತ್ರ ಪ್ರಕಟಿಸಬಲ್ಲ ಸಂವೇದನೆಗಳನ್ನು ಚೆಲ್ಲುತ್ತಾರೆ. ಇದು ವಾಲ್ಮೀಕಿಗಳ ಅಥವಾ ಇನ್ನಾವುದೋ ಪುರುಷ ಕವಿಯ ದೃಷ್ಟಿಯಿಂದ ರಚಿತಗೊಂಡಿಲ್ಲ. ಕೌಸಲ್ಯೆಯಾಗಲಿ, ಲಕ್ಷ್ಮಣನ ಹೆಂಡತಿ ಊರ್ಮಿಳೆಯಾಗಲಿ ತಮ್ಮ ಗಂಡಂದಿರ ನಡತೆಯನ್ನು ದಿಟ್ಟವಾಗಿ ಪ್ರಶ್ನಿಸಿದ್ದಾರೆ.

ಸಾವಿತ್ರಮ್ಮನವರು ಕೇವಲ ಸೀತೆಯ ಶೋಷಣೆಯನಷ್ಟೇ ಹೇಳದೆ ರಾಮಾಯಣದ ಎಲ್ಲಾ ಪ್ರಮುಖ ಸ್ತ್ರೀ ಪಾತ್ರಗಳ ನೋವಿನ ಕಥೆಯನ್ನು ಚಿತ್ರಿಸುತ್ತಾರೆ. ಇಲ್ಲಿನ ಎಲ್ಲ ಹೆಣ್ಣು ಪಾತ್ರಗಳೂ ತಮ್ಮ ವಿಮೋಚನೆಯ ಹೊಸ ದಿಕ್ಕಿಗಾಗಿ ಪರಿತಪಿಸುತ್ತವೆ.

**೪. ವಿಜಯಾ ದಬ್ಬೆ :** ವಿಜಯಾ ದಬ್ಬೆಯವರು ತಮ್ಮ ಕವಿತೆಗಳಲ್ಲಿ ಪುರುಷರ ನಯವಂಚನೆ, ದ್ವಿಮುಖ ನೀತಿಯನ್ನು ಎತ್ತಿಹಿಡಿದು ಪುರುಷರು ಸ್ತ್ರೀಯರ ಬಗ್ಗೆ ತೋರುವ ಅಸಮಾಧಾನಗಳನ್ನು ಬಯಲಿಗೆಳೆದಿದ್ದಾರೆ. ತರ್ಕಬದ್ಧ ಪ್ರಮಾಣಿಕ ಶೈಲಿಯಲ್ಲಿ ಸ್ತ್ರೀಪರ ಕಾಳಜಿಗಳನ್ನು ವ್ಯಕ್ತಪಡಿಸುವ ಸಾಹಸವನ್ನು ತೋರಿಸಿದ್ದಾರೆ. ಸ್ತ್ರೀಯರಿಗೆ ವಿರೋಧವಾದ ಮೌಲ್ಯಗಳನ್ನು ಸಮಾಜದ ಸ್ಥಾಪಿತ ವ್ಯವಸ್ಥೆಯನ್ನು ತಮ್ಮ ಕವಿತೆಗಳಲ್ಲಿ ಕಟುವಾಗಿ ಟೀಕಿಸಿದ್ದಾರೆ. ತೀಕ್ಷಣವಾದ ವ್ಯಂಗ್ಯ ವಿಡಂಬನೆಗಳಿಂದ ಹಲವು ಸ್ತ್ರೀಪರ ಕವಿತೆಗಳನ್ನು ರಚಿಸಿದ ಇವರು ನಂತರದ ಕವಿಯತ್ರಿಯರಿಗೆ ಸ್ತ್ರೀಯರಿಗೆ ಮಾರ್ಗದರ್ಶನವಾಗಿದ್ದಾರೆ. ಇವರ ಕವನ ಸಂಕಲನಗಳು ಇರುತ್ತವೆ. ನೀರು ಲೋಹದ ಚಿಂತೆ, ತಿರುಗಿನಿಂತ ಪ್ರಶ್ನೆ ಇತ್ಯಾದಿ.

"ಇರುತ್ತವೆ" ಸಂಕಲನದಲ್ಲಿ ಪ್ರಸ್ತುತ ಸಮಾಜದ ವಾಸ್ತವ ಬದುಕಿನಲ್ಲಿ ತಿಳಿಯದಂತೆ ಆದರ್ಶದ ಮುಖವಾಡ ಧರಿಸಿ ಗಂಡಸರು ತಾವೇ ಶ್ರೇಷ್ಠರೆಂದು ಮೆರೆಯುವವರ ಮೂರ್ಖತನಗಳನ್ನು ಎತ್ತಿಹಿಡಿಯುವಂತ ಕವನಗಳಿವೆ. ಸ್ತ್ರೀವಾದಿ ಪದ್ಯಗಳೆನಿಸಿಕೊಂಡರು. ಕಲಾತ್ಮಕ ದೃಷ್ಟಿಯಿಂದಲೂ ಇವರ ಕವಿತೆಗಳು ಗಮನ ಸೆಳೆಯುತ್ತವೆ.

೫. **ರಾಜಲಕ್ಷ್ಮಿ ಎನ್. ರಾವ್ :** ರಾಜಲಕ್ಷ್ಮಿ ಎನ್. ರಾವ್ ಅವರು ಕೇವಲ ಒಂದು ಸಂಗ್ರಮ ಸಂಕಲನವನ್ನು ಪ್ರಕಟಿಸಿ ಸಾಹಿತ್ಯ ಕ್ಷೇತ್ರದಿಂದ ಮರೆಯಾದವರು. ಇವರ ಕಥೆಗಳ ವಸ್ತು ಸಹ ಗಂಡು–ಹೆಣ್ಣುಗಳ ಸಂಬಂಧವನ್ನೆ ಕುರಿತದ್ದು. ಇದನ್ನು ಅದರ ಎಲ್ಲ ಸಂಕೀರ್ಣತೆಗಳೊಂದಿಗೆ ಗ್ರಹಿಸುವ ಅವರಲ್ಲಿ ವೀಣಾ ಅವರಿಗಿಂತ ಹೆಚ್ಚಿನ ಸೂಕ್ಷ್ಮತೆ ಹಾಗೂ ಸಂವೇದನಾಶೀಲತೆಗಳು ಕಂಡುಬರುತ್ತವೆ. ವೀಣಾ ಅವರ ಎಲ್ಲ ಕಥೆಗಳಲ್ಲೂ ಪುರುಷನೇ ವಂಚಕನಾಗಿ ಹಾಗೂ ದುರ್ಬಲನಾಗಿ ಕಾಣಿಸಿಕೊಳ್ಳುವುದರಿಂದ ಅವರ ದೃಷ್ಟಿ ಏಕಮುಖವಾಗಿದೇನೋ ಅನ್ನಿಸಿ ಬಿಡುವುದುಂಟು. ರಾಜಲಕ್ಷ್ಮಿ ಅವರ ಬಗ್ಗೆ ಇಂತಹ ಧೋರಣೆಗಳು ಇಲ್ಲ. ರಾಜಲಕ್ಷ್ಮಿಯವರ ಕಥೆಗಳನ್ನು ಕುರಿತು ಲಂಕೇಶ್ ಅವರು ಗಂಡು–ಹೆಣ್ಣುಗಳಿಬ್ಬರೂ ಸಾಮಾನ್ಯವಾದ ಯಾತನೆಯ ಮಿಸ್ಟರಿಯನ್ನು ಅವರು ಗಂಡು–ಹೆಣ್ಣುಗಳ ಸಂಬಂಧದ ಚೌಕಟ್ಟಿನಲ್ಲಿ ದಾಂಪತ್ಯದ ಚೌಕಟ್ಟಿನಲ್ಲಿ ಪರಿಶೀಲಿಸಿದ್ದಾರೆ.

ತ್ರಿವೇಣಿಯವರಂತೆ ಅವರು ಸ್ತ್ರೀವರ್ಗದ ವಕ್ತಾರರಂತೆ ಬರೆಯುತ್ತಿದ್ದಾರೆ ಅನ್ನಿಸುವುದಿಲ್ಲ. ಗಂಡಸಿನ ದೌರ್ಬಲ್ಯಗಳ ಜೊತೆಗೆ ಅವನ ಕಷ್ಟಗಳ ಅರಿವೂ ಇರುವುದರಿಂದ ಮತ್ತು ಆ ಕಷ್ಟಗಳ ವಸ್ತುನಿಷ್ಠ ನಿರೂಪಣೆಯಿಂದ ರಾಜಲಕ್ಷ್ಮಿಯವರ ಕತೆಗಳಲ್ಲಿ ಲೇಖಕಿಯರಿಗೆ ಅಪರೂಪವಾದ ವಸ್ತುನಿಷ್ಠತೆ, ಪ್ರಬುದ್ಧತೆ ಸಾಧಿಸುವುದು ಅನನ್ಯ. ಇದರಿಂದಾಗಿಯೆ ಅನುಭವವನ್ನು ಸರಳವಾಗಿ, ನೇರವಾಗಿ ಹೇಳಿಬಿಟ್ಟು ಕೈತೊಳೆದುಕೊಳ್ಳುವ ತ್ರಿವೇಣಿ, ಅನುಪಮ ಇವರಿಗಿಂತ ಭಿನ್ನವಾಗಿ ಕಥೆ ಹೇಳುವ ಕಷ್ಟಕ್ಕೂ, ಹೊಸ ಶೈಲಿಯ ಅನಿವಾರ್ಯತೆಗೂ ಒಳಗಾದರೆಂದು ಕಾಣುತ್ತದೆ. ಅವರ ಕಥೆಗಳು ಮಹಿಳೆಯರಿಗೆ ವಿಶಿಷ್ಟವಾದ ದೃಷ್ಟಿಕೋನ ಶೈಲಿ ಇವುಗಳ ಅನಿವಾರ್ಯತೆಯನ್ನು ಜೊತೆಗೆ ಈ ಲೇಖಕಿಯರು ಒಟ್ಟು ಸಾಹಿತ್ಯ ಪರಂಪರೆಯೊಡನೆ ಪಡೆಯಬೇಕಾದ ಸಂಬಂಧದ ಸ್ವರೂಪವನ್ನು ಸೂಚಿಸುವ ಪ್ರತೀಕಳಾಗಿ ಉಳಿದಿವೆ.

೬. **ವೀಣಾ ಶಾಂತೇಶ್ವರ :** ಮಹಿಳಾ ಕಥಾ ಸಾಹಿತ್ಯದಲ್ಲಿ ಒಂದು ಹೊಸ ಅಲೆ ಕಾಣಿಸಿಕೊಳ್ಳಲು ಕಾರಣರಾದವರು. ವೀಣಾ ಶಾಂತೇಶ್ವರರ ಕಥೆಯ ವಸ್ತು ಧೋರಣೆ ನಿರೂಪಣೆಯ ದಾಟಿ ಈ ಎಲ್ಲ ದೃಷ್ಟಿಗಳಿಂದಲೂ ವೀಣಾ ಶಾಂತೇಶ್ವರ ಅವರ ಕಥೆಗಳಲ್ಲಿ ಹೊಸತನವಿದೆ. ಮೊಟ್ಟ ಮೊದಲಿಗೆ ಅತ್ಯಂತ ಸೂಕ್ಷ್ಮ ಸಂವೇದನೆಯ, ದಿಟ್ಟ ನಿಲುವಿನ ವಿದ್ಯಾವಂತೆಯೂ, ವಿಚಾರಶೀಲಳೂ ಆದ ನಾಯಕಿ ಇಲ್ಲಿ ಉದ್ಭವವಾಗಿದ್ದಾಳೆ. ವೀಣಾ ಅವರ ಎಲ್ಲ ಕಥೆಗಳ ನಾಯಕಿಯರು ಇದೇ ಗುಣಗಳ ಪ್ರತೀಕ. ಇವರು ಸಮಸ್ಯೆಗಳನ್ನು ಮುಖಾಮುಖಿಯಾಗಿ ಎದುರಿಸುತ್ತಾರೆ. ತಮ್ಮ ಭವಿಷ್ಯವನ್ನು ಗಂಡ, ಅಪ್ಪ, ಸಮಾಜ, ಧರ್ಮಗಳ ಕೈಗೆ ಕೊಡದೆ ತಾವೇ ನಿರ್ಧರಿಸುತ್ತಾರೆ. ವೀಣಾ ಅವರ ಕಥಾವಸ್ತುವೂ ಸಹ ಸಾಂಪ್ರದಾಯಿಕ ಕಥಾವಸ್ತುಗಳಿಗಿಂತಲೂ ಭಿನ್ನ. ಗಂಡು–ಹೆಣ್ಣಿನ ಸಂಬಂಧಗಳ ವಿಶ್ಲೇಷಣೆಯೇ ಅವರ ಎಲ್ಲ ಕಥೆಗಳ ವಸ್ತು ವೀಣಾ ಅವರ ನಿಲುವುಗಳು ಸ್ತ್ರೀಪರವಾಗಿದ್ದರೂ ಅವು ಎಲ್ಲೂ ಶೋಷಣೆಯ ರೂಪತಾಳುವುದಿಲ್ಲ. ಪುರುಷರ ನಯವಂಚನೆ, ಹೇಡಿತನ, ಸಂಪ್ರದಾಯ, ಶರಣತೆಗಳನ್ನು ಕಥೆಯ ಮೂಲಕವೆ ಬಯಲುಗೊಳಿಸುತ್ತಾರೆ.

ವೀಣಾ ಅವರ ಕಥೆಗಳಲ್ಲಿ ಹೀಗೊಂದು ಕಥೆ, ಕಥಾ ನಾಯಕಿಯ ಸ್ವತಂತ್ರ ನಿಲುವನ್ನು ಪ್ರತಿಪಾದಿಸುವಂತೆಯೆ ಪುರುಷನ ಅಹಂ ಪ್ರಜ್ಞೆ ಎಲ್ಲ ಸಂದರ್ಭದಲ್ಲೂ ಪ್ರಕಟವಾಗದಿದ್ದರೂ ಸುಪ್ತವಾಗಿಯಂತೂ ಇದ್ದೇ ಇತ್ತು. ತನಗೆ ಧಕ್ಕೆಯಾಗುವಾಗ ಹೀಗೆ ಎಲ್ಲ ಮುಖವಾಡಗಳನ್ನು ಕಿತ್ತೊಗೆದು ಮೇಲೆದ್ದು ನಿಲ್ಲುತ್ತವೆ ಎಂಬುದನ್ನು ಧ್ವನಿಸುತ್ತದೆ.

"ಬಿಡುಗಡೆ" ಕಥೆಯ ನಾಯಕಿ ಕ್ರೂರಿಯೂ, ಅಹಂಕಾರಿಯೂ ಆದ ಗಂಡ ಸತ್ತಾಗ ಹೊರಗೆ ದುಃಖಿಸಿದಂತೆ ನಟಿಸಿದರೂ ಅಡುಗೆ ಮನೆಗೆ ಹೋಗಿ ಹಾಲು ಕುಡಿದು ಸ್ವಸ್ಥವಾಗಿ ಮಲಗುತ್ತಾಳೆ.

"ಕೊನೆಯ ದಾರಿ" ಕಥೆಯಲ್ಲಿ ಪರಸ್ತ್ರೀ ಸಂಗಕ್ಕೆ ಹಾತೊರೆಯುವ ಪುರುಷರು ಜವಾಬ್ದಾರಿ ಹೋರುವ ಸಂದರ್ಭದಲ್ಲಿ ಎಷ್ಟು ತರ್ಕಬದ್ಧವಾಗಿ ನುಣುಚಿಕೊಳ್ಳುತ್ತಾರೆ ಎಂಬುದನ್ನು ಕುತೂಹಲದಿಂದ ಗಮನಿಸುತ್ತ ತನಗೆ ತಕ್ಕ ಸಂಗಾತಿಯನ್ನು ಅರಸುತ್ತಾ ಹೋಗುವ ಮುಕ್ತ ನಿಲುವಿನ ಹೆಣ್ಣಿನ ಚಿತ್ರವಿದೆ. ಲೈಂಗಿಕ ವಿಷಯಗಳ ಬಗ್ಗೆ ಹೆಣ್ಣಿನ ಆಲೋಚನೆ ಯಾವ ರೀತಿ ಇರುತ್ತದೆ ಎಂಬುದರ ಒಂದು ದಿಟ್ಟ ಚಿತ್ರಣವು ಇಲ್ಲಿದೆ.

ಮುಖ್ಯವಾಗಿ ಇಲ್ಲಿನ ಹೆಣ್ಣುಗಳು ವಿದ್ಯಾವಂತರು, ಆರ್ಥಿಕ ಸ್ವಾವಂಬನೆ ಪಡೆದವರು. ಇವರೆಲ್ಲ ಮದುವೆ ತಮ್ಮ ವ್ಯಕ್ತಿಗತ ಸ್ವಾತಂತ್ರ್ಯಕ್ಕೆ ದಕ್ಕೆ ತಂದೊಡ್ಡಬಹುದೆಂಬ ಭೀತಿ ವ್ಯಕ್ತಪಡಿಸುತ್ತಾರೆ. ಇಂತಹ ವಸ್ತು, ನಿರೂಪಣೆ ಕನ್ನಡ ಮಹಿಳಾ ಸಾಹಿತ್ಯಕ್ಕೆ ಮೊದಲ ಬಾರಿಗೆ ವೀಣಾ ತಂದರೆಂಬುದನ್ನು ಗಮನಿಸಬಹುದು.

**೭. ವೈದೇಹಿ :** ಅಪಾರ ವೈವಿಧ್ಯತೆ ಸಾಧಿಸುವ ಮೂಲಕ ಲೇಖಕಿಯೊಬ್ಬಳು ಏರಬಹುದಾದ ಎತ್ತರಕ್ಕೆ ಸಾಕ್ಷಿಯಂತಿದ್ದಾರೆ. ಗ್ರಾಮೀಣ ಬದುಕು, ಕೌಟುಂಬಿಕ ಜೀವನ, ಹೆಣ್ಣು–ಗಂಡುಗಳ ಸಂಬಂಧದ ತಾಕಲಾಟಗಳು, ಆಧುನಿಕ ಬದುಕು ತಂದೊಡ್ಡುವ ಸ್ಥಿತ್ಯಂತರಗಳು ಹೀಗೆ ಯಾವುದೇ ವಿಷಯವನ್ನು ತೆಗೆದುಕೊಂಡರು ಸಮರ್ಥವಾಗಿ ನಿರ್ವಹಿಸುವ ಮೂಲಕ ಹೊಸ ಹೊಸ ಪ್ರಯೋಗಗಳನ್ನು ಮಾಡುತ್ತಲೇ ಇರುವ ವೈದೇಹಿಯವರ "ಗೋಲ" ಸಂಕಲನದ ಕಥೆಗಳು ಕಥೆಯನ್ನು ಕುರಿತ ನಮ್ಮ ಸಿದ್ಧ ಮೌಲ್ಯಗಳ ಪರಿಕಲ್ಪನೆಯನ್ನು ಬದಲಿಸುತ್ತವೆ. ವೈದೇಹಿಯವರ ವೈಶಿಷ್ಟವಿರುವುದು ವಿಭಿನ್ನ ವರ್ಗ, ಸ್ಥರಗಳ ಹೆಂಗಸರ ಅಂತರಂಗದ ಬದುಕನ್ನು ಚಿತ್ರಿಸುವಲ್ಲಿ ಅವರು ಗಂಡು–ಹೆಣ್ಣುಗಳನ್ನು ಮುಖಾಮುಖಿಯಾಗಿಸುವುದಕ್ಕಿಂತ ಹೆಚ್ಚಾಗಿ ಒಟ್ಟು ಸಾಮಾಜಿ, ಕೌಟುಂಬಿಕ ನೆಲೆಯಲ್ಲಿ ಸ್ತ್ರೀಯರ ಶೋಷಣೆಗಳತ್ತ ಗಮನ ಹರಿಸುತ್ತಾರೆ. ಈ ದೃಷ್ಟಿಯಿಂದ ಅವರ ಹಕ್ಕು, ಒಂದು ಅಪರಾಧದ ತನಿಖೆ, ಗುಲಾಬಿ ಟಾಕೀಸು ಮತ್ತು ಸಣ್ಣ ಅಲೆಗಳು, ಗೂಡಿನೊಳಗಿನ ಒಂದು ಹಕ್ಕಿ ಶೋಧ ಮೊದಲಾದವು ಮಹತ್ವದ ಕಥೆಗಳಾಗಿವೆ. ಇವರ ಬಹುತೇಕ ಕಥೆ, ಕಾದಂಬರಿಗಳು ಸ್ತ್ರೀವಾದಿ ಚಿಂತನೆಯ ಹಿನ್ನೆಲೆಯಲ್ಲಿಯೇ ಮೂಡಿಬಂದಂತವುಗಳಾಗಿವೆ.

**೮. ಬಿ.ಟಿ. ಲಲಿತಾ ನಾಯಕ್ :** ಲಂಬಾಣಿ ಬುಡಕಟ್ಟಿನ ಹಿನ್ನೆಲೆಯಿಂದ ಬಂದ ಲಲಿತಾ ನಾಯಕ್ ತಮ್ಮ ಜನಾಂಗದ ಜನರ ಕಷ್ಟ–ಸುಖಗಳನ್ನು ಮತ್ತು ಬುಡಕಟ್ಟಿನ ಜನವಾದರೂ

ಇಲ್ಲಿಯ ಮಹಿಳೆ ಶೋಷಿತಳಾಗಿರುವುದನ್ನು ಕಂಡವರು ಮತ್ತು ಅನುಭವಿಸಿದವರು. ಇದಲ್ಲದೆ ಕರ್ನಾಟಕದ ತೀರ ಹಿಂದುಳಿದ ರಾಯಚೂರು ಜಿಲ್ಲೆಯವರಾದ ಕಾರಣ ಇಲ್ಲಿನ ಜನರಲ್ಲಿ ತಾಂಡವವಾಡುವ ಅನಕ್ಷರತೆ, ಅನಾರೋಗ್ಯ, ಬರಗಾಲ, ಹಸಿವು, ಬಡತನಗಳ ನೋವು, ಸಂಕಟಗಳನ್ನು ಸಮೀಪದಿಂದ ಕಂಡವರು ಮತ್ತು ಇಂತಹ ದುಃಸ್ಥಿತಿಯನ್ನು ಕೊನೆಗಾಣಿಸುವ ಹೋರಾಟಗಳಲ್ಲಿ ಭಾಗವಹಿಸುತ್ತಲೆ ರಾಜಕೀಯ ಕ್ಷೇತ್ರಕ್ಕೂ ಇಳಿದವರು ಇವರ ಕಥೆ, ಕಾದಂಬರಿ, ಕಾವ್ಯದಲ್ಲಿ ಶೋಷಣೆಗೊಳಗಾದ ಎಲ್ಲ ಜನರ ಬದುಕೂ ಇದೆ. ಸಾಮಾನ್ಯವಾಗಿ ಬುಡಕಟ್ಟು ಜನರಲ್ಲಿ ಹೆಣ್ಣು ಸ್ವತಃ ದುಡಿಯುವವಳು ಆಗಿರುವುದರಿಂದ ಹಾಗೂ ಲೈಂಗಿಕವಾಗಿ ಹೆಚ್ಚು ನಿರ್ಬಂಧಗಳಿಗೆ ಒಳಪಟ್ಟಿರುವುದರಿಂದ ಸ್ತ್ರೀ-ಪುರುಷರ ನಡುವೆ ಅಸಮಾನತೆಗಳಿರುವುದಿಲ್ಲ ಎಂಬ ಭಾವನೆ ಇದೆ. ಆದರೆ ಲಲಿತಾ ನಾಯಕ್ ಈ ನಿರ್ಣಯಗಳ ಚಿತ್ರಣವನ್ನು ಈ ನಂಬಿಕೆಯನ್ನು ಬುಡಮೇಲು ಮಾಡುತ್ತದೆ.

ಇಲ್ಲಿಯ ಪುರುಷರು ಸಹ ಸ್ತ್ರೀಯನ್ನು ಅತ್ಯಂತ ಹೀನಾಯವಾಗಿ ಶೋಷಣೆಗೀಡು ಮಾಡುತ್ತಾರೆ. ಇದಕ್ಕಿಂತ ಮಿಗಿಲಾಗಿ ದೈಹಿಕವಾದ ಶೋಷಣೆಗೂ ಗುರಿಪಡುತ್ತಾರೆ. ಇಂತಹ ವ್ಯವಸ್ಥೆಯನ್ನು ನೇರವಾಗಿ ಟೀಕಿಸುವ ದಿಟ್ಟ ನಿಲುವು ಹಾಗೂ ಸಾಮಾಜಿಕ ಬದ್ಧತೆ ಲಲಿತಾ ನಾಯಕ್ ಬರಹಗಳ ವೈಶಿಷ್ಟ್ಯ. ಕೋಪ, ಸಿಟ್ಟು, ವೈಚಾರಿಕತೆ, ಪ್ರಾದೇಶಿಕತೆಗಳೆಲ್ಲವೂ ಬೆರೆತ ವಿಶಿಷ್ಟ ಶೈಲಿ ಅವರ ಸಾಹಿತ್ಯದಲ್ಲಿದೆ. ಕನ್ನಡದಲ್ಲಿ ಮೊದಲ ಬಾರಿಗೆ ಬುಡಕಟ್ಟು ಸಮಾಜವೊಂದರ ಅನಿಸಿಕೆಗಳಿಗೆ ದನಿಕೊಟ್ಟ ಲೇಖಕಿಯಾಗಿ ಮುಖ್ಯರಾಗುತ್ತಾರೆ. ಇವರ ಬರಹಗಳಲ್ಲಿ ಸಹಜವಾಗಿಯೆ ಸಂಘಟನಾತ್ಮಕ, ಪ್ರತಿಭಟನಾತ್ಮಕ ಧೋರಣೆಗಳು ಕಂಡುಬರುವುದನ್ನು ಮನಗಾಣಿಸಬಹುದು.

**೯. ಸಾರಾ ಅಬೂಬಕರ್ :** ಸಾರಾ ಅವರು ಸರಳ ವಿಧಾನ, ಸರಳ ಭಾಷೆಯಲ್ಲಿಯೆ ಮುಸಲ್ಮಾನ ಹೆಣ್ಣು ಮಕ್ಕಳು ಎದುರಿಸುವ ಸಮಸ್ಯೆಗಳು ಅವರೊಂದಿಗೆ ಧರ್ಮದ ಹೆಸರಿನಲ್ಲಿ ಆ ಸಮಾಜ ಮಾಡುವ ಅನ್ಯಾಯಗಳು ಹಾಗೂ ಸ್ತ್ರೀ-ಪುರುಷರ ನಡುವಿನ ನೀತಿ ವ್ಯತ್ಯಾಸಗಳಿಂದಾಗಿ ಅನುಭವಿಸುವ ಬದುಕಿನ ಬವಣೆಗಳು ಮುಂತಾದವನ್ನು ತಮ್ಮ ವಜ್ರಗಳು, ಚಂದ್ರಗಿರಿಯ ತೀರದಲ್ಲಿ, ಚಪ್ಪಲಿಗಳು ಇತ್ಯಾದಿ ಕೃತಿಗಳಲ್ಲಿ ಅತ್ಯಂತ ಮಾರ್ಮಿಕವಾಗಿ ತರುವ ಧೈರ್ಯ ತೋರಿದ ಮಹಿಳೆ ಈ ಅಂಶಗಳನ್ನು ಕೃತಿಗಳಲ್ಲಿ ತಂದುದಕ್ಕಾಗಿ ತಮ್ಮ ಸ್ವಂತ ಬದುಕಿನಲ್ಲಿ ನ್ಯಾಯಾಲಯ ಪ್ರಕರಣವನ್ನು ಧಾರ್ಮಿಕ ವಾದಿಗಳ ಬೆದರಿಕೆಗಳನ್ನು ಎದುರಿಸಬೇಕಾದ ಪ್ರಸಂಗಗಳು ಬಂದರೂ ಬರೆಯುವುದನ್ನು ಬಿಡದೆ ಛಲದಿಂದ ಬಂದುದನ್ನೆಲ್ಲ ಎದುರಿಸಿ ಸ್ತ್ರೀವಾದಿ ಹೋರಾಟಕ್ಕೆ ಬೆಂಬಲವಿತ್ತವರು. ಸಾರಾ ಅವರು ಮುಸಲ್ಮಾನ ಮಹಿಳೆಯ ಸ್ಥಾನಮಾನಗಳ ನಿಜ ಚಿತ್ರಣವನ್ನು ಸಮರ್ಥವಾಗಿ ಹಾಗೂ ಸಂಕೀರ್ಣವಾಗಿ ತಮ್ಮ ಕಥೆಗಳಲ್ಲಿ ತಂದ ಇನ್ನೊಬ್ಬ ಮಹಿಳೆ ಭಾನು ಮುಸ್ತಾಕ್.

**೧೦. ಭಾನು ಮುಸ್ತಾಕ್ :** ಭಾನು ಮುಸ್ತಾಕ್ ಅವರು ಮಸೀದಿಗಳಲ್ಲಿ ಮಹಿಳೆಯರು ನಮಾಜ್ ಮಾಡಬಾರದು ಎಂದು ಖುರಾನ್‌ನಲ್ಲಿ ಎಲ್ಲೂ ಹೇಳಲಾಗಿಲ್ಲ ಎಂಬಂತಹ ಒಂದು ಮಾತಿಗೆ ಬಹಿಷ್ಕಾರದ ಸಮಸ್ಯೆ ಎದುರಿಸುವಂತಹ ಸ್ಥಿತಿಗೆ ಹೋದರೂ ನಿಸ್ಸತ್ವಗೊಳ್ಳದೇ ಬರವಣಿಗೆ ಮುಂದುವರಿಸಿದಂತಹವರಾಗಿದ್ದಾರೆ.

**೧೧. ಗೀತಾ ನಾಗಭೂಷಣ :** ಬದುಕಿನ ಎಲ್ಲ ವಿಷಯಗಳ ಒಳಗೊಳಿಸುವ ದೃಷ್ಟಿಯಿಂದ ತಮ್ಮ ಕೃತಿಗಳನ್ನು ರಚಿಸುವ ಗೀತಾ ನಾಗಭೂಷಣ ಅವರು ಶೂದ್ರ ಸಂಸ್ಕೃತಿಯ ಸ್ತ್ರೀಯರು ಗಂಡಸರ ಕಾಮದ ಸಲುವಾಗಿಯೂ ಮಕ್ಕಳ ಬೆಳವಣಿಗೆಯ ಸಲುವಾಗಿಯೂ ಅನುಭವಿಸುವ ಹಿಂಸೆಗಳನ್ನು ಎದುರಿಸುವ ಸಮಸ್ಯೆಗಳನ್ನು ಗೆದ್ದು ಮೇಲೇಳುವ ಪರಿಯನ್ನು ಅಥವಾ ಸೋತು ಕರಗುವ ರೀತಿಯನ್ನು ಅತ್ಯಂತ ಯಶಸ್ವಿಯಾಗಿ ಮನಸ್ಸಿಗೆ ನಾಟುವಹಾಗೆ ಹಲವು ಕೃತಿಗಳಲ್ಲಿ ಬರೆದು ಸ್ತ್ರೀ-ಪುರುಷರ ನಡುವಿನ ಸಮಾಜದ ಇಬ್ಬಗೆಯ ನೀತಿಯ ಬಗ್ಗೆ ಓದುಗರಲ್ಲಿ ಆಲೋಚಿಸುವಂತೆ ಮಾಡಿದ್ದಾರೆ.

ಗೀತಾ ಅವರ ಕಾಳಜಿಗಳ ಕೆಳವರ್ಗದ ಶೋಷಿತ ಮಹಿಳೆಯರಿಗೆ ಮಾತ್ರ ಸೀಮಿತಗೊಳ್ಳದೆ ಇಡೀ ಬದುಕನ್ನೆ ಒಳಗೊಳ್ಳುವುದು ಅವರ ಬರವಣಿಗೆಯ ಇತ್ಯಾತ್ಮಕ ಅಂಶವಾಗಿದೆ. ಇವರ ಇತರೆ ಕಥೆಗಳೆಂದರೆ ನೀಲಗಂಗಾ, ಹಸಿಮಾಂಸ ಮತ್ತು ಹದ್ದುಗಳು, ಮಾಪುರ ತಾಯಿ ಮಕ್ಕಳು ಇತ್ಯಾದಿ.

**೧೨. ನೇಮಿಚಂದ್ರ :** ಪರಂಪರಾಗತ ಸ್ತ್ರೀ-ಪುರುಷ ಅಸಮಾನತೆಯಿಂದ ಸ್ತ್ರೀಯರಿಗೆ ಎದುರಾಗುವ ಸಮಸ್ಯೆಗಳು ಮತ್ತು ಅವರು ಪ್ರಜ್ಞಾಪೂರ್ವಕವಾಗಿಯೆ ಪರಂಪರೆಯನ್ನು ಧಿಕ್ಕರಿಸಿ ಕೈಗೊಳ್ಳುವ ನಿಲುವುಗಳನ್ನು ನೇಮಿಚಂದ್ರ ಅವರು ಆಧುನಿಕ ಬದುಕಿನ ನೆಲೆಯಲ್ಲಿ ಚಿತ್ರಿಸುತ್ತಾರೆ.

ಸ್ತ್ರೀವಾದಿ ಚಿಂತನೆಯಿಂದಲೆ ಮೂಡಿಬರುವ ಇವರ ಕಥೆಗಳಲ್ಲಿ ಸ್ತ್ರೀಯರ ಸ್ಥಿತಿಗತಿಗಳು ಹಾಗೂ ಅವರಿಗೆ ಎದುರಾಗುವ ನಿರ್ಬಂಧಗಳ ಬಗ್ಗೆ ಸ್ಪಷ್ಟ ತಿಳುವಳಿಕೆ ಇದೆ. ಸ್ತ್ರೀವಾದಿ ಚಿಂತನೆಗಳನ್ನು ಪ್ರತಿನಿಧಿಸುವಂತಹ ಪಾತ್ರ, ಸನ್ನಿವೇಶ, ಸಂಭಾಷಣೆಗಳನ್ನು ಅವರು ಕಥೆಯಲ್ಲಿ ಬಿಂಬಿಸಿದ್ದಾರೆ.

ಕಾಳಜಿಯ ದೃಷ್ಟಿಯಿಂದ ಮೆಚ್ಚಬೇಕಾದ ಕಥೆಗಳನ್ನು ಬರೆದಿರುವ ನೇಮಿಚಂದ್ರ ಅವರಲ್ಲಿ ಹೊಸ ಹೊಸ ವಸ್ತುಗಳನ್ನು ಪ್ರಸ್ತುತಪಡಿಸುವ ಮೂಲಕ ಕಥೆಗಳ ಜಾಡನ್ನು ಬದಲಾಯಿಸುವ ಯತ್ನ ಕಾಣುತ್ತದೆ.

**೧೩. ಪ್ರತಿಭಾ ನಂದಕುಮಾರ್ :** ಕಾವ್ಯ ಮಾಧ್ಯಮದಲ್ಲಿ ತುಂಬಾ ಗಂಭೀರವಾಗಿ ತೊಡಗಿಸಿಕೊಂಡವರು ಪುರುಷ ಜಗತ್ತಿನ ನಯವಂಚನೆ, ಪೆದ್ದುತನ, ಅಜ್ಞಾನ, ನಾಚಿಕೆಗೇಡಿತನಗಳನ್ನು ತೋರಿಕೆಯ ದಾಂಪತ್ಯ ಎದೆಯಿಂದ ಹೊರಬರದೆ ಒಳಗೆ ಹರಿದಾಡಿದ ಭುಸುಗುಡುವ ಹೆಣ್ಣಿನ ಅಂತರಗಳು, ಕನವರಿಕೆಗಳು ಗಂಡು-ಹೆಣ್ಣಿನ ಸಂಬಂಧದ ಬಗ್ಗೆ ಸಮಾಜದ ಅನಗತ್ಯವಾದ

ರಾಕ್ಷಸಿ ಕುತೂಹಲ ಮುಂತಾದವೆಲ್ಲ ಇವರ ಪದ್ಯಗಳಲ್ಲಿ ವ್ಯಂಗ್ಯ, ವಿಡಂಬನೆ, ಹಾಸ್ಯಗಳಲ್ಲಿ ಬೆರತು ಪರಿಣಾಮಕಾರಿಯಾಗಿ ಮಾಡುತ್ತವೆ.

ಹೆಣ್ಣು ಇವರ ಎಲ್ಲ ಕವಿತೆಗಳ ಕೇಂದ್ರವಾಗಿದ್ದರೂ ಅದು ಏಕತಾನದ ಪಾತ್ರವಾಗದೆ ಪ್ರೇಮಿಯಾಗಿ, ಹೆಂಡತಿಯಾಗಿ, ಮಕ್ಕಳ ತಾಯಿಯಾಗಿ ಪುರುಷ ಸಮಾಜದ ದ್ವಂದ್ವ ನೀತಿಗೆ ಸಿಲುಕಿ ಪುರುಷ ಸ್ವಭಾವದ ಸ್ತ್ರೀಯಾಗಿ ಇಲ್ಲಿ ಕಾಣಿಸಿಕೊಂಡಿದ್ದಾಳೆ. ಪ್ರತ್ಯೇಕವಾಗಿ ಸ್ತ್ರೀವಾದಿ ಕವನಗಳು ಎಂದೆನಿಸದೆ ಕಲಾವಂತಿಕೆಯಲ್ಲಿ ಅವು ಮೈತಳೆಯುತ್ತವೆ. ಸ್ತ್ರೀ ಪರವಾಗಿದ್ದರೂ ಹಾಗೆನ್ನಿಸದ ಎಲ್ಲ ದೌರ್ಬಲ್ಯ, ಅಹಂಕಾರಗಳನ್ನು ಕಂಡೂ ಅವನನ್ನು ದ್ವೇಷಿಸದ ವಿಶಿಷ್ಟ ನಿಲುವಿನಿಂದ ಪ್ರತಿಭಾ ಕವಿತೆಗಳು ಇತರ ಕವಿಯತ್ರಿಯರಿಗಿಂತ ಭಿನ್ನವಾಗಿ ನಿಲ್ಲುತ್ತವೆ.

ಈ ಮೇಲಿನ ಸ್ತ್ರೀವಾದಿ ಲೇಖಕಿಯರಲ್ಲದೆ ಇನ್ನು ಅನೇಕರು ತಮ್ಮದೆ ಆದ ಸಾಂಸ್ಕೃತಿಕ ನೆಲೆಯಿಂದ ಬಂದ ಅನೇಕ ಲೇಖಕಿಯರಿದ್ದಾರೆ. ಅಂತವರೆಂದರೆ ಕಮಲಾ ಹೆಮ್ಮಿಗೆ, ಮಾಲತಿ ಪಟ್ಟಣಶೆಟ್ಟಿ, ಸವಿತಾ ನಾಗಭೂಷಣ, ನಿರೂಪಮಾ, ಎಂ.ಎಸ್. ವೇದ, ಶಶಿಕಲಾ ವೀರಯ್ಯಸ್ವಾಮಿ, ಎಚ್. ನಾಗವೇಣಿ ಮುಂತಾದವರು ತಮ್ಮ ವಿವಿಧ ಪ್ರಕಾರಗಳ ಬರವಣಿಗೆಯಲ್ಲಿ ಸ್ತ್ರೀ ಜಗತ್ತಿನ ಆಲೋಚನೆಗಳನ್ನು ಹೊರತಂದಿಟ್ಟು ಓದುಗರಿಗೆ ಹೊಸ ಅನುಭವವನ್ನು, ಹೊಸ ದೃಷ್ಟಿಕೋನವನ್ನು ಒದಗಿಸಿಕೊಡುವ ಕೆಲಸವನ್ನು ಮಾಡಿದ್ದಾರೆ.

ಈ ಮೇಲೆ ಪ್ರಸ್ತಾಪಿಸಲಾದ ಲೇಖಕಿಯರು ಸ್ತ್ರೀವಾದಿ ಸಂವೇದನೆಯಿಂದ ಸಾಹಿತ್ಯ ರಚನೆ ಮಾಡಿದವರಾಗಿದ್ದು ಕೂಡ ಒಬ್ಬರಿಗಿಂತ ಒಬ್ಬರು ಭಿನ್ನವಾದ ನೆಲೆಯಲ್ಲಿ ಪರಿಕಲ್ಪಿಸಿಕೊಂಡು ತಮ್ಮ ಸಾಹಿತ್ಯದ ವಸ್ತುವನ್ನು ರೂಪಿಸಿಕೊಳ್ಳುತ್ತಾರೆ. ಇವರೆಲ್ಲ ವಿವಿಧ ಜಾತಿ, ಧರ್ಮ, ವರ್ಗ, ಸಮುದಾಯಗಳಿಂದ ಬಂದವರಾಗಿದ್ದು, ಅವರ ಸಾಹಿತ್ಯ ಕೃಷಿಯನ್ನು ಅವರವರ ಜಾತಿ, ವರ್ಗ, ಧರ್ಮದಲ್ಲಿನ ಮಹಿಳೆಯರ ಸ್ಥಾನಮಾನ, ಅವರ ಸ್ಥಿತಿಗತಿಗಳನ್ನು ತಮ್ಮ ಸಾಹಿತ್ಯದಲ್ಲಿ ಮೇಳೈಸುವ ಕಾರ್ಯವನ್ನು ಮಾಡಿದ್ದಲ್ಲದೆ ಆಯಾ ಸಂಸ್ಕೃತಿಗಳಲ್ಲಿನ ಮಹಿಳೆಯರ ಶೋಷಣೆಗೆ ಕಾರಣವಾದಂತಹ ಅಂಶಗಳನ್ನು ವಿರೋಧಿಸುವ, ಪ್ರತಿಭಟಿಸುವಂತಹ ಕೆಲಸವನ್ನು ತಮ್ಮ ಕಥೆ, ಕವನ, ಕಾದಂಬರಿಗಳ ಮೂಲಕ ಮಾಡಿದ್ದಾರೆ. ಉದಾ: ಬಿ.ಟಿ. ಲಲಿತಾ ನಾಯಕ್ ಅವರ ಸಾಹಿತ್ಯವನ್ನು ಕುರಿತು ಹೇಳುವುದಾದರೆ ಸಾಮಾನ್ಯವಾಗಿ ಬುಡಕಟ್ಟು ಜನರಲ್ಲಿ ಹೆಣ್ಣು ಸ್ವತಃ ದುಡಿಯುವವಳು ಆಗಿರುವುದರಿಂದ ಹಾಗೂ ಲೈಂಗಿಕವಾಗಿ ಹೆಚ್ಚು ನಿರ್ಬಂಧಗಳಿಗೆ ಒಳಪಟ್ಟಿರುವುದರಿಂದ ಸ್ತ್ರೀ–ಪುರುಷರ ನಡುವೆ ಅಸಮಾನತೆಗಳಿರುವುದಿಲ್ಲ ಎಂಬ ಭಾವನೆ ಇದೆ. ಆದರೆ ಲಲಿತಾ ನಾಯಕ್ ಈ ನಿರ್ಣಯಗಳ ಚಿತ್ರಣವನ್ನು ಈ ನಂಬಿಕೆಯನ್ನೂ ಬುಡಮೇಲು ಮಾಡುತ್ತದೆ.

ಸಾರಾ ಅಬೂಬಕರ್ ತಮ್ಮ ಕೃತಿಗಳ ಮೂಲಕ ಈ ಧರ್ಮದ ಸ್ತ್ರೀ ವಿರೋಧಿ ನೀತಿಗಳು, ಮಾನವ ವಿರೋಧಿ ನೀತಿಗಳು, ಸಂಪ್ರದಾಯ ಆಚರಣೆಗಳ ಅರ್ಥಹೀನ ಹಾಗೂ ಅವುಗಳ ದ್ವಂದ್ವನೀತಿ, ಅಮಾನವೀಯತೆ, ಬಡವರ ಮತ್ತು ದುಡಿಯುವ ವರ್ಗದ ಶೋಷಣೆಗಳನ್ನು

ಬಯಲಿಗೆಳೆದಿದ್ದಾರೆ. ಸ್ವತಃ ಈ ಜನಾಂಗದ ಮುಸ್ಲಿಂ ಮಹಿಳೆಯರು ಎಚ್ಚೆತ್ತುಕೊಳ್ಳುವಂತೆ ಮಾಡಿದ್ದಾರೆ. ಗೀತಾ ನಾಗಭೂಷಣ ಅವರು ಕೆಳವರ್ಗದ ಶೋಷಿತ ಮಹಿಳೆಯರ ಹಕ್ಕುಗಳಿಗೆ ಸಂಬಂಧಿಸಿದಂತಹ ಚಿಂತನೆಗಳನ್ನು ತಮ್ಮ ಸಾಹಿತ್ಯದಲ್ಲಿ ಎತ್ತಿದ್ದಾರೆ. ಅನುಪಮಾ ನಿರಂಜನ ಅವರು ಪುರೋಹಿತಶಾಹಿ, ಬಂಡವಾಳಶಾಹಿಯ ಜೊತೆ ಜೊತೆಗೆ ಕೆಳವರ್ಗದ ಅಮಾನವೀಯ ಧೋರಣೆಗಳನ್ನು ಚರ್ಚಿಸಿದ್ದಾರೆ. ಹೀಗೆ ಕನ್ನಡದ ಸ್ತ್ರೀವಾದಿ ಲೇಖಕಿಯರು ತಮ್ಮ ಸಾಹಿತ್ಯದ ವಸ್ತುವನ್ನು ರೂಪಿಸಿಕೊಳ್ಳುವಾಗ ಅವರ ಸಾಂಸ್ಕೃತಿಕ ಹಿನ್ನೆಲೆಯೆ ಪ್ರಧಾನವಾಗಿ ಕೆಲಸ ಮಾಡಿರುವುದನ್ನು ಕಾಣಬಹುದಾಗಿದೆ. ಇದಲ್ಲದೆ ಆರಂಭಿಕ ಸ್ತ್ರೀವಾದಿ ಚಿಂತನೆಗಳು ಮೇಲುವರ್ಗ ಹಾಗೂ ಮಧ್ಯಮ ವರ್ಗದ ಮಹಿಳೆಯರ ಬದುಕನ್ನು ಕುರಿತವುಗಳಾಗಿವೆ. ದಲಿತ ಹಾಗೂ ಇತರೆ ವರ್ಗ, ಧರ್ಮದ ಮಹಿಳೆಯರನ್ನು ಕಡೆಗಣಿಸಲಾಗಿದೆ ಎಂಬುದನ್ನು ಸ್ತ್ರೀವಾದಿ ವಿಮರ್ಶೆಯು ತೋರಿಸಿಕೊಟ್ಟಿತು. ಇದು ಮುಂದೆ ದಲಿತ ಸ್ತ್ರೀವಾದ, ಮೈನಾರಿಟಿ ಸ್ತ್ರೀವಾದ ಎನ್ನುವ ಇತರೆ ಸ್ತ್ರೀವಾದಿ ಪಂಥಗಳ ಹುಟ್ಟಿಗೆ ಕಾರಣವಾಯಿತು.



**ತೆಲುಗು ಸ್ತ್ರೀವಾದಿ ಸಾಹಿತ್ಯದ ಸ್ಥೂಲನೋಟ :**

ಆಧುನಿಕ ತೆಲುಗು ಸಾಹಿತ್ಯದ ಲೇಖಕಿಯರ ಸಾಹಿತ್ಯ ರಚನೆಯನ್ನು ಮೃಣಾಳಿನಿಯವರು ಮೂರು ಪೀಳಿಗೆಗಳನ್ನು ಗುರುತಿಸಿದ್ದಾರೆ. ಮೊದಲನೆ ಪೀಳಿಗೆಯ ಲೇಖಕಿಯರಿಗೆ ಹೆಣ್ಣಿನ ಸಾಮರ್ಥ್ಯ, ಸಾಧ್ಯತೆಗಳನ್ನು ಗೌರವಿಸುವ ಮನಸ್ಸಿದ್ದರೂ ಇದುವರೆಗೆ ಅವಳನ್ನು ಕಂಡರಿಸಿದ ಮಾದರಿಗಳಿಗಿಂತ ಭಿನ್ನವಾಗಿ ಕಾಣಲು ಸಾಧ್ಯವಾಗುವುದಿಲ್ಲ. ಸ್ತ್ರೀಯರು ಸಾಂಸ್ಕೃತಿಕ ಇತಿಹಾಸದಲ್ಲಿ ಯಾವ ಮೌಲ್ಯಗಳು ತಮ್ಮ ಬಂಧನಕ್ಕೆ ಕಾರಣವಾಯಿತು ಎಂದು ಭಾವಿಸಿದರೋ ಈ ಪೀಳಿಗೆಯ ಲೇಖಕಿಯರು ಅದೇ ನಮ್ಮ ದೇಶದ ಹೆಣ್ಣಿನ ಮೌಲ್ಯಗಳು ಎಂದೇ ಭಾವಿಸಿದರು. (ಅಬ್ಬೂರಿ ಛಾಯಾದೇವಿ : ಇಪ್ಪತ್ತನೇ ಶತಮಾನದ ಲೇಖಕಿಯರ ರಚನೆಗಳು, ಪುಟ-೩೩೧)

ಮುಖ್ಯವಾಗಿ ಇವರ ಕೃತಿಗಳಲ್ಲಿ ಸತಿತ್ವ, ಶೀಲ, ಪಾತಿವ್ರತ್ಯ, ತಾಯ್ತನ ಇವು ಮತ್ತೆ ಮತ್ತೆ ಚರ್ಚೆಗೊಳಗಾಗುತ್ತ ಹೆಣ್ಣನ್ನು ಹೆಣ್ಣೆಂದು ಗುರುತಿಸಲು ಇವು ಬಹಳ ಅಗತ್ಯ ಎಂದೇ ಭಾವಿಸಿದರು. ಇವರು ಸ್ತ್ರೀ ಸುಧಾರಣೆಯ ಕಡೆಗೆ ಕಣ್ಣಿರಿಸಿಕೊಂಡರೂ ಅದು ನಮ್ಮ ಸಂಸ್ಕೃತಿಯ, ಸಾಂಪ್ರದಾಯಿಕ ನಂಬಿಕೆಗಳಿಗೆ, ಭಾವನೆಗಳಿಗೆಪೆಟ್ಟುಕೊಡದಂತಹ ಸುಧಾರಣೆಯ ನೆಲೆಗಳಾಗಿದ್ದವು.

ಹೆಣ್ಣಿನ ಬಾಲ್ಯ ವಿವಾಹ, ಬಾಲ ವೈದವ್ಯ, ಕೇಶಮುಂಡನೆಗಳಿಗೆ ವಿರೋಧ ತೋರಿದರೂ ಮರು ಮದುವೆ ಅವಳ ಈ ಸಮಸ್ಯೆಯ ಪರಿಹಾರಗಳಲ್ಲೊಂದು ಎಂದು ಎಂದೆಂದಿಗೂ ಚಿಂತಿಸುವುದಿಲ್ಲ. ಈ ಪೀಳಿಗೆಯ ಲೇಖಕಿಯರೆಂದರೆ ಸಿ. ಆನಂದಮ್ಮ, ಜೊನ್ನಲಗಡ್ಡ ಲಲಿತಾದೇವಿ, ಇಲ್ಲಿಂದಲ ಸರಸ್ವತಿದೇವಿ ಮೊದಲಾದವರ ಕೃತಿಗಳಲ್ಲೂ ಹೆಚ್ಚು ಕಡಿಮೆ ಈ ಬಗೆಯ ನಂಬಿಕೆಗಳೇ ಪ್ರಸ್ತಾಪಿತವಾಗುತ್ತವೆ.

ಎರಡನೇ ಪೀಳಿಗೆಯ ಲೇಖಕಿಯರು ಮೊದಲ ಪೀಳಿಗೆಯ ಲೇಖಕಿಯರ ಮನೋಭಾವವನ್ನು ಗ್ರಹಿಸಿಕೊಂಡು ತಮ್ಮನ್ನು ದೇವತೆಗಳೆಂದು, ಶಕ್ತಿ ಸ್ವರೂಪಿಣಿಯರೆಂದು ವೈಭವೀಕರಿಸಿ ನಯವಂಚನೆ ಮಾಡುವ ಪುರುಷ ಪ್ರಧಾನ ಸಮಾಜದ ಧೋರಣೆಗಳನ್ನು ಬಯಲು ಮಾಡುವಂತಹ ಪಾತ್ರಗಳನ್ನು ಈ ಪೀಳಿಗೆಯ ಲೇಖಕಿಯರು ತಮ್ಮ ಕಾದಂಬರಿಗಳಲ್ಲಿ ತಂದರೆ ವಿನಹ ಧೈರ್ಯವಾಗಿ ಪ್ರತಿಭಟಿಸುವಂತಹ ಪಾತ್ರಗಳನ್ನು ಈ ಕಾಲಘಟ್ಟದ ಮಹಿಳೆಯರು ತರಲಿಲ್ಲ.

ಪ್ರಧಾನ ಸಂಸ್ಕೃತಿ ಈವರೆಗೆ ಯಾವ ಮೌಲ್ಯಗಳ ಬಗೆಗೆ ನಿರಂತರವಾಗಿ ಮಾತನಾಡುತ್ತ, ಇವೇ ಬದುಕಿನಮೌಲ್ಯಗಳು ಎಂದು ಒಪ್ಪಿತ ಸ್ಥಿತಿಯನ್ನು ನಿರ್ಮಾಣ ಮಾಡಿತೋ ಅದೇ ಮೌಲ್ಯಗಳನ್ನು ನಮ್ಮ ಹೆಣ್ಣುಮಕ್ಕಳು ಬಹಳ ಸಹಜ ಎಂಬಂತೆ ಗ್ರಹಿಸಿಬಿಟ್ಟರು. ಈ ಗ್ರಹಿಕೆಯ ನೆಲೆಯಿಂದ ಆಚೀಚೆ ಕಣ್ಣು ಹೊರಳಿಸಿ ದೃಢವಾಸ್ತವದ ಸತ್ಯಗಳನ್ನು ನೋಡುವ ಪ್ರಯತ್ನವನ್ನು ಮಾಡದಿದ್ದದ್ದು ಈ ಪೀಳಿಗೆ ಲೇಖಕಿಯರ ದುರಂತ. ಈ ಪೀಳಿಗೆಯ ಲೇಖಕಿಯರೆಂದರೆ ಲತ, ಡಿ. ಕಾವೇಶ್ವರಿ, ದ್ವಿವೇದುಲ ವಿಶಾಲಾಕ್ಷಿ, ರಂಗನಾಯಕಮ್ಮ ಇತ್ಯಾದಿ.

ಮೂರನೇ ಪೀಳಿಗೆಯ ಲೇಖಕಿಯರ ಮೇಲೆ ತೀವ್ರವಾದಿ ಸ್ತ್ರೀವಾದಿ ಚಿಂತನೆಗಳ ಪ್ರೇರಣೆ, ಪ್ರಭಾವವನ್ನು ಕಾಣಬಹುದಾಗಿದೆ. ಮಹಿಳೆಯಾದವಳು ವಿವಾಹ, ಮಕ್ಕಳು, ಕುಟುಂಬಕ್ಕೆ ಮಾತ್ರ ಸೀಮಿತವಲ್ಲ. ಅವಳಿಗೂ ಒಂದು ಪ್ರತ್ಯಕವಾದ ವ್ಯಕ್ತಿತ್ವವಿದೆ ಎಂಬುದನ್ನು ತಮ್ಮ ಸಾಹಿತ್ಯ ಕೃತಿಗಳಲ್ಲಿ ಎತ್ತಿತೋರಿಸಿದ್ದಾರೆ.

ಈ ಪೀಳಿಗೆಯ ಸ್ತ್ರೀವಾದಿ ಲೇಖಕಿಯರೆಂದರೆ ಓಲ್ಗಾ, ಜಯಪ್ರಭ, ಕೊಂಡಪೋಡಿ ನಿರ್ಮಲ, ಜಲಂಧರ, ಸಿ. ಸುಜಾತ, ವಾಡ್ರೇವು ವೀರ ಲಕ್ಷ್ಮಿದೇವಿ, ಭಾರ್ಗವಿರಾವು, ಶಿಲಾಲೋಲಿತ, ಕೊಲಕಲೂರಿ ಸ್ವರೂಪರಾಣಿ, ಪಾಟಬಂಡ್ಲ ರಜನಿ, ನಾಯನಿ ಕೃಷ್ಣಕುಮಾರಿ, ಘಂಟಶಾಲ ನಿರ್ಮಲ, ವಿಮಲ, ಷಹಜಾನ್, ವಸಂತ ಕನ್ನಾಬಿರಾನ್ ಇತ್ಯಾದಿ. ಈ ಪೀಳಿಗೆಯ ಲೇಖಕಿಯರ ಮೇಲೆ ಬೇರೆ ಬೇರೆ ಸಾಹಿತ್ಯ ಪಂಥಗಳ ಪ್ರಭಾವವಿದ್ದರೂ ಅವರ ಸಾಹಿತ್ಯದ ವಸ್ತುವಿನ ಮೇಲೆ ಸ್ತ್ರೀವಾದದ ಪ್ರಭಾವವೇ ನಿರ್ಣಯಕವಾದುದ್ದಾಗಿದೆ.

೧. **ಸಾವಿತ್ರಿ** : ೧೯೪೯ರಲ್ಲಿ ಜನಿಸಿದ ಲೇಖಕಿ ಸಾವಿತ್ರಿಯವರು ಬಿ.ಎ. ಪದವಿಯನ್ನು ಮಧ್ಯದಲ್ಲಿಯೆ ಸ್ಥಗಿತಗೊಳಿಸಿ ಪತ್ರಿಕೆಯೊಂದರಲ್ಲಿ ಕೆಲಸಕ್ಕೆ ಸೇರಿಕೊಂಡು ಸಾಹಿತ್ಯ ಕೃಷಿಯಲ್ಲಿ ನಿರತರಾದರು. ಕೆಲವೆ ಕೆಲವು ಸ್ತ್ರೀವಾದಿ ಕವಿತೆಗಳಿಂದ ಹೆಸರು ಪಡೆದು ೧೯೮೨ರಲ್ಲಿ ಅಕಾಲಿಕ ಮರಣ ಹೊಂದಿದರು.

ಇವರ ಪ್ರಸಿದ್ಧವಾದ ಕವಿತೆ ಬಂದಿಪೋಟ್ಲು (ಬಂದಿಕೋಣೆ) 'ಗಂಡ' ಎಂಬ ಪದ ಪುರುಷಾಧಿಪತ್ಯಕ್ಕೆ ಪರ್ಯಾಯ ಪದವಾಗಿ ಹೇಗೆ ಬಳಸಿಕೊಳ್ಳಲಾಗುತ್ತಿದೆ ಎಂಬುದನ್ನು ವ್ಯಂಗ್ಯವಾಗಿ ಹೇಳಿದ ಕವಿತೆ ಇದಾಗಿದೆ. ವಿವಾಹ ವ್ಯವಸ್ಥೆಯಲ್ಲಿ ಸಾಮಾಜಿಕ, ರಾಜಕೀಯ ವ್ಯವಸ್ಥೆಯಲ್ಲಿ

ಪುರುಷಾಧಿಪತ್ಯ ಎಂತಹ ವಿಷಕಾರಿ ಪರಿಣಾಮಗಳಿಗೆ ದಾರಿ ಮಾಡುತ್ತದೆ ಎಂಬುದನ್ನು ಸಂಕ್ಷಿಪ್ತವಾಗಿ ಹೇಳಿದ ಕವಿತೆ "ಪರಾಧೀನತೆ".

**೨. ಓಲ್ಗಾ :** ಸ್ತ್ರೀವಾದಿ ಚಳವಳಿಯಿಂದ ಪ್ರೇರಣೆ ಪಡೆದ ಇವರು ಕಥೆ, ಕವನ, ಕಾದಂಬರಿಗಳನ್ನು ಬರೆದು ತೆಲುಗು ಸಾಹಿತ್ಯದ ಮೇಲೆ ತಮ್ಮದೆ ಆದ ಸ್ಪಷ್ಟ ಮುದ್ರೆಯನ್ನೊತ್ತಿದ್ದಾರೆ. ಓಲ್ಗಾ ಆರಂಭದಿಂದಲೂ ತಮ್ಮ ಸಾಹಿತ್ಯದಲ್ಲಿ ಸ್ತ್ರೀಯರ ಮೇಲಿನ ಸಹಾನುಭೂತಿಯಿಂದ ಕಥೆಗಳನ್ನು ಸ್ಪಷ್ಟವಾಗಿ, ಧೈರ್ಯವಾಗಿ ಬರೆದಿದ್ದಾರೆ. ಇವರು ಬರೆದ ಕಥೆಗಳಲ್ಲಿ ಅತ್ಯಂತ ಮುಖ್ಯವಾದದ್ದು ಓಕ ರಾಜಕೀಯ ಕಥಾ (ಒಂದು ರಾಜಕೀಯ ಕಥೆ) ಉದ್ಯೋಗ ನಿರ್ವಹಣೆಯಲ್ಲಿ ಅಂಗವೈಕಲ್ಯ ಸಂಭವಿಸಿದ ಪುರುಷನಿಗೆ ಆ ಸಂಸ್ಥೆಯ ಯಜಮಾನನಿಂದ ಸ್ಪಷ್ಟವಾದ ಪರಿಹಾರ, ಎಲ್ಲರ ಸಹಾನೂಭೂತಿ, ಹೆಂಡತಿಯ ಸೇವೆ ಎಲ್ಲವೂ ಲಭಿಸುತ್ತದೆ. ಆದರೆ ದುರಾದೃಷ್ಟವಶಾತ್ ಸ್ತ್ರೀಗೆ ಗರ್ಭಪಾತವಾಗಿ ಅವಳು ಮುಂದೆ ಮಕ್ಕಳ ಪಡೆಯುವ ಭಾಗ್ಯವನ್ನು ಕಳೆದುಕೊಂಡರೆ ಅವಳಿಗೆ ಎಲ್ಲಾ ಕಡೆಗಳಿಂದಲೂ ನಿರಾಸೆ–ನಿಷೇದಗಳೇ ಇರುತ್ತವೆ. ಕಡೆಯ ಪಕ್ಷ ಸಹಾನೂಭೂತಿಯಿಂದ ನೋಡುವ ಮನಸ್ಸು ಸಹ ಇರುವುದಿಲ್ಲ. ಈ ಎರಡರ ಮಧ್ಯ ಇರುವ ಮೌಲಿಕ ರಾಜಕೀಯವನ್ನು ಎತ್ತಿ ತೋರಿಸುವ ಕಥೆಯಾಗಿದೆ.

ಓಲ್ಗಾ ಅವರ ಸ್ವೇಚ್ಚ (ಸ್ವೇಚ್ಛೆ) ಕಾದಂಬರಿಯನ್ನು ವಿವಿಧ ಭಾರತೀಯ ಭಾಷೆಗಳಿಗೆ ಅನುವಾದಿಸಲು ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯ ಅನುಮೋದನೆ ನೀಡಿದೆ. ಮಾನಿನಿ, ಸಹಜ, ಆಕಾಶಂಲೋಸಗಂ ಇವು ಇವರ ಪ್ರಸಿದ್ಧ ಕಾದಂಬರಿಗಳಾಗಿದ್ದಾವೆ.

**೩. ಇಂದ್ರಘಂಟಿ ಜಾನಕಿಬಾಲ :** ನಿತ್ಯ ಜೀವನದಲ್ಲಿ ಎದುರಾಗುವ ಸಣ್ಣಪುಟ್ಟ ಸಮಸ್ಯೆಗಳಿಂದ ಹಿಡಿದು ದೊಡ್ಡ ದೊಡ್ಡ ಸಮಸ್ಯೆಗಳವರೆಗಿನ ಚಿತ್ರಣವನ್ನು ತಮ್ಮ ಕಥೆಗಳಲ್ಲಿ ತಂದಿದ್ದಾರೆ. ಸ್ತ್ರೀವಾದಿ ದೃಷ್ಟಿಕೋನದಿಂದ ಬರೆಯುವ ಇವರು ಅನೇಕ ಕಥೆ, ಕವನ, ಕಾದಂಬರಿಗಳನ್ನು ಬರೆದಿದ್ದಾರೆ. ಸ್ತ್ರೀವಾದಿ ದೃಷ್ಟಿಕೋನದ ಹಿನ್ನೆಲೆಯಲ್ಲಿ ರಚಿತವಾದ ಮೊದಲ ಕಥೆ "ಜೀವನ ರಾಜಕೀಯ" ಇದರಲ್ಲಿ ಗಂಡ–ಹೆಂಡತಿಯರ ಮಧ್ಯ ಆರ್ಥಿಕ ಸಂಬಂಧವೇ ಮಹತ್ವ ವಹಿಸುವಾಗ ಸಹಾನೂಭೂತಿಯನ್ನು ಸೂಚಿಸುವ ಸಮಯ ಗಂಡ ಹೆಂಡತಿಯನ್ನು ಅವಮಾನಿಸುವುದು ವಿವಾಹ ಬಂಧನವನ್ನು ಮುರಿಯುವುದನ್ನು ತೋರಿಸುವ ಕಥೆಯಾಗಿದೆ. ಸ್ತ್ರೀ ಸ್ವಾಭಿಮಾನವನ್ನು ಸಾರುವ ಕಥೆ ಇದಾಗಿದೆ.

**೪. ಕೊಂಡಪೋಡಿ ನಿರ್ಮಲ :** ಕೊಂಡಪೋಡಿ ನಿರ್ಮಲ ಅವರು ಪ್ರಥಮವಾಗಿ ಸ್ತ್ರೀವಾದಿ ಚಿಂತನೆಗಳ ಹಿನ್ನೆಲೆಯಲ್ಲಿಯೆ ಕವಿತೆಗಳನ್ನು ಬರೆದವರಾಗಿದ್ದಾರೆ. ಸಮಾಜದಲ್ಲಿ ಸ್ತ್ರೀಯರ ಮೇಲೆ ಯಾವ ಕಡೆಯಿಂದಲಾದರೂ ದೌರ್ಜನ್ಯವೆಸಗಿದರು ಆ ಸಂದರ್ಭಕ್ಕೆ, ಸನ್ನಿವೇಶಕ್ಕೆ ಸ್ಪಂದಿಸುವಂತಹ ಕವಿತೆಗಳನ್ನು ರಚಿಸುವಂತಹ ಕೌಶಲ ಇವರದಾಗಿದೆ. ಪ್ರಸವವೇದನೆಯ ಹಿಂದೆ ಇರುವ ಪುರುಷಾಂಕಾರವನ್ನು ನಿರೂಪಿಸುತ್ತಾ ಅನಿರ್ವಚನಿಯವಾದ ಆ ಪ್ರಸವ ವೇದನೆಯನ್ನು ಕಣ್ಣಿಗೆ

ಕಟ್ಟುವ ಹಾಗೆ ಚಿತ್ರಿಸುವ ಕವಿತೆ "ಲೇಬರ್ ರೂಮ್" ಪ್ರಧಾನವಾಗಿ ಇದು ಸ್ತ್ರೀವಾದಿ ಕವಿತೆಗಳ ಸಂಪುಟವಾಗಿದೆ.

ಹಾಸ್ಯ ಬರಹಗಳನ್ನು ಕೂಡ ಈ ಲೇಖಕಿ ರಚನೆ ಮಾಡಿದ್ದಾರೆ. ಇವರ ಕವಿತೆಗಳ ಸಂಪುಟವೆಂದರೆ "ಸಂಧಿಗ್ಧ ಸಂಧ್ಯ", "ನಡಿಚೆ ಗಾಯಾಲು", "ಬಾದಶಪ್ತ ನದಿ", "ಮಲ್ಟಿ ನ್ಯಾಷನಲ್ ಮದ್ದು" ಇವರು ಇತ್ಯಾದಿ ಕೃತಿಗಳನ್ನು ರಚನೆ ಮಾಡಿದ್ದಾರೆ.

**೫. ಘಂಟಶಾಲ ನಿರ್ಮಲ :** ಕೆಲವೇ ಕೆಲವು ಕವಿತೆಗಳನ್ನು ಬರೆದು ತೆಲುಗು ಸಾಹಿತ್ಯದಲ್ಲಿ ಉನ್ನತವಾದ ಸ್ಥಾನಮಾನವನ್ನು ಪಡೆದುಕೊಂಡಿದ್ದು, ಇವರ ಕವಿತೆಗಳು ಓದುಗರನ್ನು, ವಿಮರ್ಶಕರನ್ನು ಆಕರ್ಷಿಸಿವೆ. ಗೃಹಿಣಿಯಿಂದ ಹಿಡಿದು ವೇಶ್ಯೆಯರವರೆಗೂ ವಿವಿಧ ಸ್ಥರಗಳಿಂದ ಕೂಡಿದ ಮಹಿಳೆಯರ ಸಮಸ್ಯೆಗಳನ್ನು ತನ್ನ ಕವಿತೆಗಳಲ್ಲಿ ಶಕ್ತಿವಂತವಾಗಿ ನಿರೂಪಿಸಿದ್ದಾರೆ.

ಎಷ್ಟು ಹಣ ಬೇಕಾದರೂ ಕೊಟ್ಟು ಸ್ತ್ರೀ ಶರೀರದಿಂದ ಸುಖವನ್ನು ಪಡೆದು ಆ ನಂತರ ಅವಳನ್ನು ಅಸಹ್ಯವಾಗಿ ನೋಡುತ್ತಾ ಅಧಮತನವನ್ನು ತೋರುವ ಪುರುಷರನ್ನು ಕುರಿತು ಇವರ ಕವಿತೆಗಳು ಹೇಳುತ್ತವೆ. ಇಂತಹ ಸ್ತ್ರೀಯರ ಮನೋವೇದನೆಯನ್ನು ಆವಿಷ್ಕರಿಸುವ ಕವಿತೆ "ಏ ಕಾಲ್ ಗರ್ಲ್ಸ್ ಮೋನೋಲಾಗ್" ಹಾಗೂ ನಿರ್ವಚನ ಎನ್ನುವ ಕವನ ಸಂಕಲನವು ಸ್ತ್ರೀವಾದಿ ತಾತ್ವಿಕತೆಗಳ ಹಿನ್ನೆಲೆಯಿಂದ ಮೂಡಿಬಂದದ್ದಾಗಿವೆ.

**೬. ಜಯಪ್ರಭ :** ೧೯೮೮ರಲ್ಲಿ ಬರೆದ ಚೂಪುಲು (ನೋಟಗಳು) ಪೈಟನು ತಗಲೆಯ್ಯಲಿ (ಪೇಟವನ್ನು ಸುಟ್ಟಿಹಾಕ ಬೇಕು) ಎಂಬ ಕವಿತೆಗಳು ತೆಲುಗು ಸಾಹಿತ್ಯ ರಂಗದಲ್ಲಿ ಸಂಚಲನ ಸೃಷ್ಟಿಸಿದ ಕವಿತೆಗಳಾಗಿವೆ. ಸ್ತ್ರೀವಾದಕ್ಕೆ ಎಷ್ಟೋ ಹುರುಪನ್ನು ಈ ಕವಿತೆಗಳು ನೀಡಿವೆ. ಆನಂತರ ಪ್ರಣಯ ಕವಿತೆಗಳು, ಜಾನಪದ ಶೈಲಿಯ ಗೇಯಗಳನ್ನು ಕೂಡ ರಚನೆ ಮಾಡಿದ್ದಾರೆ.

ಜಯಪ್ರಭ ಅವರ ಕವಿತೆಗಳಲ್ಲಿ ಪ್ರಮುಖವಾದದ್ದು ಅಂದುಕೆಗಾವಾಳ್ಳು ಋಷುಲು (ಅದಕ್ಕೆ ತಾನೆ ಅವರು ಋಷಿಗಳು), ಪೂಲ ದಾರುಲ ಪಾರ್ಥಿವಾಕೃತಿ (ಹೂವಿನ ದಂಡೆಯ ಪಾರ್ತಿವಾಕೃತಿ), ಪಾರಿ ಪೋದಾಮಂಟೆ (ಓಡಿ ಹೋಗೋಣವೆಂದರೆ) ಇವು ವೈವಿಧ್ಯದಿಂದ ಕೂಡಿದ ಕವಿತೆಗಳಾಗಿವೆ.

ಮಹಾಭಾರತ ಕಾವ್ಯದಲ್ಲಿ ದ್ರೌಪದಿಯ ಪಾತ್ರ ಚಿತ್ರಣ ನಿರ್ಮಾಣದಲ್ಲಿ ವ್ಯಾಸನು ತೋರಿದ ಪುರುಷಾದಿಪತ್ಯವನ್ನು ವಿಶ್ಲೇಷಣೆ ಮಾಡುತ್ತ ವ್ಯಂಗ್ಯ ಪೂರಿತವಾಗಿ ರಚನೆ ಮಾಡಿದ ಕವಿತೆ ಅಂದುಕೆ ಗಾ ವಾಳ್ಳು ಋಷುಲು (ಅದಕ್ಕೆ ಅಲ್ಲವೆ ಅವರು ಋಷಿಗಳು).

**೭. ಪಿ. ಸತ್ಯವತಿ :** ಸತ್ಯವತಿಯವರು ಸಮಾಜದ ಮೂರು ಸ್ತರದ ಮಹಿಳೆಯರನ್ನು ಆಯ್ಕೆ ಮಾಡಿಕೊಂಡು ಅವರ ಅಸ್ತಿತ್ವವನ್ನು ಪ್ರಯೋಗಾತ್ಮಕವಾಗಿ ಚಿತ್ರಿಸಿರುವ ಕಥೆ ಗೋಧೂಳಿ ವೇಳ (ಗೋಧೂಳಿ ಸಮಯ) ಕಾಲ ಬದಲಾದರೂ ಸ್ತ್ರೀಯರ ಬದುಕು ಮಾತ್ರ ಬದಲಾಗಲಿಲ್ಲ. ಮನೆಯ ಒಳಗಡೆಯೇ ಮುದುಡಿಹೋದ ಅವಳ ಬದುಕು ಬದಲಾಗಲಿಲ್ಲ. ಸ್ತ್ರೀಯರು ಗೋವುಗಳಂತೆ

ಬದುಕನ್ನು ಸಾಗಿಸುವುದು ತಪ್ಪಲ್ಲಿಲ್ಲವೆಂದು ವ್ಯಂಗ್ಯವಾಗಿ ಹೇಳಿದ ಕಥೆ ಇದಾಗಿದೆ. ಇವರ ಪ್ರಮುಖ ಕಾದಂಬರಿಗಳೆಂದರೆ ಮರ್ರಿನೀಡ (ಆಲದ ಮರದ ನೆರಳು), ಗೊಡುಗು ಕಥಾ ಸಂಕಲನಗಳಾಗಿವೆ.

**೮. ಷಾಜಹಾನ್ :** ಮೈನಾರಿಟಿ ಸ್ತ್ರೀವಾದದ ಕವಿತ್ರಿಯಾಗಿ ಹೆಸರು ಪಡೆದಿರುವ ಷಾಜಹಾನ್ ಕಥೆ, ಕವನ, ಕಾದಂಬರಿ ಪ್ರಕಾರಗಳ ಮೂಲಕ ತೆಲುಗು ಸಾಹಿತ್ಯ ಚರಿತ್ರೆಯೊಳಗೆ ತನ್ನದೆ ಆದಂತಹ ಚಾಪನ್ನು ಮೂಡಿಸಿದ್ದಾರೆ.

"ನಖಾಬ್" ಕವನ ಸಂಕಲನದ ಮೂಲಕ ಹಿಂದೂ-ಮುಸ್ಲಿಂ ಅಷ್ಟೇ ಅಲ್ಲದೆ ವಿಮರ್ಶಕರ ಗಮನವನ್ನು ಸೆಳೆದ ಕವಿಯಾಗಿದ್ದಾಳೆ. ತಮ್ಮ ಸಾಹಿತ್ಯದಲ್ಲಿ ಮಾತ್ರವಲ್ಲ ಆಡುವ ಮಾತಿನಲ್ಲಿ ದಿಟ್ಟತನ ತೋರುವ ಈ ಲೇಖಕಿಯು ಸಂಪೂರ್ಣವಾಗಿ ಮಹಿಳೆಯರ ಪರನಿಂತು ಮಾತನಾಡುತ್ತಾರೆ, ಬರೆಯುತ್ತಾರೆ. ಅದರಲ್ಲಿಯು ಮುಸ್ಲಿಂ ಮಹಿಳೆಯರ ಪರವಾದ ಇವರ ಧ್ವನಿ ಎತ್ತರದ್ದಾಗಿದೆ.

ಹಲವು ವಿರೋಧಗಳ, ಅವಮಾನಗಳ ನಡುವೆಯೂ ಕೂಗ್ಗದ ವ್ಯಕ್ತಿತ್ವ ಇವರದು. ಇಲ್ಲವೆಂದಿದ್ದರೆ ಇವರ ಎರಡನೆಯ ಕವನ ಸಂಕಲನ "ದರ್ದಿ" (ನೊಂದವಳು) ಹೊರಬರುತ್ತಿರಲಿಲ್ಲ.

ಮುಸ್ಲಿಂ ಮಹಿಳೆಯರು ತೊರೆಯಬೇಕಾಗಿರುವ ಪರದಾ ಪದ್ಧತಿಯ ಬಗ್ಗೆ, ಮುಸ್ಲಿಂ ವಿವಾಹ ವ್ಯವಸ್ಥೆಯಲ್ಲಿ ಸ್ತ್ರೀಯರು ಎದುರಿಸಬೇಕಾದ ಅನ್ಯಾಯದ ಬಗ್ಗೆ ಬರೆದಿರುವ ಅವರ ಕವಿತೆ "ಜಲ್ ಜಲ್" ಎನ್ನುವ ಸಂಕಲನದಲ್ಲಿಯೇ ಬಂದಿದೆ. ಮುಸ್ಲಿಂ ವಿವಾಹ ವ್ಯವಸ್ಥೆಯಲ್ಲಿನ ಅಧಮ ಸ್ಥಿತಿಯನ್ನು ಮಾನಸಿಕ ವ್ಯಥೆಗೆ ಹೊಸದಾಗಿ ತೀವ್ರವಾಗಿ ವ್ಯಕ್ತಪಡಿಸುತ್ತ ಬರೆದಿರುವ ಕವಿತೆ "ಖಬಡ್ದಾರ್" ಇತ್ಯಾದಿ.

**೯. ರಾವುಲ ಪಲ್ಲಿ ಸುನಿತ :** ಮಾನವತಾವಾದ ಮತ್ತು ಸ್ತ್ರೀವಾದ ಎರಡೂ ಪ್ರತಿಬಿಂಬಿಸುವಂತಹ ಪರಿಣಿತ ಪೂರ್ಣವಾದ ಕವಿತೆಗಳನ್ನು ರಚನೆ ಮಾಡಿದ್ದಾರೆ. ವೈದ್ಯರಂಗದಲ್ಲಿನ ಒಳಿತು-ಕೆಡುಕುಗಳನ್ನು ಬಹಿರಂಗ ಮಾಡುತ್ತ 'ವೃತ್ತಿ' ಎನ್ನುವ ಕಾದಂಬರಿಯನ್ನು ಬರೆದಿದ್ದಾರೆ.

ತಾಯಿಗೋಳು (ತಲ್ಲಿಗೋಡು) ಎನ್ನುವ ಕವಿತೆಯಲ್ಲಿ ಗಂಡನ ನಿರ್ಲಕ್ಷ್ಯ, ಅತ್ತೆಯ ಹಿಂಸೆಗಳಿಗೆ ಗುರಿಯಾದ ಸ್ತ್ರೀ ತನ್ನ ಎಲ್ಲಾ ಕೋಪ-ತಾಪಗಳನ್ನು ಮಗನ ಮೇಲೆ ಹಾಕಿದಾಗ ಮಗನು ಕೂಡ ತಂದೆಗೆ ಹತ್ತಿರವಾಗಿ ತಾಯಿಯನ್ನು ರಾಕ್ಷಸಿ ಅಂದಾಗ ಅವಳು ಅನುಭವಿಸೊ ನೋವು, ಸಂಕಟ, ವೇದನೆಯನ್ನು ತೀವ್ರವಾಗಿ ಈ ಕವಿತೆಯಲ್ಲಿ ವ್ಯಕ್ತಪಡಿಸಿದ್ದಾಳೆ.

**೧೦. ಚಲ್ಲಪಲ್ಲಿ ಸ್ವರೂಪರಾಣಿ :** ದಲಿತ ಸ್ತ್ರೀವಾದದ ಕವಯತ್ರಿಯಾಗಿ ಪ್ರಸಿದ್ಧಿಯನ್ನು ಪಡೆದಿದ್ದು "ಪದುನೆಕ್ಕಿನ ಪಾಟ" ಎನ್ನುವ ದಲಿತ ಕವಿತಾ ಸಂಪುಟದಲ್ಲಿ ಇವರ ಕವಿತೆಗಳು ಕೆಲವು ಸೇರಿವೆ. ಮಂಕೇಸ ಪೂವ್ವ" ಎನ್ನುವ ಕವಿತೆಯಲ್ಲಿ ದಲಿತ ಮಹಿಳೆಯರು ಮನೆಯ ಹೊರಗೆ ಅನುಭವಿಸುವ ಪುರುಷಾಧಿಪತ್ಯದ ಹಿಂಸೆಯನ್ನು ಜಾತಿ ವ್ಯವಸ್ಥೆ ಮಾಡುವ ಅವಮಾನಗಳನ್ನು ಸಹಿಸಿಕೊಳ್ಳದೆ

ಆಕ್ರೋಶವಾಗಿ ಚಿತ್ರಿಸಿದ್ದಾರೆ. ನೀಲಿ ಮೇಘಾಲು ಕವನ ಸಂಕಲನದಲ್ಲಿ ಕೆಲವೊಂದು ಕವನಗಳು ಸೇರಿಕೊಂಡಿವೆ.

**೧೧. ಅಬ್ಬೂರಿ ಛಾಯಾದೇವಿ :**

ಅಬ್ಬೂರಿ ಛಾಯಾದೇವಿಯವರು ೧೯೩೩ ರಲ್ಲಿ ರಾಜಮಂಡ್ರಿಯಲ್ಲಿ ಜನಿಸಿದ್ದು ೧೯೫೨ ರಲ್ಲಿ ಪ್ರಕಟವಾದ 'ಅನುಬಂಧಂ' ಎನ್ನುವ ಕವಿತೆಯ ಮೂಲಕ ಸಾಹಿತ್ಯ ಲೋಕಕ್ಕೆ ಪಾದಾರ್ಪಣೆ ಮಾಡಿ ಇಂದಿನವರೆಗೂ ಅನೇಕ ಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ.

ಸ್ತ್ರೀಯರು ನಿತ್ಯ ಜೀವನದಲ್ಲಿ ಎದುರಿಸುವ ಸಮಸ್ಯೆ ಸಂಘರ್ಷಗಳನ್ನು ಸಂಕ್ಲಿಪ್ತ ಅನುಭಾವಗಳನ್ನು ಸುನಿಶ್ಚಿತವಾದ ದೇಸಿ ಶೈಲಿಯಲ್ಲಿ ತನ್ನ ಕಥೆಗಳಲ್ಲಿ ಚಿತ್ರಿಸಿದ್ದಾರೆ. ಇವರ ಕಥೆಗಳು ಸಾಮಾಜಿಕವಾಗಿ, ಕೌಟುಂಬಿಕವಾಗಿ ಸ್ತ್ರೀ-ಪುರುಷರ ಮಧ್ಯ ಇರುವ ಅಸಮಾನತೆಯ ಸಂಬಂಧಗಳನ್ನು ವ್ಯಂಗ್ಯಾತ್ಮಕವಾಗಿ ಆವಿಷ್ಕರಿಸುತ್ತ ವೈಚಾರಿಕವಾಗಿ ಆಲೋಚಿಸುವಂತೆ ಮಾಡುತ್ತಾವೆ.

ಮಹಿಳೆಯರ ಬದುಕನ್ನು ಸ್ತ್ರೀವಾದಿ ದೃಷ್ಟಿಕೋನದಲ್ಲಿ ಪರಿಶೀಲಿಸುವ ಛಾಯಾದೇವಿಯವರ ಕಥೆಗಳು ೧೯೯೧ ರಲ್ಲಿ "ಅಬ್ಬೂರಿ ಛಾಯಾದೇವಿ ಕಥಲು" ಎನ್ನುವ ಶೀರ್ಷಿಕೆಯಡಿಯಲ್ಲಿ ಪ್ರಕಟವಾಗಿವೆ. ಇವರ ಇತರೆ ಕೃತಿಗಳೆಂದರೆ ಮೃತ್ಯುಂಜಯ-೧೯೯೩ ವ್ಯಾಸ ಚಿತ್ರಾಲು-೧೯೯೫, ಬೊಮ್ಮಲು ಚೆಯಡಂ-೧೯೯೬, ತನಮಾರ್ಗಂ-೨೦೦೨. ಇನ್ನು ಅನೇಕ ಕೃತಿಗಳನ್ನು ರಚಿಸಿ ತೆಲುಗು ಸಾಹಿತ್ಯ ವಲಯದಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನಮಾನವನ್ನು ಹೊಂದಿದ್ದಾರೆ.

೨೦೦೫ ರಲ್ಲಿ ತನಮಾರ್ಗಂ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ೨೦೦೦ ರಲ್ಲಿ ಕಳಾಸಂಗರ್ ಸಾಹಿತಿ ಪುರಸ್ಕಾರ, ಅಭಿನಂದನ ದುರ್ಗಾ ಬಾಯಿ ದೇಶ್‌ಮುಖ್ ಅವಾರ್ಡ್, ಇನ್ನು ಮುಂತಾದ ಪ್ರಶಸ್ತಿಗಳನ್ನು ಪಡೆದಿದ್ದಾರೆ.

**೧೨. ಕೊಲಕಲೂರಿ ಸ್ವರೂಪರಾಣಿ**

ದಲಿತ ಸ್ತ್ರೀವಾದಿ ಎಂದೇ ಪ್ರಸಿದ್ಧಿಯಾಗಿರುವ ಕೊಲಕಲೂರಿ ಸ್ವರೂಪರಾಣಿ ಇತ್ತೀಚಿನ ದಿನಗಳಲ್ಲಿ ಕಥೆ, ಕವನ ಕಾದಂಬರಿಗಳನ್ನು ಬರೆಯುತ್ತ ತೆಲುಗು ಸಾಹಿತ್ಯಲೋಕಕ್ಕೆ ಪಾದಾರ್ಪಣೆ ಮಾಡಿದ್ದಾರೆ.

ಶಿಲ್ಪದಲ್ಲಿ ಸಂಪ್ರದಾಯತೆಯನ್ನು ಕವಿತಾ ವಸ್ತುಗಳಲ್ಲಿ ಆಧುನಿಕತೆಯನ್ನು ಪ್ರದರ್ಶಿಸುತ್ತ ಕವಿತೆಗಳನ್ನು ರಚಿಸಿದ್ದಾರೆ. ಪುರಾಣ ಕಥೆಗಳ ಆಧಾರದ ಮೇಲೆ ಕವಿತೆಗಳನ್ನು ಬರೆದ ಸ್ಫೂರ್ತಿಯಿಂದಲೆ, ಆಧುನಿಕ ಭಾವನೆಗಳಿಂದ "ಸ್ತ್ರೀಪರ್ವ" ಎಂಬ ಕವಿತೆಯನ್ನು ಬರೆದಿದ್ದಾರೆ.

ಪ್ರಾಚೀನ ಕಾಲದಿಂದಲೂ ಸ್ತ್ರೀಯರನ್ನು ಪುರುಷ ಪ್ರಧಾನ ಸಮಾಜ ಹೇಗೆ ನಡೆಸಿಕೊಂಡಿತು ಎಂಬುದನ್ನು 'ಚಂದ್ರಗ್ರಹಣಮು' ಎಂಬ ಕವಿತೆಯಲ್ಲಿ ಚಿತ್ರಿಸಿದ್ದಾರೆ. ಹೆಂಡತಿಯನ್ನು ದಾಸಿಯಂತೆ ಕಾಣದೆ ಸಮಾನ ಸ್ನೇಹ, ಪ್ರೀತಿಯಿಂದ ಕಾಣಬೇಕೆಂದು 'ಸ್ತ್ರೀ ಪರ್ವದಲ್ಲಿ' ಪ್ರಸ್ತಾಪಿಸಿದ್ದಾರೆ.

ಇವರ ಇತರೆ ಕವನ ಸಂಕಲನಗಳು "ಗಂಗಾವತರಣ" 'ಶಿವತಾಂಡವಮು' ಪ್ರಭೋಧ ಇನ್ನು ಅನೇಕ ಕವನ ಸಂಕಲನಗಳನ್ನು ಹೊರತಂದು ತೆಲುಗು ಸಾಹಿತ್ಯ ಲೋಕದಲ್ಲಿ ತನ್ನದೆ ಛಾಪವನ್ನು ಮೂಡಿಸಿದ್ದಾರೆ.

೧೩. ಪಾಟಬಂಡ್ಲರಜನಿ

ತೆಲುಗು ಪ್ರಸಿದ್ದ ಸ್ತ್ರೀವಾದಿ ಲೇಖಕಿಯಾದ ಪಾಟಬಂಡ್ಲರಜನಿ ಅವರು ತಿರುಪತಿಯಲ್ಲಿ ಶಿಕ್ಷಕಿಯಾಗಿ ಕೆಲಸ ನಿರ್ವಹಿಸುತ್ತಿದ್ದಾರೆ. ಎರ್ರಿಜಾಬಿಳ್ಳ ಎರ್ರಿನಾ ಎನ್ನುವ ಕವನ ಸಂಕಲನವನ್ನು, ಮಾಮಗಾರಿ ಕಥಲು ಎನ್ನುವ ಕಥಾ ಸಂಕಲನವನ್ನು ಪ್ರಕಟಿಸಿದ್ದಾರೆ.

ಕಷ್ಟದ ಕೆಲಸಗಳನ್ನು ಕಷ್ಟದ ಬದುಕನ್ನು ನಿರ್ವಹಿಸುತ್ತಿರುವುದು ಮಹಿಳೆಯರೇ ಹೊರತು ಪುರುಷರಲ್ಲ ಎಂಬುದು ಇವರ ವಾದವಾಗಿದೆ. ಹುಡುಗಿಯರು, ಸ್ತ್ರೀಯರು, ಮುದುಕಿಯರು, ಪಡುವಂತಹ ಕಷ್ಟಗಳನ್ನು ವ್ಯಂಗ್ಯವಾಗಿ, ಆಕ್ರೋಶವಾಗಿ ತನ್ನ ಕವಿತೆಗಳಲ್ಲಿ ಚಿತ್ರಿಸಿದ್ದಾರೆ. ಸಾವಿನ ಅಂಚಿನಲ್ಲಿರುವ ತಾಯಿ ತನ್ನ ಮೇಲೆ ಮಕ್ಕಳು ಮೊಮ್ಮಕ್ಕಳು ತೋರುವ ನಿರ್ಲಕ್ಷವನ್ನು ತನ್ನದೇ ಆದ ಶೈಲಿಯಲ್ಲಿ 'ಅಮ್ಮ' ಎಂಬ ಕವಿತೆಯಲ್ಲಿ ವ್ಯಕ್ತಪಡಿಸಿದ್ದಾರೆ.

ಇವರಲ್ಲದೆ ಇನ್ನು ಅನೇಕ ಸ್ತ್ರೀವಾದಿ ಲೇಖಕಿಯರಿದ್ದಾರೆ. ಉದಾ: ಮಂದರಪು ಹೈಮಾವತಿ, ಡಿ. ಕಾಮೇಶ್ವರಿ, ವಿ. ಯಶೋಧ ರೆಡ್ಡಿ, ಮಹಜಬಿನ್ ಮುಂತಾದವರು.

ಈ ಮೇಲೆ ಪ್ರಸ್ತಾಪಿಸಲಾದ ಲೇಖಕಿಯರು ಸ್ತ್ರೀವಾದಿ ಸಂವೇದನೆಯಿಂದ ಸಾಹಿತ್ಯ ರಚನೆ ಮಾಡಿದವರಾಗಿದ್ದರೂ ಕೂಡ ಕನ್ನಡದ ಸ್ತ್ರೀವಾದಿ ಲೇಖಕಿಯರಂತೆ ಇವರು ಸಹ ಸ್ತ್ರೀವಾದವನ್ನು ಒಬ್ಬರಿಗಿಂತ ಒಬ್ಬರು ಭಿನ್ನವಾದ ನೆಲೆಯಲ್ಲಿ ಪರಿಕಲ್ಪಸಿಕೊಂಡವರಾಗಿದ್ದಾರೆ. ತಮ್ಮ ಸಾಹಿತ್ಯದ ವಸ್ತುವನ್ನು ಕೂಡ ವಿಭಿನ್ನ ಜಾತಿ, ವರ್ಗ, ಧರ್ಮದ ಹಿನ್ನೆಲೆಯಲ್ಲಿಯೆ ಆಯ್ಕೆ ಮಾಡಿಕೊಂಡಿರುವುದನ್ನು ಈ ಮೇಲೆ ಚರ್ಚಿಸಲಾಗಿದೆ.

ಆಯಾ ಸಮುದಾಯ ಸಂಸ್ಕೃತಿಯಲ್ಲಿನ ಮಹಿಳೆಯರ ಶೋಷಣೆಗೆ ಕಾರಣವಾದಂತಹ ಅಂಶಗಳನ್ನು ವಿರೋಧಿಸುವ, ಪ್ರತಿಭಟಿಸುವಂತಹ ಕೆಲಸವನ್ನು ತಮ್ಮ ಕಥೆ, ಕವನ, ಕಾದಂಬರಿಗಳ ಮೂಲಕ ಮಾಡಿದ್ದಾರೆ. ಉದಾ: ಷಾಜಹಾನ್ ಮುಸ್ಲಿಂ ಸಂವೇದನೆಯ ಹಿನ್ನೆಲೆಯಲ್ಲಿ, ಚಲ್ಲಪಲ್ಲಿ ಸ್ವರೂಪರಾಣಿ ದಲಿತ ಮಹಿಳೆಯರ ಸಂವೇದನೆಯ ಹಿನ್ನೆಲೆಯಲ್ಲಿ, ಓಲ್ಗಾರವರು ಅಲ್ಪಸಂಖ್ಯಾತ ಮಹಿಳೆಯರ ಸಂವೇದನೆಯ ಹಿನ್ನೆಲೆಯಲ್ಲಿ ಸಾಹಿತ್ಯ ರಚನೆ ಮಾಡಿರುವುದನ್ನು ಕಾಣುವುದು ಒಂದಾದರೆ ವೃತ್ತಿ ಆಧಾರಿತ ಮಹಿಳೆಯರ ಕ್ಷೇತ್ರದಲ್ಲಿನ ಹಿಂಸೆ, ಶೋಷಣೆಗಳನ್ನು, ಅವರ ಸಂವೇದನೆಯ ಹಿನ್ನೆಲೆಯಲ್ಲಿ ಸಾಹಿತ್ಯ ರಚನೆ ಮಾಡಿದವರು ಸಹ ಇದ್ದಾರೆ.

ಒಟ್ಟಾರೆಯಾಗಿ ಕನ್ನಡ-ತೆಲುಗಿನ ಸ್ತ್ರೀವಾದಿ ಲೇಖಕಿಯರು ಭಿನ್ನ. ಜಾತಿ, ವರ್ಗ, ಧರ್ಮದ ಒನ್ನೆಲೆಯಿಂದ ಬಂದವರಾಗಿದ್ದರೂ ಇವರೆಲ್ಲರ ಪ್ರಧಾನ ಆಶಯ ದಮನಕ್ಕೊಳಪಟ್ಟ ಮಹಿಳೆಯರ

ವಿಮೋಚನೆ ಹಾಗೂ ಸ್ತ್ರೀ-ಪುರುಷ ಸಮಾನತೆಯನ್ನು ತರುವುದೇ ಆಗಿದೆ ಎಂಬ ಅಂಶವನ್ನು ಗಮನದಲ್ಲಿಟ್ಟುಕೊಂಡು ಮುಂದಿನ ಅಧ್ಯಯನಗಳಲ್ಲಿ ಅವುಗಳನ್ನು ವಿವರವಾಗಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಸ್ತ್ರೀವಾದಿ ಸಾಹಿತ್ಯದ ಮುಖ್ಯ ನಿರ್ವಚನಗಳಲ್ಲಿ ಒಂದಾದ ಪಿತೃಪ್ರಧಾನತೆಯ ಸ್ವರೂಪವನ್ನು ಕುರಿತಂತೆ ಒಂದು ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಲಾಗುವುದು. ಹಾಗೆಯೆ ಸ್ತ್ರೀವಾದಿ ಸಾಹಿತ್ಯ ಸಮಕಾಲೀನ ಸ್ಥಿತಿಗತಿಗಳನ್ನು ಕೇಂದ್ರೀಕರಿಸಿದ ನಿರ್ದಿಷ್ಟ ರಾಜಕೀಯ ಒಲವುಗಳನ್ನು ಉಳ್ಳ ಸಾಹಿತ್ಯವಾದರೂ ಅದರ ಒಂದು ಭಾಗವಾಗಿ ಪರಂಪರೆಯನ್ನು ಮುರಿದು ಕಟ್ಟುವ ಮೂಲಕವೂ ಅದನ್ನು ಮಾಡಲೆತ್ನಿಸಿದೆ. ಅದನ್ನು ಸ್ತ್ರೀವಾದಿ ಸಾಹಿತ್ಯದಲ್ಲಿ ಪುರಾಣ ಭಂಜಕತೆ ಎಂಬ ಇನ್ನೊಂದು ಅಧ್ಯಾಯದಲ್ಲಿ ಪರಿಶೀಲಿಸಲಾಗುವುದು.

ಸ್ತ್ರೀವಾದವು ಲಿಂಗ ಸಮಾನತೆಯನ್ನು ಕೇಂದ್ರವಾಗುಳ್ಳ ಆಲೋಚನ ಕ್ರಮವಾದರೂ ಅದು ಸಮಾಜದ ಇನ್ನಿತರ ಅಸಮಾನತೆ, ವೈರುದ್ಯಗಳ ಜೊತೆಗೆ ಅನುಸಂಧಾನದ ಕೆಲಸವನ್ನು ಮಾಡುವ ಮೂಲಕ ತನ್ನನ್ನು ಇನ್ನಷ್ಟು ಖಚಿತಪಡಿಸಿಕೊಳ್ಳಲು ಯತ್ನಿಸಿದೆ. ಈ ಅಂಶವನ್ನು ಗಮನದಲ್ಲಿಟ್ಟುಕೊಂಡು ಸ್ತ್ರೀವಾದಿ ಸಾಹಿತ್ಯದಲ್ಲಿ ಇನ್ನಿತರ ಸಾಮಾಜಿಕ ಪ್ರಶ್ನೆಗಳು ಎಂಬ ವಿಶ್ಲೇಷಣೆಯನ್ನು ಮುಂದೆ ಮಾಡಲಾಗಿದೆ.

# ಅಧ್ಯಾಯ : ನಾಲ್ಕು

## ಕನ್ನಡ–ತೆಲುಗು ಸ್ತ್ರೀವಾದಿ ಕಾವ್ಯದಲ್ಲಿ ಪಿತೃಪ್ರಧಾನತೆಯ ಸ್ವರೂಪ

ಪಿತೃಪ್ರಧಾನತೆಯು ವಿಶ್ವವ್ಯಾಪ್ತಿಯಾದ ಒಂದು ಲಕ್ಷಣ. ವಿಶ್ವದ ಬಹುಪಾಲು ಸಮಾಜಗಳಲ್ಲಿ ಕುಟುಂಬವೂ ಸೇರಿದಂತೆ ಎಲ್ಲ ಸಾಮಾಜಿಕ ಸಂಸ್ಥೆಗಳೂ ಪುರುಷ ಕೇಂದ್ರಿತವಾಗಿರುವುದನ್ನೇ ಹೆಚ್ಚಾಗಿ ಕಾಣಬಹುದು. ಪುರುಷನ ಪರಮಾಧಿಕಾರವನ್ನು ಸ್ತ್ರೀಯ ಪರಾಧೀನತೆಯನ್ನು ಎತ್ತಿ ಹಿಡಿಯುವಂತೆ ಸಾಮಾಜಿಕ ವ್ಯವಸ್ಥೆಯೇ ಪಿತೃ ಪ್ರಧಾನ ವ್ಯವಸ್ಥೆ. ಈ ಪಿತೃಪ್ರಧಾನ ವ್ಯವಸ್ಥೆ ಸಮಾಜದ ಎಳೆ–ಎಳೆಗಳಲ್ಲಿ ಹಾಸುಹೊಕ್ಕಾಗಿದ್ದು, ಸಾಮಾಜಿಕ ಮೌಲ್ಯಗಳಲ್ಲಿ, ಆಚರಣೆಗಳಲ್ಲಿ ಪ್ರತ್ಯೇಕ್ಷವಾಗಿ ಅಥವಾ ಪರೋಕ್ಷವಾಗಿ ಕಾಣಿಸಿಕೊಳ್ಳುತ್ತದೆ.

ಸ್ತ್ರೀವಾದದ ಸಂದರ್ಭದಲ್ಲಿ ಪಿತೃಪ್ರಧಾನತೆ ಮತ್ತು ಪುರುಷ ಪ್ರಧಾನತೆ ಎನ್ನುವ ಎರಡು ಪರಿಕಲ್ಪನೆಗಳನ್ನು ನಾವು ಬಳಸಲಾಗುತ್ತದೆ. ಅಧ್ಯಯನದ ದೃಷ್ಟಿಯಿಂದ ಇವೆರಡರ ನಡುವೆ ಒಂದು ವ್ಯತ್ಯಾಸವನ್ನು ಗುರುತಿಸಬಹುದು. ಪಿತೃ ಪ್ರಧಾನತೆ ಎನ್ನುವುದು ಮೂಲತಃ ಕುಟುಂಬ ಮೂಲದಿಂದ ತಂದೆಯ ಒಡೆತನವನ್ನು ಸೂಚಿಸುವಂತಹ ಒಂದು ಪಾರಿಭಾಷಿಕ ಪದ. ಪುರುಷ ಪ್ರಧಾನತೆ ಎನ್ನುವುದು ಕುಟುಂಬವನ್ನು ಒಳಗೊಂಡಂತೆ ಇಡೀ ಸಾಮಾಜಿಕ ವ್ಯವಸ್ಥೆ ಒಳಗೆ ಪುರುಷನ ಪ್ರಾಧಾನ್ಯತೆಯನ್ನು ಸೂಚಿಸುವಂತಹ ಪದವಾಗಿದೆ. ಇತ್ತೀಚಿನ ದಿನಗಳಲ್ಲಿ ಕನ್ನಡ–ತೆಲುಗಿನ ಸಂದರ್ಭದಲ್ಲಿ ಇವೆರಡು ಪದಗಳನ್ನು ಪರ್ಯಾಯ ಪದಗಳು ಎನ್ನುವ ರೀತಿಯಲ್ಲಿ ಬಳಸುತ್ತ ಬರಲಾಗುತ್ತಿದೆ.

ಪಿತೃಪ್ರಧಾನತೆಯನ್ನು 'ಪೆಟ್ರಿಯಾರ್ಕಿ' ಎಂದು ಕರೆಯಲಾಗುತ್ತದೆ. ಪೆಟ್ರಿಯಾರ್ಕಿ ಎಂದರೆ ಶಬ್ದಶಃ ಅರ್ಥ 'ಪೆಟ್ರಿಯಾರ್ಕ್' ಅಥವಾ ತಂದೆಯ ಆಡಳಿತ (ಗ್ರೀಕ್ ಮೂಲ; ಪೆಟ್ರಿಯಾ ಎಂದರೆ ತಂದೆ ಮತ್ತು ಆರ್ಕಿ ಎಂದರೆ ಆಡಳಿತ) ಮೂಲದಲ್ಲಿ ಪುರುಷ ಪ್ರಧಾನ ಕುಟುಂಬದ ನಿರ್ದಿಷ್ಟ ರೂಪವನ್ನು ಸೂಚಿಸಲು ಬಳಸಲ್ಪಡುವ ಈ ಪದ ಹೆಣ್ಣು, ಕಿರಿಯ ವಯಸ್ಸಿನ ಗಂಡಸರು, ಮಕ್ಕಳು, ಗುಲಾಮರು, ಮನೆಯ ಕೆಲಸದವರು ಪ್ರಬಲವಾದ ಗಂಡಿನ ಆಡಳಿತದಲ್ಲಿ ದೊಡ್ಡ ಮನೆಯಲ್ಲಿ ಇರುವುದನ್ನು ಸೂಚಿಸುತ್ತದೆ. (ಸುಧಾ ಸೀತಾರಾಮನ್, ಮಹಿಳಾ ಅಧ್ಯಯನ (ಸಮಾಜ ಶಾಸ್ತ್ರೀಯ ದೃಷ್ಟಿಕೋನ) ಸ್ತ್ರೀಲೇಖನ, ಪು–೩೦) ಸಮಾಜವೊಂದರ ಗಂಡು ಸದಸ್ಯ ಅಧಿಕಾರದ ಸ್ಥಾನದಲ್ಲಿ ಮೇಲುಗೈ ಸಾಧಿಸುವುದನ್ನು ಸೂಚಿಸುವ ಸಮಾಜಶಾಸ್ತ್ರೀಯ ಸಂದರ್ಭವನ್ನು ವ್ಯಾಖ್ಯಾನಿಸುವ ಪರಿಭಾಷೆಯಾಗಿ ಮಾನವಶಾಸ್ತ್ರದಲ್ಲಿ 'ಪೆಟ್ರಿಯಾರ್ಕಿ'ಯನ್ನು ಬಳಸಲಾಗಿದೆ. ಸಾಮಾನ್ಯವಾಗಿ ಗಂಡಿನ ಪ್ರಾಬಲ್ಯವನ್ನು, ಗಂಡು ಹೆಣ್ಣನ್ನು ಆಳುವ ಅಧಿಕಾರ ಸಂಬಂಧವನ್ನು

ಒಳಗೊಂಡಂತೆ ಅನೇಕ ವಿಧಿಗಳಲ್ಲಿಯೂ ಹೆಣ್ಣನ್ನು ಅಧೀನಪಡಿಸುವ ವ್ಯವಸ್ಥೆಯನ್ನು ಸೂಚಿಸಲು ಇದನ್ನು ಬಳಸಲಾಗುತ್ತದೆ.

ಗಂಡಿನ ಪ್ರಾಬಲ್ಯ ಆಡಳಿತವನ್ನು ಸೂಚಿಸುವ ಎಲ್ಲ ರೀತಿಯ ವಿಚಾರ ಪರಂಪರೆಯನ್ನು ಅಭಿವ್ಯಕ್ತಿಸಲು ಪಿತೃ ಪ್ರಧಾನತೆಯೇ ಸೂಕ್ತ ಪದ. ಮಹಿಳೆಯನ್ನು ದಮನ ಮಾಡುವ ಸಾಮಾಜಿಕ ರಚನೆಗಳು ಮತ್ತು ವ್ಯವಸ್ಥೆಗಳನ್ನು ವರ್ಣಿಸಲು ಸ್ತ್ರೀವಾದದಲ್ಲಿ ಈ ಪರಿಭಾಷೆಯನ್ನು ಬಳಸಲಾಗಿದೆ. ಅಧಿಕಾರ ಸ್ಥಾನವು ಹೆಚ್ಚು ಬಲಿಷ್ಠವಾದಷ್ಟು, ಗಂಡು ಅದನ್ನು ಹಿಡಿಯುವ ಸಾಧ್ಯತೆಯು ಹೆಚ್ಚು. ತಂದೆಯ ಆಡಳಿತವೇ ಪಿತೃ ಪ್ರಧಾನತೆಯ ಮೂಲ ಅರ್ಥ. ತಾಯಿಗಿಂತಲೂ ತಂದೆಯೇ ಪ್ರಧಾನವಾದ ಕೌಟುಂಬಿಕ ರಚನೆಯನ್ನು ವಿವರಿಸಲು ಇದನ್ನು ಸಾಮಾಜಿಕ ಮಾನವಶಾಸ್ತ್ರಜ್ಞರು ಬಳಸಿದ್ದಾರೆ. ಸಂಬಂಧದ ಗುಂಪುಗಳ ನಡುವೆ ಹೆಣ್ಣನ್ನು ಅದಲು ಬದಲು ಮಾಡುವ ಗಂಡಿನ ಅಧಿಕಾರವನ್ನು ಐತಿಹಾಸಿಕವಾಗಿ ಇದು ಸೂಚಿಸುತ್ತದೆ. ಸ್ತ್ರೀವಾದಿ ಸಾಹಿತ್ಯದಲ್ಲಿ ಸಾಮಾನ್ಯವಾಗಿ ಪುರುಷ ಪ್ರಧಾನತೆಯನ್ನು ಸೂಚಿಸುವ ಪದವಾಗಿ ಬಳಸಲ್ಪಡುತ್ತಿದೆ.

ಸ್ತ್ರೀವಾದದ ಎರಡನೆಯ ಅಲೆಯ ನಂತರ ಪಿತೃಪ್ರಧಾನತೆ ಸಾಂಕೇತಿಕ ಪುರುಷತತ್ವಕ್ಕೆ ಅದು ಪಿತೃ ಅಧಿಕಾರವಾಗಿ ವ್ಯಕ್ತವಾಗಿರುವುದಕ್ಕೆ ಸಂಕೇತವಾಯಿತು. ೧೯೬೦-೭೦ರ ಸ್ತ್ರೀವಾದದ ಚರ್ಚೆಗಳಲ್ಲಿ ಈ ಪರಿಕಲ್ಪನೆ ಬಳಕೆಗೆ ಬಂತು. ಅಲ್ಲಿಯವರೆಗೂ ಸಾಮಾನ್ಯವಾಗಿ ಬಳಸಲ್ಪಡುತ್ತಿದ್ದ 'ಲಿಂಗವಾದ' (Sexism) ಎಂಬ ಪದ ಮತ್ತು ಪರಿಕಲ್ಪನೆಗಳನ್ನು ಇದು ಸ್ಥಾನಾಂತರಿಸಿತು. ಆ ಮೂಲಕ ಸ್ತ್ರೀ-ಪುರುಷರ ನಡುವಿನ ದಮನಕಾರಿ ಅಧಿಕಾರ ಸಂಬಂಧಗಳಲ್ಲಿ 'ಲಿಂಗವಾದ'ವು ಅಭಿವ್ಯಕ್ತಿಸುತ್ತಿದ್ದ ವ್ಯಕ್ತಿಗತ ಪೂರ್ವಗ್ರಹದ ಕಾರಣಗಳಿಗೆ ಬದಲಾಗಿ, ಸಾಂಸ್ಥಿಕ ರಾಜಕೀಯ ಕಾರಣಗಳೆಡೆಗೆ ಇದು ಬೊಟ್ಟುಮಾಡಿತು. ಆರಂಭದ ಸ್ತ್ರೀವಾದಿ ಸಿದ್ಧಾಂತಗಳಲ್ಲಿ ಇದನ್ನು ಕಾರ್ಯತಾಂತ್ರಿಕವಾಗಿಯೇ ಬಳಸಲಾಯಿತು. ಅಂದರೆ ಪಿತೃಪ್ರಧಾನತೆಯ ಪರಿಕಲ್ಪನೆಯನ್ನು ಖಾಸಗಿಯಾಗಿ ಕುಟುಂಬದೊಳಗೆ ಮತ್ತು ಸಾರ್ವಜನಿಕವಾಗಿ ವೃತ್ತಿ, ರಾಜಕೀಯ ಮತ್ತು ಸಾಂಸ್ಕೃತಿಕ ವಲಯಗಳಲ್ಲಿ ಮಹಿಳೆಯ ಮೇಲಿನ ಪುರುಷರ ಆಧಿಪತ್ಯವನ್ನು ಸಂಕೇತಿಸಲು ಉಪಯೋಗಿಸಿದರು. ಈ ಮೂಲಕ ಪ್ರಧಾನ ಜೈವಿಕ ಲಿಂಗವರ್ಗವಾಗಿ ಗಂಡು ಹೆಣ್ಣನ್ನು ದಮನ ಮಾಡಿ ಆರ್ಥಿಕ, ರಾಜಕೀಯ, ಲೈಂಗಿಕವಾಗಿ ಶೋಷಿಸುವುದು ಎಂಬ ಅರ್ಥ ಈ ಸಿದ್ಧಾಂತಕ್ಕೆ ಒದಗಿಬಂತು. ನಿರಂತರವಾಗಿ ಗಂಡಿನ ಹಿಂಸೆಯ ಪ್ರತೀಕವಾಗಿರುವ ಪ್ರೀತಿ, ಕಾಮ, ಮದುವೆಯಂಥ ಖಾಸಗಿ ಆಪ್ತ ಸಂಬಂಧಗಳಲ್ಲಿ ಇದರ ಸ್ಪಷ್ಟ ಅಭಿವ್ಯಕ್ತಿಯಿದೆ.

ಪಿತೃ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆಯರು ಯಾವಾಗಲೂ ಅಧಿಕಾರ ಮತ್ತು ಆಧಿಪತ್ಯಗಳಿಂದ ದೂರವಿರಿಸಲ್ಪಟ್ಟಿರುತ್ತಾರೆ. ಆದರೆ ಯಾವಾಗೆಲ್ಲಾ ಅಧಿಕಾರ ಸ್ಥಾನಗಳಿಗೆ ಬರುವುದು ಪಿತೃ ಪ್ರಧಾನ ವ್ಯವಸ್ಥೆಗೆ ಅನುಕೂಲಕರವಾಗಿರುತ್ತದೋ ಆಗಷ್ಟೇ ಮಹಿಳೆಯರಿಗೆ ಸೀಮಿತ ಅವಕಾಶಗಳನ್ನು ಬಿಟ್ಟುಕೊಡಲಾಗುತ್ತದೆ. ವರ್ಗ, ಜಾತಿ ಅಥವಾ ಧರ್ಮದ ಹಂಗಿಲ್ಲದೆ ಸ್ತ್ರೀಯರು ದಿನನಿತ್ಯ

ಅನುಭವಿಸುವ ಪಿತೃ ಪ್ರಧಾನತೆಯ ಅಧೀನತೆ, ಕೆಲಸದ ಜಾಗ ಮತ್ತು ಸಮಾಜದಲ್ಲಿ ಸೇರಿದಂತೆ ಅನೇಕ ರೀತಿಯ ತಾರತಮ್ಯ, ಅಪಮಾನ, ನಿಯಂತ್ರಣ, ಹಿಂಸೆಯ ರೂಪಗಳನ್ನು ತಳೆಯುತ್ತದೆ.

ಈ ಮಹಿಳೆಯರ ಅನುಭವ ಕೇಳಿದರೆ ಅಧೀನತೆ ಹೆಣ್ಣಿನ ಹಣೆಬರಹವೂ ಅಲ್ಲ, ನತದೃಷ್ಟತೆಯೂ ಅಲ್ಲ, ಅಥವಾ ಹೆಣ್ಣನ್ನು ಕೆಲವು ದುಷ್ಟ ಗಂಡುಗಳು ಶೋಷಿಸಿ ತುಳಿಯುವುದು ಅಲ್ಲ ಎಂಬುದು ಸ್ಪಷ್ಟವಾಗುತ್ತದೆ. ಇದು ಹೆಣ್ಣನ್ನು ಗಂಡು ಅಧೀನದಲ್ಲಿರಿಸಿ ಶೋಷಿಸುವ ಸಾಮಾಜಿಕ ರಚನಾ ವ್ಯವಸ್ಥೆ. ಆದ್ದರಿಂದ ಪಿತೃ ಪ್ರಧಾನತೆಯನ್ನು ಒಂದು ವ್ಯವಸ್ಥೆಯಾಗಿ ಅರ್ಥ ಮಾಡಿಕೊಳ್ಳುವುದು ಮುಖ್ಯ.

ರ್ಯಾಡಿಕಲ್ ಸ್ತ್ರೀವಾದಿಗಳು ಪಿತೃ ಪ್ರಧಾನತೆಯನ್ನು ವ್ಯಾಪಕವಾದ ಅರ್ಥದಲ್ಲಿ ನಿರ್ವಚಿಸಿದ್ದಾರೆ. ಪಿತೃ ಪ್ರಧಾನತೆ ಎಂದರೆ ಪುರುಷರು ಸ್ತ್ರೀಯರ ಮೇಲೆ ಚಲಾಯಿಸುವ ರಾಜಕೀಯ ಅಧಿಕಾರ. ಸಮಾಜದಲ್ಲಿ ರಾಜಕೀಯ ವಿಭಜನೆಯೊಡನೆ ಸಮಾನವಾಗುವ, ಸರಿಹೋಗುವ ಅಧಿಕಾರ ಇದನ್ನು ಈ ರೀತಿ ಕೂಡ ನಿರ್ವಚಿಸಬಹುದು. ಮಹಿಳೆಯರ ಶ್ರಮವನ್ನು, ಲೈಂಗಿಕತೆಯನ್ನು, ಸಂತಾನೋತ್ಪತ್ತಿ ಶಕ್ತಿಯನ್ನು, ಭೌತಿಕವಾಗಿಯೂ ಪರಿಕಲ್ಪನೆಯಲ್ಲೂ ಪುರುಷರು ನಿಯಂತ್ರಿಸುವ ಒಂದು ಪದ್ಧತಿ.

ಸಮಾಜವಾದಿ ಸ್ತ್ರೀವಾದಿಗಳು ಪಿತೃಪ್ರಧಾನತೆಯನ್ನು ಬಂಡವಾಳಶಾಹಿ ವ್ಯವಸ್ಥೆಗೂ ಮೊದಲಿದೆಯೆಂದು ನೋಡುತ್ತಾರೆ. ಪಿತೃ ಪ್ರಧಾನತೆ ಎಂದರೆ ಸ್ತ್ರೀತ್ವ–ಪುರುಷತ್ವವೆಂಬ ಪಾತ್ರಗಳ ಮೂಲಕ ಪುರುಷರಿಗೆ ಬಂದ ಅಧಿಕಾರವೆಂದು, ಆ ಅಧಿಕಾರ ಅವಿಭಕ್ತ ಕುಟುಂಬದ ಮೂಲಕ ವ್ಯವಸ್ಥೀಕೃತ ಗೊಳಿಸಲ್ಪಟ್ಟಿದೆಯೆಂದು ಸಮಾಜವಾದಿ ಸ್ತ್ರೀವಾದಿಗಳು ಹೇಳುತ್ತಾರೆ.

ಕೇಟ್ ಮಿಲ್ಲೇಟ್ ಅವರ ಪ್ರಕಾರ ಪಿತೃಪ್ರಧಾನತೆಯು ಸಂಪೂರ್ಣವಾಗಿ ಜೈವಿಕವೇನಲ್ಲ. ಆಕೆಯ ಪ್ರಕಾರ ಪುರುಷರು ಮಹಿಳೆಯರ ಮೇಲೆ ಚಲಾಯಿಸುವ ಸಾಮಾಜಿಕ, ರಾಜಕೀಯ ಅಧಿಕಾರವು ಸಮಾಜವನ್ನು ಮೂಲಭೂತವಾಗಿ ವಿಭಜಿಸುವುದಕ್ಕೆ ಸಂಬಂಧಿಸಿದೆ. ನಮ್ಮ ಸಮಾಜವು ಇತರೆಲ್ಲಾ ನಾಗರೀಕತೆಗಳಂತೆ ಪಿತೃಪ್ರಧಾನ ವ್ಯವಸ್ಥೆಯನ್ನು ಆಧರಿಸಿದ್ದು, ಪುರುಷರು ವಿಧಿಸುವ ಮಹಿಳಾ ಪಾತ್ರವು ಹೆಚ್ಚು ಕಠೋರವೂ, ಹೆಚ್ಚು ಏಕರೂಪವೂ ಮತ್ತು ನಿರಂತರವೂ ಆದುದಾಗಿರುತ್ತದೆ.

ಸಿಲ್ಬಿಯಾವಲ್ಬಿ ಅವರ ಪ್ರಕಾರ ಪಿತೃ ಪ್ರಧಾನತೆ ಎಂದರೆ ಹೆಣ್ಣನ್ನು ಆಳುವ, ಶೋಷಿಸುವ ಸಾಮಾಜಿಕ ಆಚರಣೆಯ ಒಂದು ವ್ಯವಸ್ಥೆ. ಪಿತೃ ಪ್ರಧಾನತೆಯ ಸ್ವರೂಪ ಎಲ್ಲಾ ಕಡೆ ಒಂದೇ ರೀತಿಯಾಗಿರುವುದಿಲ್ಲ. ವಿವಿಧ ಸಮಾಜ, ವರ್ಗ, ಜಾತಿ, ಧರ್ಮ, ದೇಶ ಮತ್ತು ಜನಾಂಗಗಳ ಮೇಲೆ ಬೇರೆ ಬೇರೆಯಾಗಿರುತ್ತದೆ. ಚರಿತ್ರೆಯ ವಿವಿಧ ಕಾಲಘಟ್ಟಗಳಲ್ಲಿ ಇದರ ಸ್ವರೂಪ ಬೇರೆ ಬೇರೆಯಾಗಿರುತ್ತದೆ. ಪ್ರತಿಯೊಂದು ಸಾಮಾಜಿಕ ವ್ಯವಸ್ಥೆ ಇಲ್ಲವೆ ಚರಿತ್ರೆಯ ಕಾಲಘಟ್ಟವು, ಪುರುಷ ಪ್ರಧಾನತೆಯನ್ನು ತನ್ನದೇ ಆದ ರೀತಿಯ ಭಿನ್ನತೆಯನ್ನು ಹೊಂದಿರುತ್ತದೆ. ಇದು ಭಿನ್ನ

ಸಾಮಾಜಿಕ ಮತ್ತು ಸಾಂಸ್ಕೃತಿಕ ಆಚರಣೆಗಳನ್ನು ಅವಲಂಬಿಸಿರುತ್ತದೆ. ಕುಟುಂಬ, ಧರ್ಮ ಮತ್ತು ಕಾನೂನುಗಳು ಪುರುಷ ಪ್ರಧಾನ ವ್ಯವಸ್ಥೆಯನ್ನು ಎತ್ತಿ ಹಿಡಿಯುವ ಆಧಾರ ಸ್ತಂಭಗಳಾಗಿವೆ. ಹಿಂದಿನಿಂದಲೂ ಈ ಮೂರು ವ್ಯವಸ್ಥೆಗಳು ಪುರುಷ ಪ್ರಧಾನತೆಯನ್ನು ಬೆಂಬಲಿಸುತ್ತಾ ಅದಕ್ಕೆ ಪೂರಕವಾಗಿ ಕೆಲಸ ಮಾಡುತ್ತಾ ಬಂದಿವೆ. ಈ ಪುರುಷ ಪ್ರಧಾನತೆಯನ್ನು ತೊಡೆದು ಹಾಕಿ ಸಮಾನತೆಯ ಸಮಾಜವನ್ನು ಕಟ್ಟುವ ನಿಟ್ಟಿನಲ್ಲಿ ಕನ್ನಡ–ತೆಲುಗಿನ ಸ್ತ್ರೀವಾದಿ ಕವಯತ್ರಿಯರು ತಮ್ಮ ಕವಿತೆಯ ಮೂಲಕ ತಮ್ಮ ಚಿಂತನೆಗಳನ್ನು ಸಮಾಜಕ್ಕೆ ತಿಳಿಸುವಂತಹ ಕಾರ್ಯವನ್ನು ಮಾಡಿದ್ದಾರೆ.

ಸಮಾಜದಲ್ಲಿನ ಪುರುಷ ಪ್ರಧಾನ ವ್ಯವಸ್ಥೆಯನ್ನು ಮುಖ್ಯವಾಗಿ ಮೂರು ನೆಲೆಗಳಲ್ಲಿ ನಾವು ವಿವರಿಸಿಕೊಳ್ಳಬಹುದು.

೧. ಕೌಟುಂಬಿಕ ನೆಲೆಯ ಪುರುಷ ಪ್ರಧಾನತೆ

೨. ಉದ್ಯೋಗ ಸ್ಥಳಗಳಲ್ಲಿ ಎದುರಿಸುತ್ತಿರುವಂತಹ ಪುರುಷ ಪ್ರಧಾನತೆಯ ಸ್ವರೂಪ

೩. ಸಾರ್ವಜನಿಕ ಸ್ಥಳಗಳಲ್ಲಿ ಪುರುಷ ಪ್ರಧಾನ ವ್ಯವಸ್ಥೆ ಎನ್ನುವ ಮೂರು ನೆಲೆಗಳನ್ನು ನಾವು ಗುರುತಿಸಿಕೊಂಡರೆ ಒಟ್ಟಾರೆಯಾಗಿ ಮಹಿಳೆ ವ್ಯವಹರಿಸುವ ಇಡೀ ಒಂದು ಜಗತ್ತಿನ ಚಹರೆಯನ್ನು ನೋಡಲಿಕ್ಕೆ ಸಾಧ್ಯ. ಹಾಗಾಗಿ ಪ್ರಸ್ತುತ ಅಧ್ಯಯನದಲ್ಲಿ ಕನ್ನಡ–ತೆಲುಗು ಸ್ತ್ರೀವಾದಿ ಕಾವ್ಯವನ್ನು ಗಮನದಲ್ಲಿಟ್ಟುಕೊಂಡು ಈ ಮೂರು ನೆಲೆಗಳಲ್ಲಿರುವ ಪುರುಷ ಪ್ರಧಾನತೆಯನ್ನು ಈ ಕವಯತ್ರಿಯರು ಗುರುತಿಸುವ ಮತ್ತು ಅದಕ್ಕೆ ಪ್ರತಿಕ್ರಿಯಿಸುವ ವಿಧಾನವನ್ನು ಕುರಿತಂತೆ ನಾವು ಅಧ್ಯಯನ ಮಾಡಬಹುದು.

ಕರ್ನಾಟಕ ಸಾಂಸ್ಕೃತಿಕ ವಲಯದಲ್ಲಿ ಸ್ತ್ರೀವಾದದ ಬಗ್ಗೆ ಅಧಿಕೃತವಾದ ತಿಳಿವಳಿಕೆಯನ್ನು ಅನೇಕ ಸ್ತ್ರೀವಾದಿಗಳು ಮೂಡಿಸಿದ್ದಾರೆ. ಅವರಲ್ಲಿ ಒಬ್ಬರಾದ ವಿಜಯ ದಬ್ಬೆಯವರು ಹಲವು ಅನುಮಾನಗಳನ್ನು ಪರಿಹರಿಸುತ್ತ, ಸ್ತ್ರೀವಾದದ ಸ್ಪಷ್ಟ ರೂಪವನ್ನು ತಮ್ಮ ಹಲವು ಭಾಷಣ ಲೇಖನಗಳ ಮೂಲಕ ಸಮಾಜಕ್ಕೆ ತಲುಪಿಸಿದವರಾಗಿದ್ದಾರೆ. ವಿಜಯ ದಬ್ಬೆಯವರ ಸೃಜನೇತರ ಬರವಣಿಗೆ ಬಹುತೇಕ ಸ್ತ್ರೀವಾದಿ ಚಿಂತನೆಗಳಿಗೆ ಸಂಬಂಧಿಸಿದ್ದೇ ಆಗಿದೆ.

ಸಾಮಾಜಿಕ ವ್ಯವಸ್ಥೆಯಲ್ಲಿನ ಸ್ತ್ರೀ ಶೋಷಣೆ, ಪುರುಷ ಪ್ರಾಬಲ್ಯ, ಲಿಂಗ ತಾರತಮ್ಯ ನೀತಿ, ಲಿಂಗಧಾರಿತ ಅಸಮಾನತೆಗಳನ್ನು ಅವರ ಲೇಖನಗಳಲ್ಲಿ ಎತ್ತಿ ತೋರಿಸಿದ್ದಾರೆ. ಸ್ವತಃ ಕವಯತ್ರಿಯುಆದ ಕಾರಣ ಇವರ ಕಾವ್ಯದಲ್ಲಿ ಪಿತೃಪ್ರಧಾನ ವ್ಯವಸ್ಥೆಯ ಕ್ರೌರ್ಯ, ಶೋಷಣೆ, ಮಹಿಳೆಯರ ದಾಸ್ಯ ಇತ್ಯಾದಿಗಳೆಲ್ಲ ವಿಜಯ ದಬ್ಬೆಯವರ ಕಾವ್ಯದಲ್ಲಿ ಪ್ರತಿಭಟನೆಗೆ ಒಳಗಾಗಿವೆ. ನಮ್ಮ ಸಾಮಾಜಿಕ, ಕೌಟುಂಬಿಕ ವ್ಯವಸ್ಥೆಯಲ್ಲಿ ಮಹಿಳೆಯರ ಬದುಕು ಯಾಂತ್ರಿಕವಾದದ್ದು, ಪುರುಷ ಪ್ರಾಬಲ್ಯದಿಂದ ಆಕೆ ಗುಲಾಮಳಾಗಿದ್ದಾಳೆ ಎಂಬುದನ್ನು ವಿಜಯ ದಬ್ಬೆಯವರ 'ಇಷ್ವಕೆ ಹುಟ್ಟಿ' ಎಂಬ ಕವನವು ಸಮರ್ಥವಾಗಿ ಹಿಡಿದಿಟ್ಟಿದೆ.

ಮಡಿಕೆ ಕುಡಿಕೆಗಳ ಒಡೆತನ ದುಬ್ಬಲಿ
ಮಣ್ಣಲ್ಲಿ ಹೊರಳಲೆ ಹುಟ್ಟಿದೆವೆ?
ದ್ವೈತಾದ್ವೈತಕೆ ಹಾರುವ ಭೂಪರ
ಕಾಲೊತ್ತಲಿಕಷ್ಟೇ ಹುಟ್ಟಿದೆವೆ?
ಶೇಷಶಾಯಿಯ ಕಾಲಬುಡದಲ್ಲಿ
ಕೊರಲಿಕಷ್ಟೇ ಹುಟ್ಟಿದೆವೆ?

(ವಿಜಯದಬ್ಬೆ, ಇತಿಗೀತಿಕೆ, ಪು–೬)

ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆ ಪುರುಷನಿಗೆ ಸೇವಕಿ ಅಥವಾ ದಾಸಿಯಾಗಿದ್ದಾಳೆಯೇ ಹೊರತು ಪುರುಷರಿಗೆ ಸರಿಸಮಾನವಾದ ಸ್ಥಾನಮಾನವನ್ನು ಹೊಂದಿಲ್ಲ ಎಂಬುದಕ್ಕೆ ನಮ್ಮ ಪೌರಾಣಿಕ ಪಾತ್ರಗಳು ಸಾಕ್ಷಿಯಂತಿವೆ. ಈ ಕವನದಲ್ಲಿ ಪೌರಾಣಿಕ ಪ್ರತಿಮೆಗಳನ್ನು ಬಳಸಿ ಮಹಿಳೆಯ ದಾಸ್ಯವನ್ನು ವ್ಯಕ್ತಗೊಳಿಸಲಾಗಿದೆ. 'ಶೇಷಶಾಯಿಯ ಕಾಲಬುಡದಲ್ಲಿ ಕೂರುವ', 'ಕಾಲೊತ್ತುವ' ಲಕ್ಷ್ಮಿಯ ಚಿತ್ರಗಳು ಸ್ತ್ರೀ ಶೋಷಣೆಯ ಸಂಕೇತಗಳಾಗಿವೆ. ಹೆಣ್ಣು ಹುಟ್ಟಿನ ಉದ್ದೇಶ, ಬದುಕಿನ ಸಾರ್ಥಕತೆ ಇಷ್ಟೇನೆ? ಎಂದು ಪ್ರಶ್ನಿಸುತ್ತಾ ನಮ್ಮ ಸಾಂಪ್ರದಾಯಿಕ ಮನಸ್ಸು ಕೆಲಸ ಮಾಡುವ ರೀತಿಯನ್ನು ಸೂಕ್ಷ್ಮವಾಗಿ ಆಕ್ಷೇಪಿಸುತ್ತದೆ. ಮಹಿಳೆ ಎಂದರೆ ಅಡಿಗೆ ಮನೆಗೆ ಸೀಮಿತ, ಗಂಡನ ಸೇವೆಯೆ ಅವಳ ಬದುಕಿನ ಪರಮ ಮೌಲ್ಯ ಎನ್ನುವಂತಹ ಪುರುಷ ಪ್ರಧಾನ ವ್ಯವಸ್ಥೆಯ ಪಾರಂಪರಿಕ ನಂಬಿಕೆಯನ್ನು ಒಡೆದು ಹಾಕಲು ನಯವಾಗಿ, ಆದರೆ ಹರಿತವಾದ ಮಾತುಗಳಲ್ಲಿ ಯತ್ನಿಸಿದೆ.

ಕುಟುಂಬದೊಳಗೆ ಹೆಣ್ಣು ಹೆರುವ ಯಂತ್ರವಾಗಿ ಮಾರ್ಪಟ್ಟಾಗ ಪ್ರಕೃತಿ ನೀಡಿದ ಸಾಮರ್ಥ್ಯವನ್ನೇ ಶಾಪವೆಂದು ಭಾವಿಸುವುದುಂಟು. ಇಂಥಹ ಸ್ಥಿತಿಗೆ ಪುರುಷ ಪ್ರಧಾನ ವ್ಯವಸ್ಥೆಯೇ ಕಾರಣ. ಹೆಣ್ಣಿಗೆ ಇಷ್ಟವಿರಲಿ, ಇಲ್ಲದಿರಲಿ ಪುರುಷರ ಇಚ್ಛೆಗೆ ಬಲತ್ಕಾರದಿಂದ ಮಕ್ಕಳನ್ನು ಹೆರುವ ಯಾಂತ್ರಿಕತೆಗೆ ಒಳಗಾಗುತ್ತಾಳೆ ಎಂಬ ಗ್ರಹಿಕೆಯ ಹಿನ್ನೆಲೆಯಲ್ಲಿ ವಿಜಯ ದಬ್ಬೆಯವರು 'ಸಂಭವಾಮಿ ಕ್ಷಣೇ ಕ್ಷಣೆ' ಎಂಬ ಕವನದಲ್ಲಿ ಸ್ತ್ರೀಯರ ಮನಃಸ್ಥಿತಿಯನ್ನು ತೆರೆದಿಟ್ಟಿದ್ದಾರೆ.

ಈ ಹೇರುವ ಯಂತ್ರ ನೋಡುತ್ತ
ನಕ್ಕವರೆಷ್ಟೋ ಉಗಿದವರೆಷ್ಟೋ
ನಗುವಷ್ಟು ನೋಡುವ
ಯಂತ್ರವಾದರೂ ಧನ್ಯೇ !
ಬರಿಯ ಉಡಿಯ ಜೋಪಾನ ಹಿಡಿಯುತ್ತ
ಆಯ್ದ ಕನಸ ತುಂಬುತ್ತಾ
ಮೆಟ್ಟಲಿಳಿಯುತ್ತ ಹತ್ತಿ ಹಿಂದಿರುಗಿದೆ

ಸಂಭವಾಮಿ ಕ್ಷಣೇ ಕ್ಷಣೆ

(ವಿಜಯದಬ್ಬೆ, ಇತಿಗೀತಿಕೆ, ಪು–೧೩೦)

ಪರಂಪರಾಗತ ಪುರುಷ ಪ್ರಧಾನ ಮೌಲ್ಯಗಳಿಗೆ ಹೆಣ್ಣು ಬದ್ದಳಾಗಿ ಕೇವಲ ಲೈಂಗಿಕ ವಸ್ತುವಾಗಿ ಬಳಸಲ್ಪಟ್ಟಿರುವುದರ ಚಿತ್ರಣ ಇಲ್ಲಿದೆ. ಗಂಡಿಗಿಲ್ಲದ ವಿಶೇಷ ಶಕ್ತಿ ಸಾಮರ್ಥ್ಯಗಳ ಮೂಲಕವೇ ಆಕೆಯನ್ನು ದುರ್ಬಲಗೊಳಿಸಿ, ಸ್ತ್ರೀ ಶೋಷಣೆಗೆ ಈ ವ್ಯವಸ್ಥೆ ಕಾರಣವಾಗಿರುವುದಕ್ಕೆ ಕವಯತ್ರಿ ವಿಷಾದಿಸುತ್ತಾರೆ.

ಪುರುಷ ಪ್ರಧಾನ ಸಮಾಜ ರಚನೆಯಲ್ಲಿ ಹುಟ್ಟಿ ಬೆಳೆಯುವ ಹೆಣ್ಣಿನ ಮನಸ್ಸು, ಪ್ರಜ್ಞೆಯೂ ಸಹ ಪುರುಷ ಮೌಲ್ಯಗಳಿಂದಲೇ ನಿಯಂತ್ರಿತಗೊಂಡಿರುತ್ತದೆ. ಈ ವ್ಯವಸ್ಥೆಯ ಅನಿಷ್ಟ ಸಂಪ್ರದಾಯ, ಮೌಲ್ಯಗಳನ್ನು ಕುಟುಂಬದೊಳಗೆ ಹೆಣ್ಣುಮಕ್ಕಳಿಗೆ ಸಾಗಿಸುವಂತಹ ಕೆಲಸವನ್ನು ಮಾಡಲಾಗುತ್ತದೆ. ಹೆಣ್ಣಿನ ಬದುಕನ್ನು ದುರಂತಕ್ಕೆ ಕೊಂಡೊಯ್ಯುವ ಇಂತಹ ಅನಿಷ್ಟ ಸಂಪ್ರದಾಯ, ಆಚರಣೆಗಳನ್ನು ವಿಜಯ ದಬ್ಬೆಯವರು ಕಟು ವ್ಯಂಗ್ಯವಾಗಿ ಖಂಡಿಸಿದ್ದಾರೆ.

ಉಡಿ ತುಂಬ ನಿಗಿನಿಗಿ ಕೆಂಡ
ಗೊತ್ತು ಗೊತ್ತೇ ಅವ್ವ
ಉಸಿರೆತ್ತ ಬಾರದು ಗೊತ್ತು
ಉಡಿಯ ತುಂಬಿದ್ದು ಆಲಿಕಲ್ಲೆಂಬಂತೆ
ನಡೆಯಬೇಕು ಗೊತ್ತು
ಒಳಗೆ ಕಿಚ್ಚು ಕರಕಾಗಿಸಲು
ನಾನು ನರಳಿದ್ದು ಕೇಳಬಾರದು ನನಗೆ
ಮಲ್ಲಿಗೆಯ ಅರಳು ಬೆಳಕಾಗಿ
ಬೆಳಕು ಬೆಂಕಿಯಾದದ್ದ
ಬೆದಕಬಾರದು, ಮರೆತಿಲ್ಲ
ನೀ ಹೇಳಿಕೊಟ್ಟ ಪಾಠ

(ವಿಜಯದಬ್ಬೆ, ಇತಿಗೀತಿಕೆ, ಪು–೪೬)

ಬದುಕಿನ ದಾರಿ ನರಕಮಯವಾಗಿದ್ದರೂ ದುಃಖ, ನೋವುಗಳನ್ನು ಸಹಿಸಿಕೊಂಡು ಗಂಡನೊಂದಿಗೆ ಸಹನೆಯಿಂದ ಬದುಕಬೇಕಾದ ಅನಿವಾರ್ಯತೆಯ ಬಗೆಗೆ ಕವಯತ್ರಿಗೆ ಅನುಕಂಪ ವಿಷಾದವಿದೆ. ಮದುವೆಯೊಂದು ಪವಿತ್ರಬಂಧ ಎಂಬುದು ಭಾರತದ ಪಾರಂಪರಿಕ ನಂಬಿಕೆಯಾಗಿದೆ. ಆದರೆ ಸ್ತ್ರೀವಾದಿಗಳು ಮಹಿಳೆಯರ ವಿವಾಹ ಸಂಸ್ಥೆಯನ್ನು ತಿರಸ್ಕರಿಸುತ್ತಾರೆ. ಕಾರಣ ವಿವಾಹವು ಸ್ತ್ರೀಯರ ಪಾಲಿಗೆ ಶೋಷಣಾ ಸಂಸ್ಥೆಯಾಗಿದೆ. ಇದು ಮಹಿಳೆಯನ್ನು ಶೋಷಿಸಲು ಗಂಡಿಗೆ ಪರವಾನಿಗೆಯನ್ನು ನೀಡುತ್ತದೆ. ವಿವಾಹ ಸ್ತ್ರೀಯರ ಸ್ವಾತಂತ್ರ್ಯವನ್ನು ಹತ್ತಿಕ್ಕುತ್ತದೆ. ಈ ಹಿನ್ನೆಲೆಯಲ್ಲಿ

ವಿಜಯ ದಬ್ಬೆಯವರ 'ಕುರುಕ್ಷೇತ್ರದಂಚಿನಲ್ಲಿ' ಕವಿತೆ ಗಮನಾರ್ಹವಾಗಿದೆ. ವಿವಾಹೋತ್ತರ ಬದುಕು ಹೆಣ್ಣಿನ ಪಾಲಿಗೆ ಕುರುಕ್ಷೇತ್ರವಾಗಿದೆ ಎಂಬುದನ್ನು ಈ ಕವನದಲ್ಲಿ ಹೀಗೆ ನಿರೂಪಿಸಿದ್ದಾರೆ.

ಹೇಗೊ
ಕುರುಕ್ಷೇತ್ರದಂಚಿಗೆ
ಬಂದು ನಿಂತಿದ್ದೇನೆ
ಮದುವೆ ಮಂಟಪದಲ್ಲಿ

(ವಿಜಯದಬ್ಬೆ, ಇತಿಗೀತಿಕೆ, ಪು–೨೩)

ಕುಟುಂಬದಲ್ಲಿ ಸಹಜವಾಗಿ ಇರಬಹುದಾದ ಪ್ರೀತಿ, ವಾತ್ಸಲ್ಯ, ವಿಶ್ವಾಸ, ಹೊಂದಾಣಿಕೆ, ಸಾಮರಸ್ಯಗಳು ಇಲ್ಲವಾಗಿ ಪರಸ್ಪರ ಕಿತ್ತಾಟ, ಜಗಳ, ಹಿಂಸೆ, ದ್ವೇಷಗಳು ನೆಲೆಗೊಂಡಿರುವುದರಿಂದ ಮದುವೆ ಮಂಟಪದಲ್ಲಿರುವಾಗಲೇ ಹೆಣ್ಣು 'ಕುರುಕ್ಷೇತ್ರ ಯುದ್ಧ'ಕ್ಕೆ ಸಿದ್ಧವಾಗಬೇಕೆಂಬ ಸೂಚನೆಯನ್ನು ನೀಡಿದ್ದಾರೆ. ವರದಕ್ಷಿಣೆಗಾಗಿ ನಡೆಯುವ ಕೊಲೆ, ಹಿಂಸೆ, ದೌರ್ಜನ್ಯಗಳು ಕವನದಲ್ಲಿ ಪ್ರಸ್ತಾಪಿಸಲಾಗಿದೆ. ಜೊತೆಗೆ ಈ ಶೋಷಣೆಗೆ ಗಂಡಿನೊಂದಿಗೆ ಮಹಿಳೆಯರ ಪಾತ್ರವೂ ಇದೆ ಎಂಬುದನ್ನು ಈ ಕವನದಲ್ಲಿ ಹೇಳಲಾಗಿದೆ.

'ಮಿಸ್. ಎಸ್. ಲಕ್ಷ್ಮಿ' ಎಂಬ ಕವಿತೆ ಕೌಟುಂಬಿಕ ಜೀವನದಲ್ಲಿ ಮಹಿಳೆಯರ ಅಸ್ತಿತ್ವ ಏನು ಎಂಬುದನ್ನು ಕುರಿತು ಬರೆದದ್ದಾಗಿದೆ. ಮಹಿಳೆಯರಿಗೆ ಇವತ್ತಿನ ನಾಗರಿಕ ಸಮಾಜದ ಒಳಗೆ ಸ್ವಾತಂತ್ರ್ಯ ಎಂಬುದು ಯಾವ ಅರ್ಥದಲ್ಲಿ ಇದೆ, ಎಲ್ಲಿಯವರೆಗೂ ಇದೆ ಅಂದರೆ ನಾಗರಿಕತೆ ಎಂದು ಏನನ್ನು ಕರೆಯುತ್ತೇವೆ ಅವುಗಳನ್ನು ಅನುಭವಿಸುವುದಕ್ಕಷ್ಟೇ ಸ್ವಾತಂತ್ರ್ಯವಿತ್ತೇ ವಿನಹಃ ಅವಳ ಬದುಕಿನ ನಿರ್ಧಾರಗಳನ್ನು ತೆಗೆದುಕೊಳ್ಳುವ ಸ್ವಾತಂತ್ರ್ಯ ಇರಲಿಲ್ಲ ಎಂಬುದನ್ನು ಈ ಕವನ ಕಟ್ಟಿಕೊಟ್ಟಿದೆ.

ಈ ಲಕ್ಷ್ಮಿಗೂ ಸ್ವಾತಂತ್ರ್ಯವಿತ್ತು
ಅವಳಜ್ಜಿಯಂತೆ ಇವಳೇನೂ
ಕೂದಲ ತುದಿಗೆ ನಾರು ಬಿಗಿಯಲಿಲ್ಲ
ಲಂಗವಿಲ್ಲದೆ ಸೀರೆಯುಡಲಿಲ್ಲ
ಆದರೂ ಅವಳ ಒಳಿತು
ಹೆತ್ತವರಿಗಲ್ಲದೆ ಮತ್ತಾರಿಗೆ ತಿಳಿದೀತು?
ಜಾತಿಯಲ್ಲದ ಜಾತಿಯವನಿಗೆ
ಹುಡುಗಿ ಮನಸೋತರೆ
ಅವರು ಸುಮ್ಮನಿರಲಾದೀತೇ?
ಸರಿಯಾದ ಗೋತ್ರ ಸೂತ್ರಕ್ಕೆ
ಧಾರೆಯೆರೆದು ನಿಟ್ಟುಸಿರಿಟ್ಟರು

(ವಿಜಯದಬ್ಬೆ, ಇತಿಗೀತಿಕೆ, ಪು–೩೮)

ಸಮಾಜ ಬದಲಾದರೂ, ವಿಚಾರಧಾರೆಗಳು ಬದಲಾದರೂ, ಮಹಿಳೆಯರಿಗೆ ಮೇಲ್ಪದರದಲ್ಲಿ ಒಂದು ಬಗೆಯ ಬದಲಾವಣೆಯನ್ನು ನಾವು ಆಧುನಿಕ ಸಂದರ್ಭದಲ್ಲಿ ಕಾಣಬಹುದೇ ಹೊರತು, ಮೂಲಭೂತವಾದ ಆಯ್ಕೆಯ ಸ್ವಾತಂತ್ರ್ಯ, ತನ್ನ ಮೇಲಿನ ತನ್ನ ಹಕ್ಕು ಇತ್ಯಾದಿಗಳು ಇಲ್ಲಿ ಅವಳ ಕುಟುಂಬದಲ್ಲಿ ಇಲ್ಲ ಅನ್ನುವುದನ್ನು ಈ ಕವಿತೆ ತೋರಿಸುತ್ತದೆ.

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಸ್ತ್ರೀಯರು ಅಸ್ಪೃಶ್ಯರಾಗಿರುವ ದುರಂತವನ್ನು ವಿಜಯ ದಬ್ಬೆಯವರು ವ್ಯಂಗ್ಯದ ನೆಲೆಯಲ್ಲಿ ಕಲಾತ್ಮಕವಾಗಿ ಕವನವೊಂದರಲ್ಲಿ ಚಿತ್ರಿಸಿದ್ದಾರೆ. 'ಅಸ್ಪೃಶ್ಯರನ್ನು ಕುರಿತು' ಎಂಬ ಕವನ ಸ್ತ್ರೀಯನ್ನು ಸುಖವಾಗಿಟ್ಟಿದ್ದೇವೆಂಬ ನೆಪದಲ್ಲಿ, ಪುರುಷರು ಅವರನ್ನು ಹೇಗೆ ಅಸ್ಪೃಶ್ಯರನ್ನಾಗಿಸಿದ್ದಾರೆಂಬುದನ್ನು ವಿವರಿಸಲಾಗಿದೆ. ಇಂಥ ಶೋಷಣೆಯ ಅರಿವು ಇಲ್ಲದೆ ಸ್ತ್ರೀಯರು ಸುಖವಾಗಿದ್ದೇವೆಂಬ ಭ್ರಮೆಯಲ್ಲಿರುವುದಕ್ಕೆ ಕವಯತ್ರಿ ವಿಷಾದಿಸುತ್ತಾರೆ.

ಛೆ, ಎಂಥ ಮಾತು ಸುಶೀಲೆ
ನಮ್ಮದು ಎಂಥ ಇತಿಹಾಸ!
ನಮ್ಮ ಆದಿಶಕ್ತಿಯರೆಲ್ಲ ಇನ್ಯಾರು?
ಮನೆಗೆ ಬಂದು ನೋಡು
ನಮ್ಮಮ್ಮನ ಪಟಕ್ಕೆ
ಎಂಥ ಮಜಬೂತಾದ ಬೆಳ್ಳಿ ಕಟ್ಟಿದೆ
--------------------
ಅಪ್ಪನ ಶಂಕೆ ಬೆಳೆದಂತೆ
ಅಮ್ಮ ಕೃಶವಾಗತೊಡಗಿದಳು
ನಮ್ಮ ಅಕ್ಕತಂಗಿಯರಿಗೆಲ್ಲ
ಬಿಸಿಲು ತಗಲದಂತೆ ಕುದ್ದು
ಬುರ್ಕಾ ಹೊಲಿಸಿದ್ದು ಸುಳ್ಳೆ

(ವಿಜಯದಬ್ಬೆ, ಇತಿಗೀತಿಕೆ, ಪು–೧೪೫)

ಬೆಳ್ಳಿ ಕಟ್ಟು ಹಾಕಿಸಿ ದೂರವಿಟ್ಟು ಅಥವಾ ಪ್ರದರ್ಶನದ ವಸ್ತುವನ್ನಾಗಿ ಮಾಡಿ, ಬುರ್ಕಾ ಹೊಲಿಸಿಟ್ಟು ಬಂಧನದಲ್ಲಿಟ್ಟು, ತಾವು ಮಾತ್ರ ಸ್ವತಂತ್ರವಾಗಿರುವ ಪುರುಷರ ಧೋರಣೆಯನ್ನು ಖಂಡಿಸಲಾಗಿದೆ. ಇಂಥ ಹುನ್ನಾರಗಳನ್ನು ಅರಿತು ಸುಖದ ಭ್ರಮೆಯಿಂದ ಹೊರಬಂದು ಹೊರಗಿನ ಪ್ರಪಂಚಕ್ಕೆ ಸ್ತ್ರೀಯರು ತೆರೆದುಕೊಳ್ಳಬೇಕೆಂಬ ಆಶಯ ಕವನದಲ್ಲಿ ತೀವ್ರವಾಗಿದೆ.

ಪುರುಷ ಪ್ರಧಾನ ವ್ಯವಸ್ಥೆಯ ನಿಯಮ ನಿರ್ಬಂಧಗಳೆಲ್ಲ ಬಹಳ ಕಟ್ಟುನಿಟ್ಟಾಗಿ ಪಾಲನೆಯಾಗುವುದು ಮೊದಲು ಅರಮನೆಗಳಲ್ಲಿ ಸಾಮಾನ್ಯ ಮಹಿಳೆಯರಿಗೆ ಇರುವ ಅಲ್ಪಸ್ವಲ್ಪ ಸ್ವಾತಂತ್ರ್ಯ ಮತ್ತು ಅವಕಾಶಗಳೂ ಅರಮನೆಗಳ ಸ್ತ್ರೀಯರಿಗಿರುವುದಿಲ್ಲ. ಅವರು ಪುರುಷಾಧಿಪತ್ಯದ ಪೂರ್ಣ

ಬಂಧಿಗಳಾಗುತ್ತಾರೆ. ಸಾಮಾನ್ಯ ವರ್ಗಗಳಿಗಿಂತ ರಾಜವಂಶದಂತಹ ಶ್ರೀಮಂತ ವರ್ಗಗಳಲ್ಲಿ ಸ್ತ್ರೀ ಶೋಷಣೆ ಅಧಿಕವಾಗಿರುತ್ತದೆ ಎಂಬ ಕಟು ಸತ್ಯವನ್ನು ವಿಜಯ ದಬ್ಬೆಯವರು ತಮ್ಮ 'ಹೇಗಾದರೂ ಕರೆಯಿರಿ' ಎಂಬ ಕವನದಲ್ಲಿ ತಿಳಿಸಿದ್ದಾರೆ.

ರಂಗಾದ ಮಹಲಿನೊಳಗೆ
ಹೇಗೋ ನುಗ್ಗಿ
ಹೊರಗಿನ ದಾರಿ ಕಾಣದೆ
ಜೋಡಿಸಿದ ಗಾಜುಗಳು
ಕಂಡೂ ಕಾಣದಂತಾಗಿ
ಆಕಾಶಕ್ಕೆ ಜಿಗಿಯ ಹೋಗಿ
ಬಡಿದು ಕೊಂಡು ಸತ್ತು ಬಿದ್ದಿವೆ
ಇತಿಹಾಸ ಇಲಾಖೆಯ
ಅಡಿಗಲ್ಲ ಕೆಳಗೆ
ಇವನ್ನು
ಹೇಗಾದರೂ ಕರೆಯಿರಿ
ಸೀತೆಯನ್ನಿ ದ್ರೌಪದಿಯನ್ನಿ
ಎಲ್ಲ ಒಂದೇ

(ವಿಜಯದಬ್ಬೆ, ಇತಿಗೀತಿಕೆ, ಪು–೧೧೯)

ಅರಮನೆಗಳೆಂಬ ಸುಂದರ ಸೆರೆಮನೆಗಳಲ್ಲಿ ಹೆಣ್ಣುಗಳನ್ನು ಬಂಧಿಯಾಗಿಸಿ, ಬಾಹ್ಯ ಪ್ರಪಂಚದ ಗಾಳಿ ಬೆಳಕುಗಳೆಂಬ ಜ್ಞಾನದಿಂದ ವಂಚಿತಗೊಳಿಸಿ ಅವರ ಕನಸುಗಳನ್ನು ಹೊಸಕಿ ಹಾಕಿರುವುದನ್ನು ಇಲ್ಲಿ ಚಿತ್ರಿಸಲಾಗಿದೆ. ಇದಕ್ಕೆ ನಿದರ್ಶನವಾಗಿ ಸೀತೆ, ದ್ರೌಪದಿಯರನ್ನು ಹೆಸರಿಸಿದ್ದಾರೆ.

ಬಿ.ಟಿ. ಲಲಿತಾ ನಾಯಕ್ ಕನ್ನಡದ ಸ್ತ್ರೀವಾದಿ ಲೇಖಕಿಯರಲ್ಲಿ ಒಬ್ಬರು. ಸಮಕಾಲೀನ ಮಹಿಳಾ ಚಳವಳಿಯೊಂದಿಗೆ ಸಂಪರ್ಕವಿರುವುದರಿಂದ ಬಂಡಾಯ ಧೋರಣೆ ಹಾಗೂ ಸ್ತ್ರೀವಾದಿ ಧೋರಣೆಗಳು ಇವರ ಸಾಹಿತ್ಯದಲ್ಲಿ ಮೇಳೈಸಿವೆ. ಈ ಎರಡೂ ಚಿಂತನೆಗಳ ಹಿನ್ನೆಲೆಯಲ್ಲಿ ಅವರು ವಿಚಾರವಂತರಾಗಿ ಪ್ರಗತಿಪರ ಮನೋಧರ್ಮದ ಸಾಹಿತಿಯಾಗಿ ಕನ್ನಡ ನಾಡಿನಲ್ಲಿ ಜನಪ್ರಿಯರಾಗಿದ್ದಾರೆ. ಶತಮಾನಗಳಿಂದಲೂ ಅಜ್ಞಾನ, ಅಂಧಕಾರ, ಮೌಢ್ಯಗಳ ಹಿನ್ನೆಲೆಯಲ್ಲಿ ಶೋಷಣೆಗೊಳಗಾಗಿರುವ ಮಹಿಳೆ, ಪುರುಷ ಪ್ರಧಾನ ಸಮಾಜದಲ್ಲಿ ಎಲ್ಲಾ ರೀತಿಯಿಂದಲೂ ಮೂಲೆಗುಂಪಾಗುತ್ತಲೆ ಬಂದಿದ್ದಾಳೆ. ಇಂತಹ ವ್ಯವಸ್ಥೆ ಕುರಿತಂತೆ ಮಾತನಾಡುತ್ತ ಹೆಣ್ಣಿನ ಅಸಹಾಯಕ ಪರಿಸ್ಥಿತಿಗೆ ಕಾರಣವಾದ ಪುರುಷನ ಸ್ವಾರ್ಥ, ದಾಷ್ಟ್ಯಗಳ ವಿರುದ್ಧ ಪ್ರತಿಭಟನೆಯನ್ನು ತಮ್ಮ ಕಾವ್ಯಗಳ ಮೂಲಕ ವ್ಯಕ್ತಪಡಿಸಿದ್ದಾರೆ.

ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣನ್ನು ನಿಯಂತ್ರಣದಲ್ಲಿಟ್ಟುಕೊಳ್ಳುವ ಅಪ್ಪ-ಅಜ್ಜಂದಿರ (ಪುರುಷ) ಚಿತ್ರಣವನ್ನು ನೀಡುವ ಲೇಖಕಿ ಆ ಮುಖೇನ ಸ್ತ್ರೀ ದಾಸ್ಯವನ್ನು ವಿವರಿಸುತ್ತ ಕೌಟುಂಬಿಕ ನೆಲೆಯಲ್ಲಿ ಸ್ತ್ರೀಯರಿಗೆ ಸ್ವಾತಂತ್ರ್ಯ ಮತ್ತು ಹಕ್ಕು ಅವಕಾಶಗಳು ನಿರಾಕರಿಸಲ್ಪಟ್ಟಿವೆ. ಸ್ತ್ರೀಯರು ಪುರುಷರ ಪ್ರಾಬಲ್ಯ ಹಾಗೂ ಪಕ್ಷಪಾತಿಯ ಧೋರಣೆಯಿಂದ ಅಸಹಾಯಕರಾಗಿದ್ದಾರೆ ಎಂಬುದನ್ನು ಲಲಿತಾ ನಾಯಕ್ ಅವರು ಕುಟುಂಬವೊಂದನ್ನು ಪ್ರತೀಕವಾಗಿಸಿ ನಿರೂಪಿಸಿದ್ದಾರೆ. 'ಅವ್ವನಿಗೆ ಅವಕಾಶ' ಎಂಬ ಕವನದಲ್ಲಿ ಸ್ತ್ರೀ-ಪುರುಷರು ಕುಟುಂಬದಲ್ಲಿ ಯಾವ ಪಾತ್ರಗಳನ್ನು ಹೇಗೆ ನಿರ್ವಹಿಸುತ್ತಾರೆಂಬುದನು ವಿವರಿಸಿದ್ದಾರೆ.

ಹೆತ್ತವಳು ಅಷ್ಟೇ ಅವ್ವ
ಬರೆದವನು ಹಣೆಬರಹವ ಅಪ್ಪ
ಎಲ್ಲ ಅವ್ವಂದಿರಿಗೂ
ಅವರಪ್ಪ ಅಜ್ಜರದೇ ಬರಹ
ದೇವಲೋಕದಲೂ ಬ್ರಹ್ಮಪ್ಪನದೇ ಗುತ್ತಿಗೆ
ಶಾರದವ್ವನಿಗೆ ದಕ್ಕಿರಬಹುದು
ಅರೆಕ್ಷಣದ ಅವಧಿ

(ಲಲಿತಾ ನಾಯಕ್.ಬಿ.ಟಿ, ಬಿದಿರು ಮಳೆ ಕಂಟಿಯಲಿ, ಪುಟ-೪೮)

ಹೆಣ್ಣು ಮಗುವಿಗೆ ಜನ್ಮ ನೀಡಿ, ಸಾಕಿ ಸಲಹುವವಳು ಹೆಣ್ಣಾದಾರೂ, ಆ ಮಗುವಿನ ಭವಿಷ್ಯವನ್ನು ಬರೆಯುವ ಅವಕಾಶ ಅವ್ವನಿಗಿಲ್ಲ. ಅವಳನ್ನು ಹೊರ ಪ್ರಪಂಚಕ್ಕೆ ಬಿಡದೆ ಯಾವುದೇ ಸ್ವಾತಂತ್ರ್ಯ ನೀಡದೇ ಮನೆ ಎಂಬ ನಾಲ್ಕು ಗೋಡೆಯ ಮಧ್ಯೆ ನಿಯಂತ್ರಿಸುವವರು ಮಾತ್ರ ಪುರುಷರು ಎನ್ನುವ ವಿಪರ್ಯಾಸದ ಸಂಗತಿಯನ್ನು ವ್ಯಂಗ್ಯ ಮಿಶ್ರಿತ ಶೈಲಿಯಲ್ಲಿ ಪ್ರತಿಭಟಿಸಲಾಗಿದೆ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆ ಮಕ್ಕಳನ್ನು ಹೆತ್ತು ಸಾಕುವ ಯಾಂತ್ರಿಕತೆಗೆ ಮಾತ್ರ ಸೀಮಿತವಾಗಿರುವುದರ ಬಗೆಗೆ ಕವಯತ್ರಿ ಅಸಮಾಧಾನ ಹಾಗೂ ವಿಷಾಧಗಳನ್ನು ವ್ಯಕ್ತಪಡಿಸಿದ್ದಾರೆ.

ಪುರುಷ ಪ್ರಧಾನ ವ್ಯವಸ್ಥೆಯ ಸಮಾಜ ಹೆಣ್ಣು ಮಗುವಿನ ಜನನಕ್ಕೆ ತೋರುವ ಪ್ರತಿಕ್ರಿಯೆ, ನಿರ್ಲಕ್ಷತೆಯನ್ನು ಕುರಿತು ಲಲಿತ ನಾಯಕ್ ಅವರು 'ಕೇಳು ಮಗುವೆ' ಕವನದ ಮೂಲಕ ಕಾರವಾಗಿ ಪ್ರತಿಕ್ರಿಯಿಸಿ ಲಿಂಗಭೇದದ ಕರಾಳ ಮುಖವನ್ನು ನಮ್ಮ ಮುಂದಿಡುತ್ತಾರೆ. ಪ್ರಸ್ತುತ ಸಮಾಜದಲ್ಲಿ ತಾಯಿ ಗರ್ಭದಲ್ಲಿರುವ ಮಗು ಹೆಣ್ಣೆಂದು ತಿಳಿದಕೂಡಲೇ ಸಾವಿಗೊಳಪಡಿಸುವ ಹೇಯ ಕೃತ್ಯವನ್ನು ಖಂಡಿಸುತ್ತಾರೆ.

ಹೆಗಲ ಚೀಲವ ಹೊತ್ತು
ಹಾದಿ ಗುಂಟ ಸಾಗುವ ನೀನು
ಬೆನ್ನ ಹಿಂದೊಮ್ಮೆ ತಿರುಗಿ ನೋಡು

ಬೊಗಸೆಯೊಡ್ಡಿ ನಿಂತ ಹಿಂಡ್ಹಿಂಡು
ಎಳೆಯರ ಗುಂಪು
ಎದೆಯ ಹಾಲಿಗ್ಹಂಬಲಿಸಿ ಬಿಕ್ಕುವ ಲಕ್ಷ
ನವಜಾತ ಕಂಠಗಳು
ಹೆಣ್ಣೆಂಬುದರಿತೊಡನೆ ಗರ್ಭದಲ್ಲೆ
ಕತ್ತು ಹಿಚುಕುವ ಕರಾಳ ಹಸ್ತಗಳು

(ಲಲಿತಾ ನಾಯಕ್.ಬಿ.ಟಿ, ಬಿದಿರು ಮಳೆ ಕಂಟಿಯಲಿ, ಪುಟ-೯೨)

ಎಂಬ ವಾಸ್ತವ ಸತ್ಯವನ್ನು ಸ್ತ್ರೀತನದ ನೈತಿಕತೆಯ ನೆಲೆಗಳ ಹಿನ್ನೆಲೆಯಲ್ಲಿ ಲಿಂಗಭೇದ ಮತ್ತು ಹೆಣ್ಣು ಭ್ರೂಣಹತ್ಯೆ ಉದಾಹರಣೆಯೊಂದಿಗೆ ವಿವರಿಸುತ್ತಲೇ ಮುಗ್ಧ ಹೆಣ್ಣು ಮಕ್ಕಳ ಬದುಕನ್ನು ಮೊಟಕುಗೊಳಿಸುವ ಸಾಮಾಜಿಕ ವ್ಯವಸ್ಥೆಯ ಬಗ್ಗೆ ತಾಯಿಗಿರುವ ಆತಂಕವನ್ನು ವ್ಯಕ್ತಪಡಿಸಿದ್ದಾರೆ. ಇದು ಸ್ತ್ರೀ ಶೋಷಣೆಯ ಇನ್ನೊಂದು ಮುಖವಾಗಿದೆ.

'ಸ್ವೀಕರಿಸು ಅಶ್ರುತರ್ಪಣವ' ಎಂಬ ಕವನದಲ್ಲಿ ಮಹಿಳೆಯರ ಸಾಂಸ್ಕೃತಿಕ ಬೆಳವಣಿಗೆಗೆ ಪುರುಷರು ಅಡ್ಡಿಯಾಗಿರುವ ಸ್ಥಿತಿಯನ್ನು ಎತ್ತಿ ತೋರಿಸಿದ್ದಾರೆ. ಸಾಮಾಜಿಕ, ಸಾಂಸ್ಕೃತಿಕ ವ್ಯವಸ್ಥೆಯಲ್ಲಿ ಪುರುಷರೇ ಮೇಲುಗೈ ಸಾಧಿಸಿರುವುದರಿಂದ ಸ್ತ್ರೀಯರು ಅವರ ಪ್ರಾಬಲ್ಯದಿಂದ ಬಿಡಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ ಎಂಬ ನೋವು ಈ ಕವನದಲ್ಲಿದೆ.

ಕಲಾವಿದೆಯಾದರೇನು ನೀನು
ಪ್ರತಿಭಾವಂತಳಾದರೇನು?
ಭವಿಷ್ಯತ್ತನ್ನು ನಿರ್ಧರಿಸುವವರ್‍ಯಾರು ಹೇಳು
ನಿನ್ನ ಭೂತವ ಕೆದಕಿ
ಭವಿಷ್ಯತ್ತನ್ನು ನಿರ್ಧರಿಸುವವರ್‍ಯಾರು ಹೇಳು
ಇಂದ್ರಾಗ್ನಿ ವರುಣರಂತಹ ದೇವಾನುದೇವರು
ರಾಮ-ರಾವಣಾದಿ ಮಹಾಮಹಿಮರು ತಾನೆ?
ಯುಗ ಯುಗದ 'ಸೀತೆ'ಯರ
ಶೀಲ ಸಚ್ಚಾರಿತ್ರ್ಯಗಳ
ಅಳತೆಗೋಲಾಗಿ ಒರೆಗಚ್ಚುತ್ತಿರುವವರು
ಮೌಲ್ಯಮಾಪಕರಾಗಿ ತರಾತುರಿಯ
ತೀರ್ಪು ನೀಡಿ ಮೀಸೆ ತಿರುವಿ
ಗಹಗಹಿಸುತ್ತಿರುವವರ್‍ಯಾರು ಹೇಳು

(ಲಲಿತಾ ನಾಯಕ್.ಬಿ.ಟಿ, ಬಿದಿರು ಮಳೆ ಕಂಟಿಯಲಿ, ಪುಟ-೦೫)

ಸ್ತ್ರೀಯರು ಎಷ್ಟೇ ಪ್ರತಿಭಾವಂತರಾಗಿದ್ದರೂ, ಕಲಾವಿದರಾಗಿದ್ದರೂ, ಮೇಧಾವಿ ಶಕ್ತಿಯುಳ್ಳವರಾಗಿದ್ದರೂ, ಪುರುಷ ಪ್ರಾಬಲ್ಯದಿಂದ ಅಜ್ಞಾತರಾಗಿಯೇ ಉಳಿಯಬೇಕಾಗಿದೆ. ಈ ವ್ಯವಸ್ಥೆಯೊಳಗೆ ಅಂಥ ಮಹಿಳೆಯರನ್ನು ಗುರುತಿಸಿ, ಗೌರವಿಸುವ, ಪ್ರೋತ್ಸಾಹಿಸುವ ಔದಾರ್ಯ ಮತ್ತು ಹೃದಯ ವೈಶಾಲ್ಯತೆ ಪುರುಷರಿಗಿಲ್ಲ. ಅವರು ಸ್ತ್ರೀಯರನ್ನು ಯಾವತ್ತೂ ತಮಗಿಂತ ಕೆಳದರ್ಜೆಯಲ್ಲಿಯೇ ಇಟ್ಟು ನೋಡುವ ಪ್ರವೃತ್ತಿಯವರಾಗಿದ್ದಾರೆ. ಸ್ತ್ರೀಯರ ಬೌದ್ಧಿಕ ಮತ್ತು ಸಾಂಸ್ಕೃತಿಕ ಬೆಳವಣಿಗೆಯನ್ನು ಹತ್ತಿಕ್ಕುವ ಸಾಧ್ಯತೆಗಳೇ ಹೆಚ್ಚು ಎಂಬುದನ್ನು ಈ ಕವನದಲ್ಲಿ ರೂಪಕಾತ್ಮಕವಾಗಿ ನಿರೂಪಿಸಲಾಗಿದೆ. ಹೆಣ್ಣು ಗಂಡಿನ ಪಂಜರದಿಂದ ಬಿಡುಗಡೆ ಹೊಂದಿ, ಹೊಸ ಜಗತ್ತಿಗೆ, ಹೊಸ ಬದುಕಿಗೆ ತನ್ನದೇ ಆದ ರೆಕ್ಕೆಯ ಮುಖೇನ ಹಾರುವ ಮನಸ್ಸು ಮಾಡಬೇಕೆಂಬ ಆಶಯವನ್ನು ಹೊಂದಿರುವ ಲೇಖಕಿ ಈ ನಿಟ್ಟಿನಲ್ಲಿ ಹೊಸ ಅನಂತ ಸಾಧ್ಯತೆಗಳ, ವಿಸ್ತಾರವಾದ ಅವಕಾಶಗಳ ಬಗೆಗಿನ ನಿರೀಕ್ಷೆ ಮತ್ತು ಬಿಡುಗಡೆಯ ವಿಮೋಚನೆಯ ತುಡಿತವನ್ನು ಧ್ವನಿಯುಕ್ತವಾಗಿ ವಿವರಿಸಿದ್ದಾರೆ.

ಗಂಡ ಪಂಜರದ ಗಿಳಿಯೇ
ನೀ ಬಲ್ಲೆ ಏನೆ ಆಚೆಗಿನ ಕಾನು ಬಾನು?
ಈ ಗೂಡ ಹೊರಗೊಂದು ಜಗವೆಂಬುದುಂಟು
(ಲಲಿತಾ ನಾಯಕ್.ಬಿ.ಟಿ, ಬಿದಿರು ಮಳೆ ಕಂಟಿಯಲಿ, ಪುಟ-೧೪೬)

ಎಂದು ಮದುವೆಯಾದ ಹೆಣ್ಣು ಮಕ್ಕಳು ಗಂಡಸರು ನಿರ್ಮಿಸಿರುವ ಕಟ್ಟುಪಾಡುಗಳ ಪಂಜರದಲ್ಲಿ ಬಂಧಿತಳಾಗಿ ಇರುವುದನ್ನು ಚಿತ್ರಿಸುತ್ತಲೇ ಈ ವರ್ತಮಾನದ ಗಂಡಸರು, ಪುರಾಣದ ಗಂಡಸರಿಗಿಂತ ಭಿನ್ನವಾಗಿಲ್ಲ ಎಂಬುದನ್ನು ಹೇಳುತ್ತಾರೆ. ಇಲ್ಲಿ ಮದುವೆ ಗೆಳತಿಯ ಮಿತಿಗಳು ಎದ್ದು ಕಾಣುತ್ತವೆ. ಬಂಧಿಸಿದ ಗಂಡನ ಸರಳುಗಳು ಮುಖಕ್ಕೆ ರಪ್ಪನೆ ರಾಚುತ್ತವೆ. ಹಾಗಾಗಿ ಕವಯತ್ರಿ ಕಳವಳವನ್ನು ವ್ಯಕ್ತಪಡಿಸುತ್ತ ಬಂಧನದಿಂದ ಮಹಿಳೆಯರನ್ನು ಬಿಡುಗಡೆಗೊಳಿಸಬೇಕೆಂಬ ಛಲ. ಮೂಡಣದ ಗಾಳಿ, ಪಡವಣದ ಕಡಲುಗಳ ಬಗ್ಗೆ ಹೊಸ ಗಾಳಿ, ಹೊಸ ಬೆಳಕುಗಳ ಬಗ್ಗೆ ಅರಿವು ಮೂಡಿಸಬೇಕೆಂಬ ಆಸೆ ಕವಯತ್ರಿಗಿದೆ. ಈ ರೀತಿಯ ಆಸೆಯನ್ನು ಹೊತ್ತ ಲೇಖಕಿ ಹೆಣ್ಣನ್ನು ಪುರುಷ ಪ್ರಧಾನ ವ್ಯವಸ್ಥೆಯ ಶೋಷಣೆಯಿಂದ ಬಿಡುಗಡೆಗೊಳಿಸಿ ಹೊಸ ಜಗತ್ತಿಗೆ ಕರೆದೊಯ್ಯುವ ಆಶಯವನ್ನು ವ್ಯಕ್ತಪಡಿಸುತ್ತಲೆ ಕೊನೆಗೆ

ಮಾವು ಪೇರಲ ಉಂಟು
ಗಿಡುಗ ಬಾವುಗ ಉಂಟು
ನೀನುಂಟು ನಿನ್ನ
ರೆಕ್ಕೆಯುಂಟು
(ಲಲಿತಾ ನಾಯಕ್.ಬಿ.ಟಿ, ಬಿದಿರು ಮಳೆ ಕಂಟಿಯಲಿ, ಪುಟ-೧೪೯)

ಎಂದು ಹೇಳುವ ಮೂಲಕ 'ಅವಳ ಹಣೆ ಬರಹ' ಅವಳ ಕೈಯಲ್ಲಿಯೇ ಇರುವುದನ್ನು ಜ್ಞಾಪಿಸುತ್ತಾರೆ. ಗಂಡ ಪಂಜರದ ಗಿಳಿಯನ್ನು ಉದ್ದೇಶಿಸಿ ಶುರುವಾದ ಮಾತು ಹೊರಗಿನ ಜಗವೆಂಬುದರ ಚಿತ್ರ ಕಟ್ಟಿಕೊಡುತ್ತ ಚಂದ್ರಲೋಕದ ತನಕವೂ ಕರೆದುಕೊಂಡು ಹೋಗಿ ಆ ಕನಸಿನ ಲೋಕದ ಧ್ಯಾನದಲ್ಲಿಯೇ ಅದು ತಲ್ಲೀನವಾಗಲು ಬಿಡದೆ ಗಿಡುಗ ಬಾವುಗ ಉಂಟು ಎಂಬ ಕಟು ವಾಸ್ತವದ ಹೊಳವನ್ನು ಕೊಡುತ್ತದೆ. ಕೊನೆಯ ಎರಡು ಸಾಲುಗಳು-ನೀನುಂಟು ನಿನ್ನ ರೆಕ್ಕೆಯುಂಟು ಇಡೀ ಕವನದ ದಿಕ್ಕನ್ನೇ ಬದಲಿಸಿ ಪಂಜರದ ಗಿಳಿಗೆ ಆತ್ಮಶಕ್ತಿಯ ಸವಾಲಾಗಿ ಅದರ ಬಿಡುಗಡೆಯ ಸಾಧ್ಯತೆಯನ್ನು ತೆರೆದಿಡುತ್ತದೆ.

ಲಲಿತಾ ನಾಯಕ್ ಅವರು 'ಕೇಳಿ ಮಾನಿನಿಯರೇ' ಎಂಬ ಕವನದಲ್ಲಿ ಪಿತೃಪ್ರಧಾನ ವ್ಯವಸ್ಥೆ ಮಹಿಳೆಗೆ ತೊಡಿಸಿರುವ ಹಲವು ರೀತಿಯ ಸಂಕೋಲೆಗಳನ್ನು ಒಡೆದು ಹಾಕುವಂತೆ ಗಟ್ಟಿ ಧ್ವನಿಯಲ್ಲಿ ಕರೆಕೊಡುತ್ತಾರೆ. ಸ್ತ್ರೀಯರು ಅಜ್ಞಾನವೆಂಬ ಕತ್ತಲನ್ನು ಇಲ್ಲವಾಗಿಸಿ, ಒಮ್ಮುಖ ಆಲೋಚನೆಗಳಿಂದ ಹೊರಬರಬೇಕೆಂಬ ನಿರ್ದೇಶನ ನೀಡುತ್ತಾರೆ.

ಕೇಳಿ ಕೇಳಿ ಸೋದರಿಯರೇ
ನಮ್ಮ ಕಣ್ಣಪಟ್ಟಿ ನಾವೇ ಬಿಚ್ಚಬೇಕಿದೆ
ಕೇಳಿ ಕೇಳಿ ಮಾನಿನಿಯರೇ
ನಮ್ಮ ಕೈಯ್ಯ ಬೇಡಿ ನಾವೇ ಕಳಚ ಬೇಕಿದೆ
ತುಳಿತದಲ್ಲಿ ಸಿಲುಕಿ ನಾವು
ಹಲವು ತೆರದಿ ಬವಣೆಯನ್ನು ಪಡುತಿರಲು
ಕಷ್ಟನಷ್ಟ ಹೀನತನವು
ನಮ್ಮ ಮುತ್ತಿ ಕಾಡುತಿರಲು
ಯಾರು ಬರರು ಕೇಳಿ ನಿಜದಿ
------------------
-----------------
ಜಾರೆ-ಜಾಣೆಯರೆಲ್ಲ ನಾವೇ
ಶೋಷಣೆಯ ಮೂಲ ರೂಪ ತಿಳಿಯ ಬೇಕೆಲೆ
ಬರಿದೆ ಅಂದ ಚಂದ ನಗವು
ಆಸ್ತಿ ಎಂಬ ಭ್ರಮೆಯು ಬೇಡ
ವಿಚಾರ ಬೆಳಕಿನತ್ತ ನಮ್ಮ
ಹೆಜ್ಜೆ ಇಟ್ಟು ಮುಂದೆ ನಡೆವಾ
(ಲಲಿತಾ ನಾಯಕ್.ಬಿ.ಟಿ, ಬಿದಿರು ಮಳೆ ಕಂಟಿಯಲಿ, ಪುಟ-೧೪೫)

ಅಲಂಕಾರದ ಪ್ರದರ್ಶನ ವಸ್ತುವಾಗಿ ಕ್ಷುಲ್ಲಕವಾದ, ತಾತ್ಕಾಲಿಕ ಸುಖಕ್ಕೆ ಮರುಳಾಗಿ ಸ್ತ್ರೀ ಶೋಷಣೆಯನ್ನು ನಿರಂತರವಾಗಿಸಲು, ಸ್ತ್ರೀಯರು ದಾರಿ ಮಾಡಿಕೊಡದೆ ಕ್ಷುಲ್ಲಕ ಆಸೆಗಳಿಂದ ದೂರವಾಗಿ ಸ್ತ್ರೀ ವಿಮೋಚನೆಗೆ ಶ್ರಮಿಸಬೇಕೆಂದು ಸ್ತ್ರೀ ಸಮುದಾಯಕ್ಕೆ ಕವಯತ್ರಿ ಕರೆ ನೀಡುತ್ತಾರೆ.

ಮಾಲತಿ ಪಟ್ಟಣಶೆಟ್ಟಿಯವರು 'ಸ್ವಾತಂತ್ರ್ಯ' ಎಂಬ ಕವನದಲ್ಲಿ ಮಹಿಳೆಯರ ಪರತಂತ್ರ್ಯ ಅಧೀನತೆಯನ್ನು ಸಮರ್ಪಕವಾಗಿ ಪ್ರತಿಮೆ ರೂಪಕಗಳ ಮೂಲಕ ದಾಖಲಿಸಿದ್ದಾರೆ. ಈ ಸಾಮಾಜಿಕ ವ್ಯವಸ್ಥೆಯ ಪರಂಪರಾಗತ ಮೌಲ್ಯಗಳು ಸಾಂಪ್ರದಾಯಿಕ ಪದ್ಧತಿಗಳ ನೆಪದಲ್ಲಿ ಹೆಣ್ಣಿಗೆ ತೊಡಿಸಿರುವ ಸಂಕೋಲೆಗಳು ತುಂಬ ಗಟ್ಟಿಯಾಗಿವೆ ಎಂಬುದನ್ನು ಪ್ರತಿಮಾತ್ಮಕವಾಗಿ ನಿರೂಪಿಸಲಾಗಿದೆ.

ನಮ್ಮ ಕಣ್ಣು ತೆರೆದಾಗ
ಏನಿತ್ತು ಇಲ್ಲಿ?
ಬಟ್ಟಬಯಲಿತ್ತು, ನಟ್ಟ ನಡುವಿತ್ತು ಒಣ
ವೃಕ್ಷ, ಸುತ್ತಿ ದಾಯಾದಿ ಮುಳ್ಳುಬೇಲಿ!
ಕೊನರಿಗೊಂದೊಂದು ಕೊಡಲಿ
ಬೇರಿನಾಳವ ನುಂಗುವ ಗೆದ್ದಲಿ
ಬೇಲಿ ಹಾರಲು ಕಾಯ್ದ ಕೆಂಗಣ್ಣ ಗೂಳಿ!

(ಮಾಲತಿ ಪಟ್ಟಣ ಶೆಟ್ಟಿ, ತಂದೆಯ ಬದುಕು ಗುಲಾಬಿ, ಪು-೬)

ಈ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣು ಸ್ವಾತಂತ್ರ್ಯವನ್ನು ಕಳೆದುಕೊಂಡು ಬಂಧಿತಳಾಗಿದ್ದಾಳೆಂಬುದನ್ನು ಸಮರ್ಥವಾಗಿ ಧ್ವನಿಸುತ್ತದೆ. ಇಲ್ಲಿನ ಮುಳ್ಳು, ಬೇಲಿಗಳು ಮಹಿಳೆಯರನ್ನು ಬಂಧಿಸಿರುವ ಪರಂಪರಾಗತ ಮೌಲ್ಯಗಳನ್ನು ಸಂಕೇತಿಸುತ್ತವೆ. ಕೊಡಲಿ, ಗೆದ್ದಲಿ ಮತ್ತು ಕೆಂಗಣ್ಣ ಗೂಳಿ, ಹೆಣ್ಣಿನ ಭೌತಿಕ ಹಾಗೂ ಬೌದ್ಧಿಕತೆಯನ್ನು ಹತ್ತಿಕ್ಕುವ ಪುರುಷ ಪ್ರಧಾನತೆಯ ಹುನ್ನಾರಗಳನ್ನು ಧ್ವನಿಪೂರ್ಣವಾಗಿ ಅಭಿವ್ಯಕ್ತಿಸುತ್ತದೆ.

ಹೆಣ್ಣಿನ ಬದುಕಿನ ಸುತ್ತಲೂ ಇಲ್ಲಸಲ್ಲದ ಪಾತಿವ್ರತ್ಯದ ಮೌಲ್ಯಗಳನ್ನು, ಕೆಲವು ಹುನ್ನಾರಗಳನ್ನು ನಿರ್ಮಿಸಿ ಸ್ತ್ರೀ ಸಮುದಾಯವನ್ನು ನಿಯಂತ್ರಿಸಲಾಗಿದೆ. ಇದರ ಅರಿವು ಮಹಿಳೆಯರಿಗೂ ಅರಿವಿಲ್ಲದಂತೆ ಅನುಸರಿಸುವ ಬಲೆಯನ್ನು ಈ ಪುರುಷ ಪ್ರಧಾನ ವ್ಯವಸ್ಥೆಯು ಹೆಣೆದಿದೆ. 'ನಮ್ಮ ಹಾಡು' ಎಂಬ ಕವನದಲ್ಲಿ ಪ್ರಾಚೀನ ಕಾಲದಿಂದಲೂ ಈ ಶೋಷಣೆ ನಿರಂತರವಾಗಿ ನಡೆಯುತ್ತಿದೆ ಎಂಬುದನ್ನು ವಿಷಾದದ ನೆಲೆಯಲ್ಲಿ ದಾಖಲಿಸಿದ್ದಾರೆ.

ಇವರಿಗಾಗಿ ನನ್ನ
ರಾತ್ರಿಗಳ ಕೊಟ್ಟು
ಕನಸುಗಳ ಕೊಟ್ಟು

ಕಣ್ಣನ್ನೇ ಕೊಟ್ಟು
ಅಂದಳಾಗಬೇಕು
ಇವರಿಗಾಗಿ ನನ್ನ
ಎಲ್ಲ ಸಮರ್ಪಣೆ ಮಾಡಿ
ಸುಟ್ಟು ಇಲ್ಲವಾಗುತ್ತ
ಸತ್ತು ಸಾಯಲು ಮತ್ತೆ
ಹುಟ್ಟಬೇಕು ಸೀತಾ ಸಾವಿತ್ರಿ
ಪಟ್ಟ ಪಡೆಯ ಬೇಕು

ಪುರುಷ ಪ್ರಧಾನ ವ್ಯವಸ್ಥೆಯು ಸಮಾಜದ ಒಳಗೆ ತಮ್ಮ ಸಹಜ ಭಾವನೆಗಳನ್ನೂ ಅಭಿವ್ಯಕ್ತಿಗೊಳಿಸದೆ ದುಃಖ, ಕೋಪ, ಅಳು, ಶೋಷಣೆಯನ್ನು ಮನಸ್ಸಿನಲ್ಲಿಯೇ ಅದುಮಿಟ್ಟುಕೊಂಡು ಪ್ರಸನ್ನತೆಯಿಂದ ಬಾಳಬೇಕಾಗುತ್ತದೆ. ಇಷ್ಟವಿಲ್ಲದ ರಾತ್ರಿಗಳನ್ನು ಸಹಿಸಿಕೊಳ್ಳಬೇಕು. ತಮ್ಮ ಆಶೋತ್ತರಗಳನ್ನು ಬದಿಗೊತ್ತಿ ಗಂಡಿನ ಶ್ರೇಯಸ್ಸಿಗಾಗಿ ಸದಾ ಶ್ರಮಿಸಬೇಕಾಗುತ್ತದೆ. ಇದೆಲ್ಲವೂ ಸೀತೆ ಸಾವಿತ್ರಿಯರ ಪಟ್ಟಕ್ಕಾಗಿ. ಹೀಗೆ ಕನಿಷ್ಟ ಸ್ವಾತಂತ್ರ್ಯವೂ ಇಲ್ಲದ ಪಟ್ಟ ತಮಗೆ ಬೇಕಿಲ್ಲವೆಂದು ಕವನದ ಕೊನೆಯಲ್ಲಿ ಕವಯತ್ರಿ ಸ್ತ್ರೀ ಸ್ವಾತಂತ್ರ್ಯಕ್ಕಾಗಿ ಹಂಬಲಿಸಿದ್ದಾರೆ. ಮಹಿಳೆಯರು ಪುರುಷನ ಕಪಟತನಗಳನ್ನು ಅರಿತು ತನ್ನ ದಾರಿಯನ್ನು ತಾನೇ ಕಂಡುಕೊಳ್ಳಬೇಕೆಂದು ಕಿವಿಮಾತನ್ನು ಹೇಳಿದ್ದಾಳೆ.

ದೋಚಿಕೊಂಡಿದ್ದವರನ್ನು
ಪಕ್ಕಕ್ಕೆ ಸರಿಸರಿಸಿ
ನನ್ನ ದಾರಿಯನು ನಾ
ಕಂಡುಕೊಳ್ಳಬೇಕು
(ಮಾಲತಿ ಪಟ್ಟಣ ಶೆಟ್ಟಿ, ತಂದೆಯ ಬದುಕು ಗುಲಾಬಿ, ಪು–೧೮–೧೯)

ಬಹುತೇಕ ಎಲ್ಲಾ ಸ್ತ್ರೀವಾದಿಗಳು ಮಹಿಳೆಯರ ಜೀವನವನ್ನು ಸುಧಾರಿಸುವ ಹಾಗೂ ಶೋಷಣೆಯಿಂದ ಮುಕ್ತಿಗೊಳಿಸುವ ಆಶಯವನ್ನು ಹೊಂದಿರುವುದನ್ನು ಸ್ಪಷ್ಟವಾಗಿ ತಿಳಿಯುತ್ತದೆ. ಮಹಿಳೆಯರು ಪುರುಷರ ದಾಸ್ಯದಿಂದ ಬಿಡುಗಡೆಗೊಂಡು ಸ್ವಾವಲಂಬಿಯಾಗಿ ಬದುಕುವಂತಹ ವ್ಯವಸ್ಥೆ ನಿರ್ಮಾಣಗೊಳ್ಳಬೇಕೆಂಬ ಹಂಬಲವು ಈ ಕವಯತ್ರಿಗಿದೆ.

ಗಂಡಾ...ಗಂಡು ವಿಚಾರ ಕವನದಲ್ಲಿ ಪಿತೃಪ್ರಧಾನ ವ್ಯವಸ್ಥೆಯು ಹೆಣ್ಣುಮಕ್ಕಳಿಗೆ ಚಿಕ್ಕ ವಯಸ್ಸಿನಿಂದಲೇ ಪಾತಿವ್ರತ್ಯದ ಮೌಲ್ಯಗಳನ್ನು ಹರಿದು ಕುಡಿಸುತ್ತಾ ಅವಳ ಭೌತಿಕ ಹಾಗೂ ಬೌದ್ಧಿಕತೆಯನ್ನು ಹತ್ತಿಕ್ಕಲಾಗುತ್ತಿದೆ. ಮುಂದೆ ಇಂತಹ ಮೌಲ್ಯಗಳೇ ಗಂಡ ನೀಡುವ ಹಿಂಸೆಯನ್ನು

ಸಹಿಸಿಕೊಂಡು ಗಂಡನೊಂದಿಗೆ ಸಹನೆಯಿಂದ ಬಾಳುವಂತೆ ಮಾಡಿ ಅವಳ ಅಸ್ತಿತ್ವವನ್ನೇ ಇಲ್ಲವಾಗಿಸುತ್ತವೆ ಎನ್ನುವಂತಹ ವಿಚಾರಗಳನ್ನು ಅಭಿವ್ಯಕ್ತಿಸಿದ್ದಾರೆ.

ಹುಟ್ಟೂತ ಬೆನ್ನ ಹತ್ತೈತಿ ಹೆಣ್ಣಿಗೆ
ಗಂಡಾ...ಗಂಡು ವಿಚಾರ
ಮನಗಂಡ ಮಾತೈತಿ
ಜನ ಕಂಡ ನೀತೈತಿ
ಎಲ್ಲಾ ಮನ್ಯಾನ ದ್ವಾಸಿಗೂ ತೂತ
ಎಲ್ಲಾ ಗಂಡರದೂ ಒಂದ ಮಾತ

(ಮಾಲತಿ ಪಟ್ಟಣ ಶೆಟ್ಟಿ, ದಾಹತೀರ........ಪುಟ–೨೬,೨೭)

ಈ ವ್ಯವಸ್ಥೆಯೊಳಗೆ ಬದುಕುವ ಎಲ್ಲಾ ಸಮುದಾಯಗಳ ಮಹಿಳೆಯರ ಬದುಕು ಹಿಂಸೆ, ಶೋಷಣೆಯಿಂದ ಕೂಡಿದ್ದು, ಎಲ್ಲಾ ಪುರುಷರ ಮನೋಭಾವನೆಗಳು ಒಂದೇಯಾಗಿರುತ್ತವೆ ಎಂದು ಹೇಳುತ್ತಾ ಕವನದ ಕೊನೆಯಲ್ಲಿ ತನ್ನೊಳಗೆ ತಾ ಹೆಣ್ಣಾಗಿ, ಹೆಣ್ಣಿಗೆ ಒಳಗಣ್ಣಾಗಿ, ಗಂಡುತನದ ಗಂಡಾ ಹುಟ್ಟಲ್ರಿ ಎನ್ನುವಂತಹ ವಿಷಾದವನ್ನು ವ್ಯಕ್ತಪಡಿಸಿದ್ದಾಳೆ.

ಸ್ತ್ರೀ ಶೋಷಣೆಯ ಮೂಲ ಘಟಕಗಳಲ್ಲಿ ಸತಿಪದ್ಧತಿ ಒಂದಾಗಿದ್ದು, ಇಂತಹ ಅನಿಷ್ಟ ಪದ್ಧತಿಯನ್ನು ನಿರ್ಮೂಲನೆ ಮಾಡಬೇಕೆಂಬುದು ಅನೇಕ ಸ್ತ್ರೀವಾದಿಗಳ ಉದ್ದೇಶವಾಗಿದ್ದು, ವ್ಯವಸ್ಥೆಯ ವಿರುದ್ಧ ಪ್ರತಿಭಟನೆಯನ್ನೂ ಮಾಡಿದ್ದಾರೆ. ಮಾಲತಿ ಪಟ್ಟಣಶೆಟ್ಟಿ ಅವರು 'ಸಹ–ಗಮನ' ಎಂಬ ಕವನದಲ್ಲಿ

ಎಂದಿನಿಂದಲೂ ಸತಿ
ನಾ ಚಿತೆ
ಏರಿದವಳು
ಬದುಕು ಗಂಡನ
ಉರಿ ಹೊತ್ತು
ಸುಟ್ಟು ಕೊಂಡಾಗಲೂ
ಬೂದಿಯಾಗದ ಕೆಂಡ
ಸಿಡಿಲುಗಳ ಉಂಡುಂಡು
ಅಗ್ನಿಧರೆಯಾದವಳು

(ಮಾಲತಿ ಪಟ್ಟಣ ಶೆಟ್ಟಿ, ತಂದೆಯ ಬದುಕು ಗುಲಾಬಿ, ಪು–೪,೫)

ಸತಿ ಸಹಗಮನವನ್ನು ಕೇವಲ ಮೇಲುಸ್ತರದಲ್ಲಿ ನೋಡದೆ ಸಮಸ್ಯೆಯನ್ನು ಚಾರಿತ್ರಿಕ ಹಾಗೂ ಕೌಟುಂಬಿಕ ನೆಲೆಯಲ್ಲಿ ನೋಡಿದ್ದಾರೆ. ಕೆಲವು ಹೆಣ್ಣು ಮಕ್ಕಳು ಸತ್ತ ಪತಿಯೊಂದಿಗೆ ಸಹಗಮನ

ಮಾಡಿದರೆ, ಇನ್ನು ಕೆಲವು ಮಹಿಳೆಯರು ಜೀವಂತವಾಗಿಯೇ ನಿತ್ಯ 'ಅಗ್ನಿಧರೆ'ಯಾಗಿದ್ದಾರೆ. ಎಷ್ಟೆಷ್ಟು ಸಲ ನಗುತ್ತ, ಮುತ್ತನಿಕ್ಕಿದ ಪತಿ, ಒಳಗೆ ಹಾವಾಗಿ ಕಣ್ಣು ಕಚ್ಚಿದ್ದು, ಎಷ್ಟೆಷ್ಟು ಸಲ ನನ್ನ ಮನ ಹೊಕ್ಕು ಸವತಿಯರು ಹಾಡುಹಗಲೇ ಕೊಳ್ಳೆ ಹೊಡೆದದ್ದು ಎಂಬ ಸಾಲುಗಳು ಸತಿಯರ ನಿರಂತರ ಶೋಷಣೆಯನ್ನು ಪ್ರತಿನಿಧಿಸುತ್ತವೆ. ಈ ನಿತ್ಯ 'ಸಹಗಮನ' ಒಮ್ಮೆ ಚಿತೆಯೇರುವುದಕ್ಕಿಂತ ಬಹು ಕ್ರೂರವಾಗಿಯೂ, ಸಹಿಸಲಸಾಧ್ಯವಾಗಿಯೂ ಇರುತ್ತದೆ ಎಂಬ ಭಾವ ಈ ಕವನದಲ್ಲಿದೆ. ಇಂತಹ ಸ್ತ್ರೀ ಶೋಷಣೆಗೆ ಪುರುಷ ಪ್ರಧಾನ ವ್ಯವಸ್ಥೆಯೇ ಕಾರಣ ಎಂಬುದನ್ನು ಕವನದ ಮುಂದಿನ ಸಾಲುಗಳು ಧ್ವನಿಪೂರ್ಣವಾಗಿ ವಿವರಿಸುತ್ತವೆ. 'ಕಳುಹಿದಿರಿ ಪತಿ ಗೃಹಕ್ಕೆ ಹರಸಿ, ಪತಿಯನನುಸರಿಸೆಂದು' ಈ ಅನುಸರಿಸುವ ಪದ್ಧತಿ ಸಾವಿಗೂ ಅನ್ವಯಗೊಂಡು ಸತಿ ಪದ್ಧತಿಗೆ ದಾರಿ ಮಾಡಿಕೊಟ್ಟಿದೆ. ಈ ವ್ಯವಸ್ಥೆ ಅನುಸರಿಸುವ ಪದ್ಧತಿಯನ್ನು ಹೆಣ್ಣಿಗೆ ನೀಡಿ ಅವರಲ್ಲಿನ ಪ್ರತಿಭಟಿಸುವ ಮನೋಭಾವನೆಯನ್ನು ಹತ್ತಿಕ್ಕಿದೆ ಎಂಬುದನ್ನು ಮನಮಿಡಿಯುವಂತೆ ಅಭಿವ್ಯಕ್ತಿಸಿದ್ದಾರೆ.

ವಿವಿಧ ಕಾಲಘಟ್ಟಗಳಲ್ಲಿ ಸ್ತ್ರೀ ಶೋಷಣೆಯ ಸ್ವರೂಪ ಹೇಗಿತ್ತು ಇಂದು ಆಧುನಿಕ ಯುಗದಲ್ಲಿ ಯಾವ ಯಾವ ಸ್ವರೂಪವನ್ನು ತಾಳಿದೆ ಎಂಬುದನ್ನು 'ಸಂಭವಾಮಿ ಯುಗೆ' ಎಂಬ ಕವನದಲ್ಲಿ ಚಿತ್ರಿಸಿದ್ದಾರೆ. ಪ್ರಗತಿಯೊಡಲಲ್ಲಿ, ಕ್ರಾಂತಿ ಮಂಥನದಲ್ಲೂ ತಪ್ಪಿದೆಯೆ ದುರ್ಮರಣ ಪುರುಷ ಕಣದಲಿ ಹೆಣ್ಣಿಗೆ?.. ಎಂಬ ಪ್ರಶ್ನೆಯನ್ನು ಎತ್ತಿದ್ದಾರೆ. ಕವನದ ಮುಂದಿನ ಚರಣಗಳಲ್ಲಿ ಪುರಾಣಗಳ ಕಾಲದಲ್ಲಿ ಮತ್ತು ಇಂದಿನ ವ್ಯವಸ್ಥೆಯಲ್ಲಿ ಹೇಗೆ ಪುರುಷ ದೌರ್ಜನ್ಯಕ್ಕೆ ಬಲಿಯಾಗಿದ್ದಾಳೆಂಬುದನ್ನು ನಿದರ್ಶನಗಳೊಂದಿಗೆ ನಿರೂಪಿಸಲಾಗಿದೆ. ಮಕ್ಕಳೊಂದಿಗೆ ತಾಯಿ ಆತ್ಮಹತ್ಯೆ, ಬೆಂಕಿ ಬಲೆಗಳ ಹೂಡಿ ವಧು ಹತ್ಯೆ, ಶೀಲ ಹರಣ, ಪ್ರೇಮ ಪ್ರಕರಣಗಳಿಗೆ ಭರ್ಜರಿ ಸಾವು ಹೀಗೆ ವ್ಯವಸ್ಥೆಯ ಕ್ರೌರ್ಯಕ್ಕೆ ಸಿಲುಕಿ ನಲುಗಿ ಹೋಗುವ ಮಹಿಳೆಯರ ಸ್ಥಿತಿಯನ್ನು ಪುರುಷ ಚಕ್ರವ್ಯೂಹದಲ್ಲಿ ನಾ ಸಿಕ್ಕ ಏಕಾಕಿ ಅಭಿಮನ್ಯು ಎಂಬ ಪ್ರತಿಮೆಯ ಮೂಲಕ ವ್ಯಕ್ತಪಡಿಸಿದ್ದಾರೆ. ದ್ರೌಪದಿಯ ವಸ್ತ್ರಾಪಹರಣ ಪ್ರಸಂಗವನ್ನೇ ಪ್ರತಿಮೆಯಾಗಿ ಬಳಸಿ ಪ್ರಾಚೀನ ಕಾಲದಲ್ಲಿನ ಸ್ತ್ರೀ ಶೋಷಣೆಯನ್ನು ಚಿತ್ರಿಸಿದ ನಿರೂಪಕಿ. ಇಂದಿನ ಮಹಿಳೆಯರ ರಕ್ಷಣೆಗೆ ಯಾವ ಕೃಷ್ಣರ ಅಗತ್ಯವೂ ಇಲ್ಲವೆಂದು ಸಾರುತ್ತಾರೆ. ಹಾಗೆ ಪುರುಷನ ರಕ್ಷಣೆಯನ್ನು ಅಪೇಕ್ಷಿಸಿದರೆ ಹೆಣ್ಣಿಗೆ ವಿಮೋಚನೆಯೇ ಇಲ್ಲವೆಂಬುದು ಕವಯತ್ರಿಯ ನಿಲುವು. ಆದ್ದರಿಂದ ಮಹಿಳೆಯರು ಸ್ವತಂತ್ರರಾಗಿ ತಮ್ಮ ರಕ್ಷಣೆಯನ್ನು ತಾವೇ ಮಾಡಿಕೊಳ್ಳುವ ಆಶಯವನ್ನು ಕವನದಲ್ಲಿ ವ್ಯಕ್ತಪಡಿಸಿದ್ದಾರೆ.

ಓ ಇನ್ನು ನೋಯಬೇಕಿಲ್ಲ
ಕಾಯಬೇಕಿಲ್ಲ ಯುಗ ಸಂಭವನ ಬಾರಿ
ಪೌರುಷದ ಸಭ್ಯ ಜವಾಬುದಾರಿ
ಈಗ

ನನಗೆ ನಾನೇ ದಾರಿ

ನನ್ನ ಎತ್ತಿಕೊಳ್ಳುವ

ಅವತಾರಿ

(ಮಾಲತಿ ಪಟ್ಟಣ ಶೆಟ್ಟಿ, ತಂದೆಯ ಬದುಕು ಗುಲಾಬಿ, ಪು-೨೨,೨೩)

ಇಲ್ಲಿ ಸ್ತ್ರೀ ಶೋಷಣೆಯನ್ನು ಸಂಯಮದಿಂದ ಕಲಾತ್ಮಕವಾಗಿ ಚಿತ್ರಿಸಿದ್ದಾರೆ. ಸ್ತ್ರೀಯರು ಪುರುಷರ ದಾಸ್ಯದಿಂದ ಬಿಡುಗಡೆಗೊಂಡು ಸ್ವಾವಲಂಬಿಗಳಾಗಿ ಬದುಕುವಂತಹ ವ್ಯವಸ್ಥೆ ನಿರ್ಮಾಣಗೊಳ್ಳಬೇಕೆಂಬ ಹಂಬಲವಿದೆ.

ವಿಜಯ ಸುಬ್ಬರಾಜ್ ಸಮಕಾಲೀನ ಸ್ತ್ರೀವಾದಿಗಳಲ್ಲಿ ಒಬ್ಬರಾಗಿದ್ದಾರೆ. ತ್ರಿಶಂಕು, ಏನು ಹೇಳಲಿ ಗೆಳೆಯ, ಹಾಡೇನಾ ಪಾಡೇನಾ, ಸಖ ಬಾ ಸಂಚಾರಕೆ ಇವರ ಕವನ ಸಂಕಲನಗಳಾಗಿವೆ. ಇವರ ಕಾವ್ಯದಲ್ಲಿ ಸ್ತ್ರೀವಾದಿ ಪ್ರಜ್ಞೆ, ಸ್ತ್ರೀಪರ ಕಾಳಜಿಗಳು ತೀವ್ರವಾಗಿವೆ. 'ಏನು ಹೇಳಲಿ ಗೆಳೆಯ' ಎಂಬ ಕವನದಲ್ಲಿ ಕುಟುಂಬವು ಹೆಣ್ಣಿನ ನೆಮ್ಮದಿ, ಸುಖಗಳಿಗೆ ಮಾರಕವಾಗಿರುವುದನ್ನು ಚಿತ್ರಿಸುತ್ತಾ ಗಂಡ ಎನ್ನುವವ ಅವಳ ಪಾಲಿಗೆ ರಾಕ್ಷಸನಾಗಿದ್ದಾನೆ ಎಂಬುದನ್ನು ಈ ಕವನದಲ್ಲಿದೆ. ವ್ಯಕ್ತಪಡಿಸಿದ್ದಾರೆ.

ಗಂಡನ ವಿಚಾರವೆ?

ಬೆಳಗಿನಿಂದ ಬೈಗಿನವರೆಗೆ

ಕಿರಿಕಿರಿಯ ಕಂಪೆ

ಮನೆಯೊಂದು ಮುಕ್ಕಾದ ಹಾಳು ಕೊಂಪೆ

ನಮ್ಮಿಬ್ಬರ ನಡುವೆ ಹರಿಯುವುದಿಲ್ಲ

ಹಾಲು ಜೇನಿನ ಹೊಳೆ

(ವಿಜಯ ಸುಬ್ಬರಾಜ್. ಏನು ಹೇಳಲಿ ಗೆಳೆಯ, ಪುಟ-೪)

ಪ್ರೀತಿ, ಪ್ರೇಮ, ವಾತ್ಸಲ್ಯ, ಶಾಂತಿ, ನೆಮ್ಮದಿ, ನೆಲೆಸಬೇಕಾಗಿರುವ ಕುಟುಂಬ 'ಮುಕ್ಕಾದ ಹಾಳು ಕೊಂಪೆ'ಯಾಗಿರುವುದರ ದುರಂತವನ್ನು ಈ ಕವನದಲ್ಲಿ ಹೇಳಲಾಗಿದೆ. ಪುರುಷರ ಶೋಷಕತನದ ಬಗ್ಗೆ ಕವಯತ್ರಿ ವಿಷಾದವನ್ನು ವ್ಯಕ್ತಪಡಿಸಿದ್ದಾಳೆ. ಇದಕ್ಕೆ ಪೂರಕವಾದ ಇನ್ನೊಂದು ಕವನ 'ಗಂಡು' ಪುರುಷ ಪ್ರಧಾನ ವ್ಯವಸ್ಥೆಯ ಸಮಾಜದಲ್ಲಿ ಗಂಡು ಮಹಿಳೆಯನ್ನು ಸದಾ ಹಿಂಸಿಸುವ, ಶಿಕ್ಷಿಸುವ ನರಭಕ್ಷಕನಾಗಿದ್ದಾನೆ ಎಂಬುದನ್ನು ಪ್ರತಿಧ್ವನಿಸುತ್ತದೆ.

ಇದೊಂದು ಮಿಶ್ರತಳಿಯ

ವಿಚಿತ್ರ ಪ್ರಾಣಿ

ಗುಮ್ಮನ ಗುಸುಕಾಗಿದ್ದು

ಗಳಿಗೆ ಬಂದಾಗ

ಹೆಡೆ ಬಿಚ್ಚಿ ಬುಸುಗುಡುತ್ತದೆ
ಊರ ಮಂದಿಯ ಮುಂದೆ
ಗೋಣು ಹಾಕುತ್ತಾ
ಬಾಲ ಕುಣಿಸುತ್ತಾ
ಸಾಚಾತನದ ಸಿಪಾಯಿಯಾಗಿ
ಅಂಗಳದ ಅಡ್ಡಗೆರೆ ತುಳಿದಂತೆ
ಕೆರಳುತ್ತದೆ ಗೌಸಿನರ ಮರೆಯ
ದೂರ್ತ ಬುದ್ದಿ

(ವಿಜಯ ಸುಬ್ಬರಾಜ್. ಏನು ಹೇಳಲಿ ಗೆಳೆಯ, ಪುಟ-೬೨,೬೩)

ಗಂಡು ಹೆಣ್ಣಿನ ಬಗೆಗೆ ತೋರಿಸುವ ಪ್ರೀತಿ ಪ್ರೇಮಗಳೆಲ್ಲವೂ ಸ್ವಾರ್ಥ ಪ್ರೇರಿತವಾದ ನಟನೆಗಳು. ಇಂಥ ಸೋಗಿನ ಮೂಲಕ ತನ್ನ ಲೈಂಗಿಕ ತೃಷೆ ತೀರಿಸಿ ಕೊಳ್ಳುವುದಲ್ಲದೆ ಹೆಣ್ಣನ್ನು ತನ್ನ ಸೇವಕಿಯನ್ನಾಗಿ ಮಾಡಿಕೊಂಡಿದ್ದಾನೆ. ಆದ್ದರಿಂದ ಗಂಡಸರ ಈ ಹುನ್ನಾರಗಳಿಗೆ ಸ್ತ್ರೀಯರು ಬಲಿಯಾಗಬಾರದೆಂಬ ಎಚ್ಚರಿಕೆಯನ್ನು ಕವನದ ಮೂಲಕ ನೀಡಿದ್ದಾರೆ.

'ಮದುವೆ ಮಾಡಿದರೋ ನನಗೆ' ಎಂಬ ಕವನದಲ್ಲಿ ಗಂಡ ಸಂಪ್ರದಾಯ, ಮೌಢ್ಯಗಳ ಆರಾಧಕನಾಗಿ, ಹೆಂಡತಿಯನ್ನು ಸೇವಕಿ ಇಲ್ಲವೆ ಗುಲಾಮಳನ್ನಾಗಿ ಮಾಡಿ, ಅವಳ ಅಸ್ತಿತ್ವವನ್ನೆ ಇಲ್ಲವಾಗಿಸಿದ್ದಾನೆ ಎಂಬುದನ್ನು ಅಭಿವ್ಯಕ್ತಿಸಲಾಗಿದೆ.

ಗಂಡೆಂಬ ಗುರುವಂಗೆ
ಕೆಂಡದೊಲೆ ಉರಿವಂಗೆ
ಹೆಂಡತಿಯೆಂದರೆ-ಹೆಡೆಯುಡಿಗೆ ಹಾವಂಗೆ
ಇರಬೇಕೆಂತ ಸಾರುವಂಗೆ
ಸ್ತ್ರೀಮುಕ್ತಿ ಸ್ತ್ರೀಯುಕ್ತಿ
ಸಲ್ಲದೆಂದೆನುವಂಗೆ
ಪತಿಭಕ್ತಿ ಪರಮಾರ್ಥ ಬೋಧಿಪಂಗೆ
ವಿರಸದಲಿ ಬಿರುಸಾಗಿ ಬಿಗಿದು
ಮಲಗಿ ಮುಸುಕೊದ್ದವಂಗೆ
ಮದುವೆ ಮಾಡಿದರೊ

(ವಿಜಯ ಸುಬ್ಬರಾಜ್. ಏನು ಹೇಳಲಿ ಗೆಳೆಯ, ಪುಟ-೨೦)

ಇಲ್ಲಿನ ಗಂಡು ಪತಿ-ಪತ್ನಿ ಸರಸವನ್ನಾಗಲಿ, ಪತಿಯ ಭಾವನೆ, ಆಸೆ ಆಕಾಂಕ್ಷೆಗಳನ್ನಾಗಲಿ ಗಣನೆಗೆ ತೆಗೆದು ಕೊಳ್ಳುವುದಿಲ್ಲ. ಹೆಂಡತಿಯಲ್ಲಿ ಪತಿಭಕ್ತಿ, ಪಾತಿವ್ರತ್ಯ, ಪಾವಿತ್ರ್ಯಗಳನ್ನು ಅಪೇಕ್ಷಿಸುವ

ಸನಾತನವಾದಿ ಹೆಂಡತಿಯಾದವಳು ಸ್ವಾತಂತ್ರ್ಯ, ಸಮಾನತೆ, ಸ್ತ್ರೀ ಮುಕ್ತಿ ಮುಂತಾದ ವೈಚಾರಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡರೆ ಈ ಗಂಡು ಸಹಿಸಲಾರ. ಇಂತಹ ಗಂಡನಿಗೆ ಹೆಂಡತಿಯಾಗಿರುವವಳ ಸ್ಥಿತಿ ಕರುಣಾಜನಕವಾಗಿರುತ್ತದೆ ಎಂಬ ವಿಷಾದ ಕವಯತ್ರಿಯದ್ದಾಗಿದೆ.

ಷರೀಪಾ ಕೆ. ಅವರು ಕನ್ನಡ ಸ್ತ್ರೀವಾದಿ ಲೇಖಕಿಯರಲ್ಲಿ ಒಬ್ಬರಾಗಿದ್ದು, ಮುಸ್ಲಿಂ ಸಮುದಾಯದ ಪುರುಷ ಪ್ರಧಾನ ಧಾರ್ಮಿಕ ವ್ಯವಸ್ಥೆಯಲ್ಲಿ ಮಹಿಳಾ ಶೋಷಣೆಯನ್ನು ತಮ್ಮ ಕಾವ್ಯದಲ್ಲಿ ಸಮರ್ಥವಾಗಿ ಹಿಡಿದಿಟ್ಟಿದ್ದಾರೆ. ಈ ದೃಷ್ಟಿಯಿಂದ ಅವರ 'ಬುರ್ಖಾ ಪ್ಯಾರಡೈಸ್' ಕವನ ಸಂಕಲನದ ಅತ್ಯಂತ ಮುಖ್ಯವೆನಿಸುತ್ತದೆ. ಗುಡಿಯ ಎಂಬ ಕವನ ಅತ್ಯಂತ ಮುಖ್ಯವಾದದ್ದು. 'ಗುಡಿಯಾ ಆಟದ ಬೊಂಬೆಯಲ್ಲ ಜೀವಂತ ಕವಿತೆ' ಎಂಬ ಮೊದಲ ಸಾಲು ಇಡೀ ಕವನದ ಧ್ವನಿಯಂತಿದೆ. ನಾಪತ್ತೆಯಾದ ಪತಿಗಾಗಿ ಕನಸು ಕಟ್ಟುತಾ ಕಾದು ಬಳಲಿದ ಗುಡಿಯಾ ಆತನಿಗೆ ವಿದಾಯ ಹೇಳಿ ಮನದ ಬಾಗಿಲಿಗೆ ಬೀಗ ಜಡಿದು ಮೌನವಾಗಿ ವಿರಹಗೀತೆ ಬಿಕ್ಕುತ್ತಾಳೆ. ಬಳಿಕ ಹಿರಿಯರ ಆಜ್ಞೆಯಂತೆ ಇನ್ನೊಬ್ಬನನ್ನು ಮದುವೆಯಾದ ಗುಡಿಯಾ ಗರ್ಭಿಣಿಯಾಗುತ್ತಾಳೆ. ಆದರೆ ಅದೇ ಹೊತ್ತಿಗೆ ಆಕೆಯ ಎದುರು ಮೊದಲ ಗಂಡ ಬಂದು ನಿಲ್ಲುತ್ತಾನೆ. ಈಗ ಗುಡಿಯಾ 'ರಬ್ಬೇ ವಿಪತ್ತಿನಿಂದ ಪಾರುಮಾಡು' ಎಂದು ದೇವರಿಗೆ ಮೊರೆ ಹೋಗುತ್ತಾಳೆ. ಆದರೆ ಜಮಾತೆ ಹೊಟ್ಟೆಯಲ್ಲಿದ್ದ ಮಗುವನ್ನು ಕಿತ್ತು ಮೊದಲ ಗಂಡನ ಬಳಿ ಹೋಗು ಎಂದು ಆದೇಶಿಸುತ್ತದೆ. ಈ ಸಂದರ್ಭದಲ್ಲಿ ಲೇಖಕಿ ಗುಡಿಯಾಗೆ ಕೊಡುವ ಕರೆ ಮುಸ್ಲಿಂ ಸಮುದಾಯದ ಪುರುಷ ಪ್ರಧಾನ ವ್ಯವಸ್ಥೆಯನ್ನು ಪ್ರಶ್ನಿಸುತ್ತದೆ.

ಹೆಣ್ಣಿನ ಮಾತೃತ್ವ ಆಟದ ವಸ್ತುವೇನು
ನಿಷೇಧದ ಬೇಲಿಗಳ ಕಿತ್ತೆಸೆದು
ಸೊಕ್ಕಿದ ಕೊಕ್ಕುಗಳ ತುಂಡರಿಸಿ
ಶಕ್ತಿ ಒಗ್ಗೂಡಿಸಿ ಎದ್ದು ನಿಲ್ಲು ಬಾ ಗುಡಿಯಾ
ಬದುಕು ಮಾಧ್ಯಮದ ವಿಷಯವಲ್ಲ
ಚಪ್ಪರಿಸುವ ರಂಗುರಂಗಿನ ಸುದ್ದಿಯಲ್ಲ

(ಷರೀಫಾ.ಕೆ. ಬುರ್ಖಾ ಪ್ಯಾರಡೈಸ್, ಪುಟ-೨೬)

'ಗುಡಿಯಾ ನಿನ್ನದೇ ನಿರ್ಧಾರ ಹೇಳು ಬಾ' ಎಂದು ಕರೆಕೊಡುವ ಕವಯತ್ರಿ ಧಾರ್ಮಿಕ ಮೂಢತ್ವವೊಂದು ಹೆಣ್ಣಿನ ಬದುಕಿನೊಂದಿಗೆ ಆಟವಾಡುವುದನ್ನು ವಿರೋಧಿಸುತ್ತಾರೆ. ಇದರೊಂದಿಗೆ ಹೆಣ್ಣಿನ ನೋವನ್ನು ಕರಗಿಸಬಲ್ಲ ದೇವರ ಬರುವಿಕೆಯ ಹಾರೈಕೆಯು ಇದೆ. ಗುಡಿಯಾ ಕವನವು ಒಬ್ಬ ಗುಡಿಯಾಳ ಕತೆಯಾಗದೆ ಒಂದು ಸಮುದಾಯದಲ್ಲಿ ಪುರುಷ ಪ್ರಧಾನ ಧಾರ್ಮಿಕ ವ್ಯವಸ್ಥೆಯಲ್ಲಿ ಶೋಷಣೆಗೊಳಗಾಗುವ ಹೆಣ್ಣು ಮಕ್ಕಳ ಕತೆಯಾಗುತ್ತದೆ.

'ಬುರ್ಖಾ ಪ್ಯಾರಡೈಸ್' ಕವನವು ಸಮುದಾಯವೊಂದು ತಮ್ಮ ಮಹಿಳೆಯರನ್ನು ಬಾಳಿಸುವ ಬಗೆ ಮತ್ತು ವ್ಯಾಪಾರಿ ಮನೋಭಾವದಲ್ಲಿರುವ ಸ್ವಾರ್ಥವನ್ನು ಅನಾವರಣಗೊಳಿಸುತ್ತದೆ.

ಪಾಚಿ ಬಿಚ್ಚಿಕೊಂಡಿದೆ ಚಾದರದಲಿ
ಜಡ್ಡುಗಟ್ಟಿದ ಪಳೆಯುಳಿಕೆಗಳು
ಮನ ಮೋಹಕ ತಂತ್ರಗಳಲ್ಲಿ
ಹುದುಗಿಕೊಂಡಿದೆ ವ್ಯಾಪಾರಿವೃತ್ತ
ಲಾಭಗಿಟ್ಟಿಸಲು ಬಂಡವಾಳಕೆ
ವಿನೂತನ ಪ್ರಚಾರ ವೈಖರಿ
ಖರೀದಿಗೆ ಆಹ್ವಾನಿಸುತ್ತದೆ
ಬನ್ನಿ ನಿಮ್ಮ ಪ್ಯಾರಡೈಸ್‌ಗೆ
ಬುರ್ಖಾದಾರಿ ಹುಡುಗಿಯರಿದ್ದಾರೆ

(ಷರೀಫಾ.ಕೆ. ಬುರ್ಖಾ ಪ್ಯಾರಡೈಸ್, ಪುಟ-೨)

ಮುಸ್ಲಿಂ ಸಮುದಾಯದಲ್ಲಿ ಮನೆಯ ಮಹಿಳೆಯರನ್ನು ಸಾಂಪ್ರದಾಯಿಕವಾಗಿ ಕಾಣುವ ಪುರುಷ ಸಮಾಜ, ತನ್ನ ಲಾಭಕ್ಕಾಗಿ ಅದೇ ಹೆಣ್ಣು ಮಕ್ಕಳನ್ನು ಬಳಸಿಕೊಳ್ಳುವ ವ್ಯಾಪಾರಿ ಮನೋಭಾವದ ಕುರಿತು ಕವಯತ್ರಿಯ ರೋಷ ವ್ಯಕ್ತವಾಗಿದೆ. ಇದೇ ಸಂಕಲನದ 'ನರಳುತ್ತಿರುವ ಅಸ್ತಿತ್ವ' ಎಂಬ ಕವನದಲ್ಲಿ ಮುಂಜಾನೆಯಿಂದ ಸಂಜೆಯವರೆಗೆ ಮನೆಯಲ್ಲೇ ದುಡಿಯುವ ಮಹಿಳೆಯ ದುಡಿಮೆ ಮನೆಯ ಒಟ್ಟು ಸಂದರ್ಭದಲ್ಲಿ ಮುಖ್ಯವಾಗುವುದಿಲ್ಲ. ಆಕೆ ರಾತ್ರಿಯವರೆಗೆ ದುಡಿಯುವಾಗಲೂ ಉಳಿದದ್ದನ್ನು ಉಣ್ಣಬೇಕಾದ ಅಥವಾ ಉಳಿದೆಲ್ಲವನ್ನು ಉಣ್ಣಬೇಕಾದ ಮುನ್ಸಿಪಾಲಿಟಿ ಡಬ್ಬದ ಹಾಗೆ. ಇದರ ಮಧ್ಯ ಮೌನವಾಗಿ ಅಸ್ತಿತ್ವಕ್ಕಾಗಿ ಅಳುವ ಮನಸ್ಸು.

ಹೊತ್ತು ಹೆತ್ತು ಸಂಕಟ ಸಹಿಸಿ
ಹಂಚಿಕೊಂಡು ರಕ್ತಮಾಂಸ
ತುತ್ತು ಕೊಟ್ಟು ನಡೆನುಡಿ ಕಲಿಸಿ
ಗೇಣುದ್ದದಿಂದ ಮಾರುದ್ದ ಬೆಳೆಸಿದೆ
ಎಲ್ಲಿಯೂ ಕಾಣೆ ನನ್ನ ಅಸ್ತಿತ್ವ

(ಷರೀಫಾ.ಕೆ. ಬುರ್ಖಾ ಪ್ಯಾರಡೈಸ್, ಪುಟ-೧೦)

ಎಂದು ವಿಷಾದವನ್ನು ವ್ಯಕ್ತಪಡಿಸುತ್ತ ಮನೆ, ಕುಟುಂಬ ಎಂಬ ವ್ಯವಸ್ಥೆಯಲ್ಲಿ ಮಹಿಳೆ ಮುಖ್ಯವಾಗಿದ್ದರೂ, ಆಕೆ ಗುರುತಿಸಿಕೊಳ್ಳುವುದು ಮಾತ್ರ ಪುರುಷನ ಮೂಲಕ. ಈ ಸಂಧರ್ಭದಲ್ಲಿ ತನ್ನ ಮೂಲಕವೇ ತನ್ನ ಅಸ್ತಿತ್ವವನ್ನು ಕಾಣುವ ಬಯಕೆ ಹಾಗೂ ಅದು ಅಸಾಧ್ಯವಾದ ಬಗ್ಗೆ ಕವಯತ್ರಿ ಅಸಹಾಯಕತೆಯನ್ನು ವ್ಯಕ್ತಪಡಿಸಿದ್ದಾರೆ.

ವೈದೇಹಿ ಅವರ ಕವಿತೆಯ ಕಾಳಜಿಗಳು ಅವರ ಗದ್ಯ ಬರೆಹಗಳ ಕಾಳಜಿಗಳಿಗಿಂತ ತೀರಾ ಭಿನ್ನವಾದುವೇನಲ್ಲ. ಕಾವ್ಯಮಾರ್ಗಕ್ಕೆ ತಮ್ಮದೇ ಆದ ಭಾಷಿಕ ಮಾದ್ಯಮವನ್ನು ಬಳಸುತ್ತ

ಪ್ರಾರಂಭದಿಂದಲೂ ಅತಿ ಸರಳವಾದ ಅನುಭವಗಳನ್ನು ಅತ್ಯಂತ ಕಲಾತ್ಮಕವಾಗಿ ಹಿಡಿದಿಡಲು ಇವರಿಗೆ ಸಾಧ್ಯವಾಗಿದೆ. ವೈದೇಹಿ ಅವರು ಪರಂಪರೆ ಒಳಗಿನಿಂದ ಕಾವ್ಯಕ್ಕೆ ಉಸಿರು ಕೊಡಲು ಪ್ರಯತ್ನಿಸುತ್ತಾರೆ. ಲೌಕಿಕ-ಅಲೌಕಿಕಗಳ ಸೆಳೆದಾಟ ದೈನಂದಿನ ಬದುಕಿನ ಪ್ರೀತಿಯ ದಿವ್ಯ ಸೆಳೆತಗಳು, ಈ ಸೆಳೆತಗಳ ಆಲಾಪದ ತುಡಿತ ಅವರ ಕಾವ್ಯದಲ್ಲಿ ಅಡಕವಾಗಿದೆ. ಪುರುಷ ಪ್ರಧಾನ ವ್ಯವಸ್ಥೆಗೆ ಪ್ರಬಲವಾದ ಪ್ರತಿಭಟನೆಯ ಧ್ವನಿಗಳು ಇಲ್ಲದಿದ್ದರೂ, ಇವರ ಕಾವ್ಯದಲ್ಲಿ ಸ್ತ್ರೀತ್ವದ ಪ್ರತೀಕಗಳು ಮೈಗೂಡುತ್ತವೆ. ಪುರುಷ ಪ್ರಧಾನ ವ್ಯವಸ್ಥೆಯ ವಂಚನೆ ಅನಾದಿ ಕಾಲದಿಂದಲೂ ನಡೆದು ಬಂದುದನ್ನು ಕೃಷ್ಣನ ಪ್ರತಿಮೆಯ ಮೂಲಕ ಹಾಗೂ ಅದು ಹಗಲಿ ನಷ್ಟು ಸ್ಪಷ್ಟವಿರುವುದನ್ನು ಸೂರ್ಯನ ಪ್ರತೀಕದ ಮೂಲಕ ತಮ್ಮ ಕವನದಲ್ಲಿ

ನಾ
ಈಶ್ವರನೆಂದೆಣಿಸಿ ಕರೆದೆ
ನೋಡಿದರಾತ ಕೃಷ್ಣ
ಜಗದ ನಾರಿಯರೆಲ್ಲ
ತನ್ನ ಮಡದಿಯ ರೆಂದ
ಭಂಡ

(ವೈದೇಹಿ ಅವರೆ ಆಯ್ದ ಕವಿತೆಗಳು, ಪುಟ-೩೨)

ನಮ್ಮ ವ್ಯವಸ್ಥೆಯಲ್ಲಿ ಹೆಣ್ಣು ಹಲವು ರೀತಿಯ ಕುಹಕ, ಹೀಯಾಳಿಕೆ, ಅಪಮಾನ, ಅಪವಾದಗಳಿಗೆ ಗುರಿಯಾಗಿದ್ದಾಳೆ. ಸ್ತ್ರೀಯರ ವಿಚಾರದಲ್ಲಿ ಪುರುಷರು ತೋರಿಸುವ ಪ್ರೀತಿ ಪ್ರೇಮಗಳ ಹಿಂದೆ ಅವರ ಸ್ವಾರ್ಥವಿದೆ. ತಮ್ಮ ವೈಯಕ್ತಿಕ ಲಾಲಸೆಗಳನ್ನು ತೀರಿಸಿಕೊಳ್ಳುವ ಹುನ್ನಾರವಿದೆ ಎಂಬುದನ್ನು ಈ ಕವಿತೆಯ ಮೂಲಕ ವ್ಯಕ್ತಪಡಿಸಿದ್ದಾರೆ.

ಆಧುನಿಕ ಸಂವೇದನೆಗಳಿಗೆ ಹೆಣ್ಣು ಮುಖಾಮುಖಿಯಾಗುವ ಸಂದರ್ಭದಲ್ಲಿ ಭೂತಕಾಲದಲ್ಲಿ ನಡೆದ ದೌರ್ಜನ್ಯಗಳನ್ನು, ಪರಂಪರೆಯ ಮೌಲ್ಯಗಳನ್ನು ನಿರಾಕರಿಸಲು ಲೇಖಕಿಯು ಅಮ್ಮನ ಬಗೆಗಿನ ನೆನಪುಗಳನ್ನು ಬಳಸಿಕೊಂಡದ್ದು ಈ ಕವನದಲ್ಲಿ ಕಂಡುಬರುತ್ತದೆ. ನೆರವೇರದ ಅಮ್ಮನ ಕನಸು, ಅಮ್ಮನನ್ನು ಅಪ್ಪ ಕಂಡ ಬಗೆಗಿನ ತಣ್ಣನೆಯ ರೋಷ, ಇಲ್ಲಿ ನೆನಪುಗಳೇ ಪ್ರತಿಭಟನೆಯ ಸೂಕ್ಷ್ಮ ಎಳೆಗಳಾಗುತ್ತವೆ.

ನನ್ನ ಅಮ್ಮನ ಸೀರೆ
ವೈಲು-ಮಗ್ಗದ ನೂಲು
ಪಟ್ಟೆ ಸೀರೆಗೆ ಪುಟ್ಟ ಪುಟ್ಟ ಕನಸು
ನನಸಾಗುವಾಗ ಅಪ್ಪಯ್ಯನಿಲ್ಲ
ಉಟ್ಟರೂ ಈಗಿಲ್ಲ ಉಡುವ ಮನಸ್ಸು

ಕಳೆದಾ ಹೆಣೀಯ್ತನ್ನುವಳು ಉಡುವ ವಯಸೂ

(ವೈದೇಹಿ ಅವರೆ ಆಯ್ದ ಕವಿತೆಗಳು, ಪುಟ–೬೬)

ಕನಸುಗಳನ್ನು ಕಟ್ಟಿಕೊಂಡು ಈಡೇರಿಸಲಾಗದ ಅಮ್ಮನ ವಿಷಾದ ಇಲ್ಲಿ ಕವಯತ್ರಿಯ ವಿಷಾದವೂ ಆಗಿದೆ. ಇವಳ ಇಡೀ ಬದುಕೇ ಲೌಕಿಕ ಗಂಡನ ಮೌಲ್ಯವನ್ನೇ ಹೊತ್ತು ಅವಳನ್ನು ಶೋಷಿಸುತ್ತದೆ. ಆದರೂ ಹೆಣ್ಣು ತಾಯ್ತಂದೆಗಳ ಮನೆಗೆ ಹೂವು ತರಬೇಕೆಂದು ಕೊನೆಗೂ ಈ ಪತಿಯ–ಗಮನ ಅಂದರೆ ಜೊತೆಯಾಗಿ ನಡೆಯುವುದನ್ನು ಮಾನದಿಂದಲೇ ನಡೆಸುತ್ತಾಳೆ.

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಪುರುಷನ ಪ್ರಾಬಲ್ಯ ಮತ್ತು ಸ್ತ್ರೀಯ ಅಧೀನತೆ ಸಹಜವೆಂಬಂತೆ ರೂಪುಗೊಂಡು ಸರ್ವವ್ಯಾಪ್ತಿಯಾಗಿದೆ. ಸಾಮಾಜೀಕರಣ ಅದನ್ನು ಪೋಷಿಸುತ್ತಾ ಶಾಶ್ವತ ಗೊಳಿಸುತ್ತಾ ಹೋಗುತ್ತದೆ. ಕೇವಲ ಅಭ್ಯಾಸ ಬಲದಿಂದ ಪುರುಷರು ಆಳುವವರಾಗಿ ರೂಪುಗೊಂಡರೆ, ಹೆಣ್ಣು ಅಡಿಗೆಮನೆಗೆ ಸೀಮಿತವಾಗಿ ತನ್ನ ಅಸ್ತಿತ್ವವನ್ನೇ ಇಲ್ಲವಾಗಿಸಿಕೊಂಡಿದ್ದಾಳೆ. ಇದು ಅವಳ ಸಮಾಧಿಯೂ ಆಗಿದೆ ಎಂಬುದನ್ನು 'ಅಡಿಗೆ ಮನೆಯ ಹುಡುಗಿ' ಕವನ ಪ್ರತಿಧ್ವನಿಸುತ್ತದೆ.

ಇವೆಯಂತೆ ತರತರದ ಅರ್ಥ
ಅಡುಗೆ ಮನೆಗೆ–ತರತರದ ಪದಾರ್ಥಗಳಂತೆ
ಆದರೆ ಆ ಹುಡುಗಿಗಂತೂ ಇದೇ
ಇದೇ ಮನೆ ಅಡುಗೆಮನೆ ಆ ಮನೆ ಈ ಮನೆ
ಗಟ್ಟಿ ಕೇಳಿದರೆ ಸ್ಮಶಾನವೂ ಸುಮ್ಮನೆ

ಮಹಿಳೆಯ ಆಸೆಗಳೆಲ್ಲವೂ ಅಡುಗೆ ಮನೆಯ ನಾಲ್ಕು ಗೋಡೆಗಳ ನಡುವೆಯೇ ಮಣ್ಣಾಗುತ್ತವೆ. ಹೆಣ್ಣಿಗೂ ಗಂಡಿನಂತೆಯೇ ಆಸೆ ಆಕಾಂಕ್ಷೆಗಳು ಇರುತ್ತವಲ್ಲ, ಆದರೆ ಈ ಅಡಿಗೆ ಮನೆಗೆ ಹೊರ ಜಗತ್ತಿನ ಸಂಪರ್ಕವೆ ಇಲ್ಲ. ಈ ಮೂಲಕ ಹೆಣ್ಣಿನ ಭೌತಿಕ ಹಾಗೂ ಬೌದ್ಧಿಕ ಕ್ರಿಯೆಗಳನ್ನು ಹತ್ತಿಕ್ಕಿ ನಿರ್ಜೀವ ವಸ್ತುವನ್ನಾಗಿಸಿದೆ ಈ ವ್ಯವಸ್ಥೆಯ ಸಮಾಜ.

ಬಾಗಿಲಿಲ್ಲ ಕಿಟಕಿಯಿಲ್ಲ
ಹೊಗೆನಳಿಗೆಯೂ ಇಲ್ಲ
ಕೊನೆಗೊಂದು ಕಿರು ಕಿಂಡಿಯಾದರೂ...
ಹಂಬಲಿಸುತ್ತಾಳೆ

(ವೈದೇಹಿ ಅವರೆ ಆಯ್ದ ಕವಿತೆಗಳು, ಪುಟ–೩೩)

ಈ ಅಡುಗೆ ಮನೆ ಬರೀ ಅಡುಗೆ ಮನೆಯಾಗಿರದೇ ಸ್ತ್ರೀಯರ ಸೃಜನಶೀಲತೆಗೆ ಅದರ ಕಟ್ಟುಪಾಡುಗಳಿಗೆ ನಿರ್ಮಿಸಿದ ಪ್ರತಿಮೆಯಾಗಿದೆ ಅಡುಗೆಮನೆಯ ಜಗತ್ತಿನಿಂದ ಅವಳು ಹೊರ ಹೋಗಲು ಹಂಬಲಿಸಿದರೂ ದಾರಿಗಳಿಲ್ಲ. ಹೊರ ಜಗತ್ತಿನ ಬದಲಾವಣೆಗಳಿಗೆ ಆಕರ್ಷಿತಳಾದರೂ ಅವಳು ಅಭಾವವೈರಾಗ್ಯವನ್ನು ವ್ಯಕ್ತಪಡಿಸಬೇಕಾಗಿದೆ. ಕುಟುಂಬದ ಒಳಗೆ ಪ್ರಾರಂಭವಾದ ಈ

ರಾಜಕೀಯ ಕುಟುಂಬದ ಹೊರಗಿನ ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕ ಸಾಂಸ್ಕೃತಿಕಗಳಲ್ಲಿಯೂ ಕಾಣಿಸಿಕೊಳ್ಳುತ್ತದೆ. ಇಂತಹ ವ್ಯವಸ್ಥೆಯನ್ನು ಕುರಿತು ಕವಯತ್ರಿ ಅಸಮಧಾನವನ್ನು ವ್ಯಕ್ತಪಡಿಸಿದ್ದಾರೆ.

ಪ್ರತಿಭಾ ನಂದಕುಮಾರ್ ಅವರ ಕಾವ್ಯವನ್ನು ಗಮನಿಸಿದಾಗ ಪುರುಷ ಸಂಸ್ಕೃತಿ ಎಂಬುದು ಒಂದು ನಿಶ್ಚಿತ ಚಹರೆಯನ್ನು ಒಳಗೊಂಡಿದೆಯಾದರೂ, ಪುರುಷ ಹೆಣ್ಣಿನ ಬದುಕಿನಲ್ಲಿ ಎದುರಾಗುವ ಸಂಧರ್ಭಗಳಲ್ಲಿ ವರ್ತಿಸುವ, ಯೋಚಿಸುವ ಕ್ರಮದಿಂದ ಹೆಣ್ಣಿನ ಜಗತ್ತಿಗೆ ಅಪರಿಚಿತನಂತೆ ಕಾಣುತ್ತಾನೆ. ಹಾಗೂ ವ್ಯವಸ್ಥೆಯ ಪರವಾಗಿರುತ್ತಾನೆ. ಈ ಅಂಶಗಳನ್ನು ತಮ್ಮ ಕಾವ್ಯದಲ್ಲಿ ಅಭಿವ್ಯಕ್ತಿಸುವಾಗ ಯಾವುದೇ ಅಡೆತಡೆಗಳನ್ನು ಹಾಕಿಕೊಳ್ಳದೆ ಸ್ಪಷ್ಟವಾಗಿ ಎಲ್ಲವನ್ನು ಹೇಳುವುದರಿಂದ ಅವರ ಕಾವ್ಯ ಇತರ ಸ್ತ್ರೀವಾದಿ ಕವಯತ್ರಿಯರ ಕಾವ್ಯಕ್ಕಿಂತ ಭಿನ್ನವಾಗಿ ಕಾಣುತ್ತದೆ.

ಸ್ತ್ರೀಯರ ಬದುಕು ಬದಲಾವಣೆಯ ಹಂತದಲ್ಲಿದ್ದರೂ, ಜಗತ್ತು ಈಗಲೂ ಪುರುಷರ ಕೈಯಲ್ಲಿದೆ. ಅವರ ಹಕ್ಕುಗಳು ಅಮೂರ್ತವಾಗಿವೆ. ಜಂಡರ್ ಅಸಮಾನತೆ ಮುಂದುವರೆದಿದೆ. ಈ ಪಿತೃಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ವಾಕ್ ಸ್ವಾತಂತ್ರ್ಯವನ್ನು ಸಂಪೂರ್ಣವಾಗಿ ನಿರಾಕರಿಸಲಾಗುತ್ತದೆ ಅಥವಾ ಒಂದು ಮಿತವಾದ ಮಟ್ಟದಲ್ಲಿ ಮಾತ್ರ ನೀಡಲಾಗುತ್ತದೆ ಎಂಬುದನ್ನು ಈ ಕವನ ಧ್ವನಿಸುತ್ತದೆ.

ಹೌದು ಕಣೆ ಉಷಾ
ನಾವು ಹುಡುಗಿಯರೇ ಹೀಗೆ
ಏನೇನೋ ವಟಗುಟ್ಟಿದರೂ ಹೇಳಬೇಕಾದ್ದನ್ನು ಹೇಳದೆ
ಏನೇನೆಲ್ಲ ಅನುಭವಿಸಿ ಸಾಯುತ್ತೇವೆ...

(ಪ್ರತಿಭಾ ನಂದಕುಮಾರ್, ನಾವು ಹುಡುಗಿಯರೇ ಹೀಗೆ, ಪು-೧೭)

ಅಂತರಾಳದ ಮಾತುಗಳು ನೋವಿನೋಪಾದಿಯಲ್ಲಿ ಬಿಚ್ಚಿಡಲಾರದೆ ಪದ್ಯವಾಗಿ ಹೊರ ಹೊಮ್ಮಿವೆ. ಮನಸ್ಸಿನ ಆಸೆ-ಆಕಾಂಕ್ಷೆಗಳನ್ನು ಹೇಳಿಕೊಳ್ಳಲಾರದೆ ವೇದನೆಗಳನ್ನು ತಾಳಲಾರದೆ ಅನುಭವಿಸುವ ಹೆಣ್ಣಿನ ಉತ್ಕಟ ಬಯಕೆಯನ್ನು ಬಿಚ್ಚಿಟ್ಟಿದ್ದಾರೆ.

ಸಾರ್ವತ್ರಿಕವಾದ ಪುರುಷ ಅಹಂ ಅನ್ನು ಸ್ತ್ರೀವಾದವು ಮುಖಾಮುಖಿಯಾಗಿಸಿಕೊಂಡು ಜಿಜ್ಞಾಸೆಗೆ ತೊಡಗುತ್ತದೆ. ಆದರೆ ಪ್ರತಿಭಾ ಅವರು ಗಂಡಸಿನ ಅಹಂ ಅನ್ನು ಮಿಥ್ ಎಂದು ಭಾವಿಸಿ ಅದನ್ನು ಒಡೆಯಲು ಇಚ್ಚಿಸುತ್ತಾರೆ. ಈ ರೀತಿ ಗಂಡಸಿನ ಗರ್ವದ ನಿರಾಕರಣೆ ರೊಮ್ಯಾಂಟಿಕ್ ಆಗುವ ಅಪಾಯ ಇದೆ. ಪ್ರತಿಭಾ ಇದನ್ನು ವಾಸ್ತವದ ನೆಲೆಯಲ್ಲಿಯೇ ನಿರ್ವಚನ ಮಾಡಿಕೊಳ್ಳುತ್ತಾರೆ.

ಪರಮೋಚ್ಚ ಸೌಂದರ್ಯ
ಜೊತೆಗೆ ಗರ್ವ ಕಾರಣ ವೀರ್ಯ
ಉಪಾಸನೆಯ ಸಂತ

ಕಾಮ ವಿಕಾರ ರೂಪ ಹಂತ
ರಜನೀಶ ಸ್ವಂತ
ತಿಳಿಯದ ತಿಳಿ
ತಿಳಿದ ರಾಡಿ

ಆಹಾ, ಪುರುಷಾಕಾರಂ ! ಎನ್ನುವುದು ಪತಂಜಲಿಯ ಯೋಗಿ ಸೂತ್ರದ ಸಾಲು. ಇದು ಸಾಮಾನ್ಯವಾಗಿ ಮನುಷ್ಯ ದೇಹಕ್ಕೆ ಅನ್ವಯಿಸಿ ನುಡಿದ ಉದ್ಗಾರವೆಂದು ಭಾವಿಸುದಾದರೂ, ಗಂಡು ಹೆಣ್ಣಿನ ದೇಹ ರಚನೆಗಳು ಬೇರೆ ಬೇರೆಯಾಗಿರುವುದರಿಂದ ಅದಕ್ಕೆ ಶುದ್ಧಾಂಗವಾದ ಪ್ರಶಂಸೆ ಅನ್ವಯಿಸದೇ, ಗಂಡು ದೇಹ, ಹೆಣ್ಣುದೇಹ ರಚನೆಗಳ ಮೇಲೆ ಉದ್ಗಾರದ ಅರ್ಥ ಬೇರೆ ಬೇರೆಯಾಗುತ್ತದೆ. ಗಂಡಿನ ದೇಹ ಸೌಂದರ್ಯ ಅಹಂಕಾರಕ್ಕೆ ಪೂರಕವಾಗಿ ಬಂದರೆ, ಹೆಣ್ಣಿನ ದೇಹ ಭೋಗ ರೂಪವಾಗಿ ಬರುತ್ತದೆ. ಆಹಾ, ಪುರುಷಾಕಾರಂ. ಎನ್ನುವುದು ಪ್ರತಿಭಾ ಅವರಲ್ಲಿ ವ್ಯಂಗ್ಯ, ವೇಧನೆಯ ದನಿಯಾಗಿ ಬಿಡುತ್ತದೆ. 'ಆಹಾ' ಎನ್ನುವ ಮೆಚ್ಚುಗೆಯನ್ನು ಪಡೆಯುತ್ತಾರೆ.

ಸ್ತ್ರೀ ರೂಪಮೇ ರೂಪಂ
ನಿರ್ದಿಷ್ಟವಾಗಿ
ಪ್ರಣಯ ಮತ್ತ ಸ್ತ್ರೀ ...

(ಪ್ರತಿಭಾ ನಂದಕುಮಾರ್, ಆಹಾ, ಪುರುಷಾಕರಂ! ಪುಟ-೧)

ಸ್ತ್ರೀ ರೂಪವು ಭೋಗಕ್ಕೆ ಹತ್ತಿರವಾಗುವ ದನಿಯನ್ನು ಪ್ರತಿಭಾ ಗುರುತಿಸಿಕೊಳ್ಳುತ್ತಾರೆ. ಹೆಣ್ಣಿನ ಅಂಗಾಂಗಗಳು ಪ್ರತಿಭಾ ಅವರಲ್ಲಿ ವಿಶಿಷ್ಟವಾಗಿ ನಿರಚನೆಗೊಳ್ಳುತ್ತವೆ. ಭೋಗ ಅಥವಾ ತಾಯ್ತನದ ಸಂಕೇತಗಳಾಗಿ ಬರುವ ಹೆಣ್ಣಿನ ಅಂಗಾಂಗಗಳ ಸೌಂದರ್ಯದ ನಿಗೂಢತೆಯನ್ನು ಒಡೆದು ಅಲ್ಲಿರುವ ಕಲ್ಪನೆಯನ್ನೇ ಪ್ರಶ್ನಿಸುತ್ತಾರೆ. ಹೆಣ್ಣಿನ ಸೌಂದರ್ಯದ ಒಪ್ಪಿತ ಮಾನದಂಡಗಳ ಕಲ್ಪನೆಯನ್ನೇ ಒಡೆಯುತ್ತಾರೆ.

ಪುರಾಣಗಳಿಗೆ ವೈಚಾರಿಕತೆಯ ಆಧಾರ, ವೈಜ್ಞಾನಿಕ ವಿವರಣೆ ಇಲ್ಲದಿದ್ದರೂ, ಪುರುಷ ಪ್ರಧಾನ ವ್ಯವಸ್ಥೆ ಮಹಿಳೆಯರ ಮೇಲೆ ಅಗಾಧವಾದ ಪ್ರಭಾವವನ್ನು ಬೀರುವಂತೆ ಮಾಡಿ, ಹೆಣ್ಣಿಗೆ ದ್ವಂದ್ವ ಗುಣಾರೋಪಗಳನ್ನು ಮಾಡಲಾಗಿದೆ. ಒಂದು ಕಡೆ ಪೂಜನೀಯಳು, ದೇವಿ, ನೋವು ನಿವಾರಕಿ, ಕಲಾ ಸೃಷ್ಟಿಕರ್ತೆ ಎಂದು ನೋಡಿದರೆ, ಇನ್ನೊಂದು ಕಡೆ ಮಾಟಗಾತಿ, ರಾಕ್ಷಸಿ, ಪುರುಷನನ್ನು ಹಾಳುಮಾಡುವವಳು ಎಂದು ಚಿತ್ರಿಸಲಾಗುತ್ತದೆ. ಪ್ರತಿಭ ನಂದಕುಮಾರ್ ಅವರ 'ಕ್ಷೇತ್ರಪಾಲ ಸಮರ್ಚಿತಾ' ಎಂಬ ಕವನ ಇದನ್ನು ಸರ್ಮಥವಾಗಿ ಧ್ವನಿಸುತ್ತದೆ.

ಸಲ್ಲದು ಕೋಪ ದೇವಿ ಹೆಣ್ಣಲ್ಲವೇ
ಶಾಂತಳಾಗು ಪ್ರಸನ್ನಳಾಗು ತಾಯಿ

ಅಹಿಗಿರಿ ನಂದಿನಿ ನಂದಿತ ಮೇದಿನಿ
ಸ್ತುತಿಸಿ ಪೂಜಿಸುವ ಅನಿವಾರ್ಯತೆ
ಉಗ್ರಳಾದರೆ ಸುಮ್ಮನೆ ತೊಂದರೆ
ಸಂಹಾರ, ಸುಸ್ತು, ಸಮಾಧಾನ, ಸಂಸಾರ

(ಪ್ರತಿಭಾ ನಂದಕುಮಾರ್, ಕವಡೆಯಾಟ, ಪು-೫೧)

ಪುರುಷನಲ್ಲಿ ಹೆಣ್ಣಿನ ಬಗ್ಗೆ ಬಯಕೆ ಭಯ ಎರಡೂ ಇದ್ದೂ, ಅವುಗಳ ನಡುವೆ ತಾಕಲಾಟವಿದೆ. ಅವಳನ್ನು ತಾಯಿ ಮತ್ತು ಹೆಂಡತಿ ಪಾತ್ರಗಳಲ್ಲಿ ಗುರುತಿಸಲು ಗೊಂದಲ ಪಡುತ್ತಾನೆ. ಇಂತಹ ಸಂಧರ್ಭದಲ್ಲಿ ಪುರುಷ ಪುರಾಣ, ಕಟ್ಟುಕಥೆಗಳನ್ನು ಕಟ್ಟಿ ಅವಳನ್ನು ಅಧೀನಪಡಿಸಿಕೊಂಡು ಹಿಡಿತದಲ್ಲಿಟ್ಟುಕೊಳ್ಳುತ್ತಾನೆ ಎನ್ನುವಂತಹ ಚಿಂತನೆಗಳನ್ನು ಇಲ್ಲಿ ಹೇಳಲಾಗಿದೆ.

ಪದ್ಮಾಶೇಖರ್ ಅವರು ಕನ್ನಡದ ಮತ್ತೊಬ್ಬ ಸ್ತ್ರೀವಾದಿ ಕವಯತ್ರಿಯಾಗಿದ್ದು, ಪಿತೃಪ್ರಧಾನ ವ್ಯವಸ್ಥೆಯಲ್ಲಿ ಹಲವು ನೆಲೆಗಳಲ್ಲಿ ನಡೆಯುವ ಮಹಿಳಾ ಶೋಷಣೆಯನ್ನು ತಮ್ಮ ಕವನಗಳಲ್ಲಿ ದಾಖಲಿಸಿದ್ದಾರೆ. ಇಂಥ ಶೋಷಣೆಯಿಂದ ಮುಕ್ತಗೊಳ್ಳುವ ನಿಟ್ಟಿನಲ್ಲಿ ಮಹಿಳಾ ಸಮುದಾಯಕ್ಕೆ ಇಂಥ ವ್ಯವಸ್ಥೆಯ ವಿರುದ್ಧ ಸೆಟೆದು ನಿಲ್ಲುವಂತೆ ಕಾವ್ಯದ ಮೂಲಕ ಕರೆಕೊಡುತ್ತಾರೆ.

'ದಂಡವಾದವಳು' ಎಂಬ ಕವನದಲ್ಲಿ ಮಹಿಳೆ ತನ್ನ ತವರುಮನೆ ಮತ್ತು ಗಂಡನ ಮನೆ ಈ ಎರಡೂ ಕಡೆಯೂ ಸರಕಿನಂತೆ ಪರಿಗಣಿಸಲ್ಪಡುತ್ತಾಳೆಂಬುದನ್ನು ತಿಳಿಸುತ್ತ, ತವರಿನವರು ಹೆಣ್ಣನ್ನು ಪೋಷಿಸುವುದು ಕೇವಲ ಕರ್ತವ್ಯದ ದೃಷ್ಟಿಯಿಂದ ಮಾತ್ರವೆಂದೂ, ಮದುವೆ ಮಾಡುವುದನ್ನು ಹೆಣ್ಣು ಮಾರಾಟವೆಂದೂ ಭಾವಿಸಿದ್ದಾರೆ.

ಅನಿವಾರ್ಯಕೆಂಬಂತೆ
ನಿನ್ನ ಸ್ವೀಕರಿಸಿ
ಕರ್ತವ್ಯಕೆಂಬಂತೆ
ಪೋಷಿಸಿ, ಬೆಳೆಸಿ
ಕುರಿ ಕೋಳಿಗಳಂತೆ
ಬೆಲೆಯ ನಿಶ್ಚಯಿಸಿ
ಬಿಡುಗಡೆಯ ಪಡೆದವರು
ನಿನ್ನ ವಿಕ್ರೈಸಿ

(ಪದ್ಮಾ ಶೇಖರ್, ಹಕ್ಕಿಯ ಹರಯ, ಪುಟ-೫೦)

ಈ ಕವನದಲ್ಲಿ ಕವಯತ್ರಿ ಪೋಷಕರು ಮತ್ತು ಮಕ್ಕಳ ಸಂಬಂಧವನ್ನು ಹಾಗೂ ಅವರ ಕರ್ತವ್ಯಗಳನ್ನು ವ್ಯಾವಹಾರಿಕ ದೃಷ್ಟಿಯಿಂದ ಮಾತ್ರ ನೋಡಿದ್ದಾರೆ. ಈ ಸಂಬಂಧಗಳ ಆಳದಲ್ಲಿರುವ ಭಾವನಾತ್ಮಕತೆ ಮತ್ತು ಪ್ರೀತಿ ವಿಶ್ವಾಸಗಳನ್ನು ಅರಿಯುವಲ್ಲಿ ವಿಫಲರಾಗಿದ್ದಾರೆ. ಮದುವೆ ಎಂಬುದು ಹೆಣ್ಣಿನ ಬಾಳಿಗೆ ಶೋಷಣಾ ಸಂಸ್ಥೆಯಾಗಿದೆ ಎಂಬುದನ್ನು ಈ ಕವನ ಧ್ವನಿಸುತ್ತದೆ.

"ಹೇಗೆ ನಗಲಿ" ಎಂಬ ಕವನದಲ್ಲಿ ಕವಯತ್ರಿ ಪಿತೃಪ್ರಧಾನ ವ್ಯವಸ್ಥೆಯು ಸಾಮಾಜಿಕ ನೀತಿ, ನಿಯಮಗಳ ಅಡಿಯಲ್ಲಿ ಮಹಿಳೆಯರ ಸ್ವಾತಂತ್ರ್ಯಹರಣ ಮಾಡಿ ಶೋಷಣೆಗೆ ಒಳಪಡಿಸಿದ ರೀತಿಯನ್ನು ಅತ್ಯಂತ ವಿಷಾದದಿಂದ ನಿರೂಪಿಸಿದೆ.

ಇನ್ನೆಲ್ಲಿಯ ನಗು ಗೆಳೆಯ
ನಾನು ನಕ್ಕಾಗ
ನನ್ನ ಮುಗ್ಧತೆಯ ಕೊಳ್ಳೆ ಹೊಡೆದು
ಸಮಾಜ ವಿಧಿ ನಿಯಮ ನಿಷೇಧಗಳಡಿಯಲ್ಲಿ
ನನ್ನ ಮನವ ಹೂತು ಬಿಟ್ಟೆ
----------------
ಪೌರುಷದ ಧ್ವಜವೇರಿಸಿ
ವಿಜಯೋನ್ಮಾದದಲ್ಲಿ
ನನ್ನ ಉಸಿರ ಕಟ್ಟಿಸಿದೆ

(ಪದ್ಮಾ ಶೇಖರ್, ಹಕ್ಕಿಯ ಹರಯ, ಪುಟ–೦೪)

ಸಂಪ್ರದಾಯ, ಸಭ್ಯತೆ ಮತ್ತು ಪಾತಿವ್ರತ್ಯಗಳ ಹೆಸರಿನಲ್ಲಿ ಮಹಿಳೆಯರ ಸುಖ ಸಂತೋಷಗಳನ್ನು ಪುರುಷರು ಕಸಿದುಕೊಂಡಿದ್ದಾರೆಂಬ ಧ್ವನಿ ಈ ಕವಿತೆಯಲ್ಲಿದೆ. ಸಾಮಾಜಿಕ ವಿಧಿನಿಯಮಗಳು ಮಹಿಳೆಯರನ್ನು ಬಂಧಿಸಿವೆ. ಈ ನಿಯಮಗಳ ಹಿಂದೆ ಪುರುಷರ ಸ್ವಾರ್ಥವಿದೆ ಎಂಬುದು ಕವಯತ್ರಿಯ ನಿಲುವು.

ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಯನ್ನು ಶೋಷಕ ಸ್ಥಾನದಲ್ಲಿ ನಿಲ್ಲಿಸಿದ್ದರೂ, ಆ ಶೋಷಕ ಪ್ರವೃತ್ತಿಯ ವಿರುದ್ಧ ಪ್ರತಿಭಟನೆ ವ್ಯಕ್ತಪಡಿಸುವಾಗ ಸಂಯಮವನ್ನು ಕಾಯ್ದುಕೊಳ್ಳಲಾಗಿದೆ. ಪುರುಷರ ವಿರುದ್ಧ ಪ್ರತಿಕಾರ ಮನೋಭಾವವಿಲ್ಲವೆಂಬುದೂ ಕಾವ್ಯದ ವೈಶಿಷ್ಟ್ಯವಾಗಿದೆ. ಪುರುಷ ಪ್ರಧಾನ ವ್ಯವಸ್ಥೆಯ ಕ್ರೌರ್ಯವನ್ನು, ಸ್ತ್ರೀ ಶೋಷಣೆಯ ಹಲವು ಮುಖಗಳನ್ನು ಇಲ್ಲಿ ಕಲಾತ್ಮಕವಾಗಿ ಪರಿಚಯಿಸಲಾಗಿದೆ. ಸ್ತ್ರೀಯರ ಬದುಕಿನ ಹಲವು ಮಗ್ಗಲುಗಳನ್ನು ಅನುಕಂಪ, ಸಹನುಭೂತಿಗಳಿಂದ ಪರಿಶೀಲಿಸಲಾಗಿದ್ದು, ಸ್ತ್ರೀ ಬದುಕಿನ ದುರಂತ ಸ್ಥಿತಿಯು ಕಾವ್ಯದಲ್ಲಿದೆ.

ಕನ್ನಡ ಸ್ತ್ರೀವಾದಿ ಲೇಖಕಿಯರಂತೆಯೇ ತೆಲುಗು ಸ್ತ್ರೀವಾದಿ ಲೇಖಕಿಯರು ಪುರುಷ ಪ್ರಧಾನ ಸಂಸ್ಕೃತಿಯ ಮೌಲ್ಯಗಳನ್ನು ಖಂಡಿಸುವುದು, ಪುರುಷ ಪ್ರಧಾನ ಸಮಾಜದಲ್ಲಿ ನಡೆಯುವ ಸ್ತ್ರೀಶೋಷಣೆಯ ನೆಲೆಗಳನ್ನು ಗುರುತಿಸಿ ಪ್ರತಿಭಟಿಸುವುದು, ಎಲ್ಲಾ ಕ್ಷೇತ್ರಗಳಲ್ಲಿಯೂ ಪುರುಷರ ಪ್ರಾಬಲ್ಯದಿಂದ ಮಹಿಳೆಯರಿಗೆ ಆಗಿರುವ ಅನ್ಯಾಯವನ್ನು ಎತ್ತಿತೋರಿಸುವುದು, ಎಲ್ಲಾ ಕಾಲದಲ್ಲಿಯೂ ಹೆಣ್ಣಿನ ದು:ಸ್ಥಿತಿಗೆ ಈ ವ್ಯವಸ್ಥೆ ಹೇಗೆ ಕಾರಣವಾಗಿದೆ ಎಂಬುದನ್ನು ಕವಿತ್ವೀಕರಿಸಿ ಈ ಎಲ್ಲಾ ರೀತಿಯ ಬಂಧನಗಳಿಂದ ಬಿಡುಗಡೆಗೊಳ್ಳಲು ಮಹಿಳಾ ಸಮುದಾಯಕ್ಕೆ ಕರೆಕೊಟ್ಟಿದ್ದಲ್ಲದೆ ಸ್ತ್ರೀ ಸ್ವಾತಂತ್ರ್ಯ, ಸಮಾನತೆಯ ತತ್ವಗಳನ್ನು ತಮ್ಮ ಕಾವ್ಯದಲ್ಲಿ ಎತ್ತಿಹಿಡಿದಿರುವುದನ್ನು ಕಾಣಬಹುದು.

ತೆಲುಗು ಸಾಹಿತ್ಯದಲ್ಲಿ ಮೊದಲ ಸ್ತ್ರೀವಾದಿ ಲೇಖಕಿ ಎಂದು ಖ್ಯಾತಿ ಪಡೆದಿರುವ ರೇವತಿ ದೇವಿ (ಶಿಲಾಲೊಲಿತ) ಅವರ ಕಾವ್ಯವನ್ನೆ ಮೊದಲು ವಿಶ್ಲೇಷಣೆಗೆ ಒಳಪಡಿಸುವುದಾದರೆ, ಇವರ ಎಲ್ಲಾ ಕವನಗಳನ್ನು ಒಟ್ಟುಗೂಡಿಸಿ ೧೯೮೦ರಲ್ಲಿ 'ಶಿಲಾಲೊಲಿತ' ಎಂಬ ಸಮಗ್ರ ಕವನ ಸಂಕಲನವನ್ನು ಹೊರತಂದಿದ್ದಾರೆ. ಪುರುಷ ನಿಷ್ಠ ಸಮಾಜದಲ್ಲಿ ಗಂಡಿನ ಮೋಸ ನಂಬಿಕೆ ದ್ರೋಹದಿಂದ ನೊಂದ ಶೋಷಿತ ಹೆಣ್ಣಿನ ತಳಮಳ–ವಿಷಾದ–ಹತಾಶಯ ಭಾವಗಳನ್ನು ಒಲಿದ ಜೀವದಿಂದ ದೂರವಾದ ಏಕಾಕಿತನದ ಅಸಹನಿಯ ದು:ಖವನ್ನು ಸರಳವಾದ ಸಾಂಕೇತಿಕ ಪರಿಭಾಷೆಯಲ್ಲಿ ನೈಜಭಾವ ತೀವ್ರತೆಯೊಂದಿಗೆ ಅಭಿವ್ಯಕ್ತಿಸುವ ಕೌಶಲ್ಯ ಇವರ ಕವನಗಳ ವಿಶೇಷ ಗುಣವಾಗಿದೆ. ಹೀಗೆ ಜೀವನಾನುಭವಗಳನ್ನು ಕಾವ್ಯವಾಗಿಸಿ, ಕಾವ್ಯವನ್ನು ಪ್ರಾಮಾಣಿಕ ಅಭಿವ್ಯಕ್ತಿಯ ಪವಿತ್ರ ಜೀವನದಿಯಾಗಿಸುವ ಕಲೆಗಾರಿಕೆ ರೇವತಿದೇವಿ ಅವರ ಕವನಗಳನ್ನು ಆಪ್ತವಾಗಿಸುತ್ತದೆ. ಸಂಖ್ಯಾ ದೃಷ್ಟಿಯಿಂದ ಹೆಚ್ಚಿನ ಕವನಗಳನ್ನೇನು ಬರೆಯದೆ ಇದ್ದರೂ, ಸ್ತ್ರೀ ಚೈತನ್ಯಕ್ಕೆ ಹೊಸ ರೂಪವನ್ನು ನೀಡಿದ ಕವಯತ್ರಿಯರ ಸಾಲಿನಲ್ಲಿ ಮೊದಲಿಗರಾಗಿದ್ದಾರೆ.

ಪಿತೃಪ್ರಧಾನ ಅಥವಾ ಪುರುಷ ಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಸ್ವಾತಂತ್ರ್ಯಗಳು ಒಂದು ಸೀಮಿತವಾದ ಮಟ್ಟದವರೆಗೆ ಮಾತ್ರ ಇರುತ್ತವೆ. ಅವಳ ಭಾವನೆಗಳಗಾಗಲಿ, ಹಕ್ಕುಗಳಿಗಾಗಲಿ ಯಾವ ಬೆಲೆಯು ಇರುವುದಿಲ್ಲ. ಅವಳು ಮಾತಿದ್ದು ಮೂಕಳಂತೆ ಬದುಕಬೇಕಾಗುತ್ತದೆ. ಸ್ತ್ರೀಯ ಎಲ್ಲಾ ಚಲನವಲನಗಳ ಮೇಲೆ ನಿರ್ಭಂಧವಿದ್ದು, ಆಕೆಯ ಕುಟುಂಬದ ಒಳಗೆ ಸೀಮಿತ ಸ್ಥಳಗಳಲ್ಲಿ ಮಾತ್ರ ಓಡಾಡಲು ಅಥವಾ ಕುಟುಂಬದ ಆಯ್ದ ಪುರುಷರೊಡನೆ ಮಾತ್ರ ಸಂಪರ್ಕವಿಟ್ಟುಕೊಳ್ಳಲು ಅನುಮತಿ ಇರುತ್ತದೆ. ಈ ಪ್ರವೃತ್ತಿ ಕುಟುಂಬದ ಒಳಗೆ ನಡೆಯುವ ಹಿಂಸೆಯ ಒಂದು ಅತಿರೇಕದ ಮುಖವಾಗಿದೆ. ರೇವತಿದೇವಿ ಅವರು "ಮೂಗವೊಯಿನ ಗೊಂತು" ಕವನದಲ್ಲಿ ಮಾತಿದ್ದು ಮಾತಿಲ್ಲದವಳಂತೆ ಬದುಕುವ ಹೆಣ್ಣಿನ ಅಸಹಾಯಕ ಸ್ಥಿತಿಯನ್ನು ಹೀಗೆ ಚಿತ್ರಿಸಿದ್ದಾರೆ.

ಇಷ್ಟು ದಿನ ಪಟಪಟ ಮಾತನಾಡಿದರೆ
ನಾನು ಹೇಳಬೇಕಾದ್ದೇನು ಇಲ್ಲದಿದ್ದರೂ
ನಾನೇನು ಹೇಳಿದರೂ ಕೇಳಿದರೂ
ಈಗೇನೋ ನನಗೆ
ಹೇಳಬೇಕಾದದ್ದೇನೋ ಇದೆ
ಮಾತಾಡಲು ಹೋದರೆ
ಯಾರೂ ಕೇಳಿಸಿಕೊಳ್ಳರು
ಅದಕ್ಕೊ ಮತ್ತಾವುದಕ್ಕೊ
ಈ ಕೊರಳು ಮೂಕವಾಗಿದೆ[೧]

(ಶಿಲಾಲೊಲಿತ, ನಾರಿಸಾರಿಂಚಿ, ಪುಟ–೭೨)

ಈ ಪುರುಷ ಪ್ರಧಾನ ಸಮಾಜ ಹೆಣ್ಣಿಗೆ ಒಂದು ಹಂತದವರೆಗೂ ಸೀಮಿತ ಸ್ವಾತಂತ್ರ್ಯವನ್ನು ನೀಡಿ, ದೊಡ್ಡವಳಾದ ನಂತರ ಪಾತಿವ್ರತ್ಯದ ಮೌಲ್ಯಗಳಿಂದ ಬಂಧಿಸಿ, ಅವಳ ಭಾವನೆಗಳ ಅಭಿವ್ಯಕ್ತಿಗೂ ಆಸ್ಪದ ಕೊಡದೆ ಮೂಕಪ್ರಾಣಿಯನ್ನಾಗಿಸುತ್ತದೆ ಎನ್ನುವಂತಹ ವಿಚಾರವನ್ನು ಈ ಕವನ ಧ್ವನಿಸುತ್ತದೆ.

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣು ಮಕ್ಕಳನ್ನು ಹೆತ್ತು ಸಾಕುವ ಯಾಂತ್ರಿಕತೆಗೆ ಮಾತ್ರ ಸೀಮಿತವಾಗಿರುವುದರ ಬಗೆಗೆ ಕವಯತ್ರಿ ಅಸಮಾದಾನ ಹಾಗೂ ವಿಷಾದವನ್ನು ವ್ಯಕ್ತಪಡಿಸುತ್ತಾಳೆ.

ಹುಟ್ಟಿದ ಇಷ್ಟು ಕಾಲಕ್ಕೆ
ನಾನು ಬದುಕಿರುವೆನೆಂದು ತಿಳಿದು
ಮೊದಲ ಸಾರಿ ಅಳುಬಂತು
....................................
ಯಾವುದೋ ಕಡಿಮೆಯಾದ ಕೊರಗು
ಯಾವುದೋ ಒಂಟಿತನ ಶೂನ್ಯ[೨]

(ಶಿಲಾಲೊಲಿತ, ನಾರಿಸಾರಿಂಚಿ, ಪುಟ-೭೬)

ಪಿತೃ ಪ್ರಧಾನ ವ್ಯವಸ್ಥೆಯ ಒಳಗೆ ಬಿಡುಗಡೆ ಬದಲಾವಣೆ ಬಯಸುವ ನಿರೀಕ್ಷೆಯಲ್ಲಿಯೇ ಹೆಣ್ಣಿನ ಆಯುಷ್ಯವೆಲ್ಲ ಹನಿ ಹನಿಯಾಗಿ ಕಳೆದು ಹೋಗುತ್ತದೆ. ಜೀವದ್ರವವೆಲ್ಲ ಕಳೆದ ಮೇಲೆ ಆಕೆಗೆ ಸಿಗುವ ಬಿಡುಗಡೆ ಸಾವು ಮಾತ್ರ ಎಂಬುದನ್ನು ಈ ಕವನದ ಕೊನೆಯ ಸಾಲು "ಏದೊ ಒಂಟರಿ ತನಮೂ ಶೂನ್ಯಮು" ಎಂಬಲ್ಲಿ ಸೂಚಿತವಾಗಿದೆ.

ದಂದ್ವ ಪ್ರಮಾಣಗಳ
ಪಿತೃ ಪ್ರಧಾನತೆ
ಮದುವೆಯಾಗದ ತಾಯಿ ಮಗುವಿನ ಮಧ್ಯೆ
ಮೂಕವೇದನೆಯ ಕಗ್ಗತ್ತಲ ದೂರ[೩]

(ಶಿಲಾಲೊಲಿತ, ನಾರಿಸಾರಿಂಚಿ, ಪುಟ-೭೭)

ಸಂಸಾರ ಮತ್ತು ಸಮಾಜ ಮಹಿಳೆಯ ಮೇಲೆ ಹೇರಲ್ಪಟ್ಟ ಸಾಂಪ್ರದಾಯಿಕ ಭಾರಗಳು ಕೆಲವು ಸಲ ತನ್ನ ರಕ್ಷಣೆಗಾಗಿ ತಾನೇ ಹೇರಿಕೊಂಡ ಭಾರವೂ ಹೌದು. ಹೀಗಾಗಿ ತಾನೆ ತಂದುಕೊಂಡ ಇಚ್ಛಾ ಮರಣವೂ ಹೌದು. ಇಂತಹ ಸಂಕಟಗಳನ್ನು ಹೊತ್ತ ಮೂರ್ತಿಗಳ ಮಾದರಿ ಬದಲಾಗಬೇಕಿದೆ ಎನ್ನುವ ಆಶಯವನ್ನು ವ್ಯಕ್ತಿಪಡಿಸುತ್ತದೆ. ಹೆಣ್ಣು ವಿವಾಹದ ಚೌಕಟ್ಟಿನೊಳಗೆ ಮಕ್ಕಳನ್ನು ಪಡೆಯಬೇಕು ಎನ್ನುವ ಪುರುಷ ಪ್ರಧಾನ ವ್ಯವಸ್ಥೆಯ ಸಾಂಪ್ರದಾಯಿಕ ನಿಯಮವನ್ನು ಮುರಿದಿದ್ದಾಳೆ.

ಸಾವಿತ್ರಿ ಅವರು ಮೊದಲ ಸಾಲಿನ ಸ್ತ್ರೀವಾದಿ ಲೇಖಕಿಯರಲ್ಲಿ ಒಬ್ಬರಾಗಿದ್ದಾರೆ. ಇವರ ಮರಣಾನಂತರ ಅರಣ್ಯ ಕೃಷ್ಣ ಸಂಪಾದಕತ್ವದಲ್ಲಿ ಇವರ ಕವನ, ಕಥೆ, ಲೇಖನಗಳನ್ನು ೧೯೯೨ರಲ್ಲಿ "ಸಾವಿತ್ರಿ" ಎಂಬ ಕೃತಿಯ ಹೆಸರಲ್ಲಿ ಹೊರತರಲಾಗಿದೆ. ಸಂಖ್ಯಾ ದೃಷ್ಟಿಯಿಂದ ಕಡಿಮೆ ಸಂಖ್ಯೆಯ ಕವನಗಳನ್ನು ಬರೆದರೂ, ತೆಲುಗು ಸಾಹಿತ್ಯ ವಲಯದೊಳಗೆ ಅತ್ಯಂತ ಹೆಚ್ಚಿನ ಪ್ರಸಿದ್ಧಿಯನ್ನು ಪಡೆದುಕೊಂಡಿವೆ. ತಮ್ಮ ಕಾವ್ಯದಲ್ಲಿ ಯಾವುದೇ ಅಲಂಕಾರಗಳನ್ನು ಬಳಸದೆ ಜನಸಾಮಾನ್ಯರು ದಿನನಿತ್ಯದ ಬದುಕಿನಲ್ಲಿ ಬಳಸುವ ಭಾಷೆಯನ್ನೇ ಬಳಸಿದ್ದಾರೆ. ಜಟಿಲವಾದ ವಿಷಯಗಳನ್ನು ಸರಳವಾಗಿ ಹೇಳುವುದು ಇವರ ಕವನಗಳ ಹಿರಿಮೆಯಾಗಿದೆ.

ಸಾವಿತ್ರಿ ಅವರ "ಬಂದಿಪೊಟ್ಲು" ಕವನವು ಸ್ತ್ರೀವಾದಿ ಧೋರಣೆಯಿಂದ ಬರೆದ ಮೊಟ್ಟ ಮೊದಲ ಕವನವಾಗಿದೆ. ಪಿತೃಪ್ರಧಾನ ವ್ಯವಸ್ಥೆ ಅನಾದಿ ಕಾಲದಿಂದಲೂ ಮಹಿಳೆಯನ್ನು ಹೇಗೆ ಶೋಷಣೆಗೀಡುಮಾಡಿ ಅಧಿಕಾರವನ್ನು ಚಲಾಯಿಸುತ್ತ ಬಂದಿದೆ ಎಂಬುದನ್ನು ಹೇಳುತ್ತದೆ. ಯಾರು ಹೇಗೆ ನಿಜವಾದ ಶತ್ರುಗಳಾಗಿ ರೂಪಾಂತರಗೊಳ್ಳುತ್ತಾರೆ ಎಂಬುದನ್ನು ಈ ಕವಿತೆ ಸ್ಪಷ್ಟೀಕರಿಸುತ್ತದೆ.

ಪಾಠ ಒಪ್ಪಿಸದಿದ್ದರೆ ಮದುವೆ ಮಾಡುತ್ತೇನೆಂದು
ಮೇಷ್ಟ್ರು ಅಂದಾಗಲೇ ಭಯವಾಯಿತು
"ಆಫೀಸಿನಲ್ಲಿ ನನ್ನ ಗಂಡನಿದ್ದಾನೆ!
ಅಗತ್ಯವಿದ್ದರೂ ರಜೆ ಕೊಡಲಾರ"ನೆಂದು
ಅಣ್ಣಯ್ಯ ಅಂದಾಗಲೇ ಅನುಮಾನವಾಯಿತು
ಅವನಿಗೇನು? ಗಂಡಸು ಮಹರಾಜ ಎಂದು
ಹೆಣ್ಣು, ಗಂಡು ಎಂದು ಹೇಳಿದಾಗಲೇ ಅರ್ಥವಾಗಿ ಹೋಯಿತು
"ಮದುವೆಯೆಂದರೆ" 'ದೊಡ್ಡ ಶಿಕ್ಷೆ'ಯೆಂದು
"ಗಂಡನೆಂದರೆ" ಸ್ವಾತಂತ್ರ್ಯ ಭಕ್ಷಕ'ನೆಂದು
ನಾನು ಹಾಲುಕೊಟ್ಟು ಬೆಳೆಸಿದ ಜನರಲ್ಲಿ ಅರ್ಧವೇ
ನಮ್ಮನ್ನು ವಿಭಜಿಸಿ ಪೋಷಿಸುತ್ತಿದ್ದಾರೆಂದು[೪]

(ಓಲ್ಗಾ, ನೀಲಿ ಮೇಘುಲು, ಪುಟ-೯೦)

ಪಿತೃಪಧ್ರಾನ ವ್ಯವಸ್ಥೆಯೊಳಗೆ ಮದುವೆಗೆ ಸಂಬಂಧಿಸಿದಂತೆ ತೆಗೆದುಕೊಳ್ಳುವ ಎಲ್ಲಾ ನಿರ್ಧಾರಗಳು ಪುರುಷನದೇ ಆಗಿರುತ್ತದೆ. ಹೆಣ್ಣಿಗೆ ಬಾಳಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳುವ ನಿರ್ಧಾರವು ಇರುವುದಿಲ್ಲ. ತಂದೆ ತೋರಿಸಿದ ಗಂಡನೊಡನೆ ಇಷ್ಟವಿರಲಿ, ಇಲ್ಲದಿರಲಿ ಬದುಕನ್ನು ಸಾಗಿಸಬೇಕಾಗುತ್ತದೆ. ಮದುವೆಯ ನಂತರ ಗಂಡನ ಅಡಿಯಾಳಾಗಿ ಮಕ್ಕಳನ್ನು ಹೆರುವ ಪೋಷಿಸುವ ಯಾಂತ್ರಿಕತೆಗೆ ಒಳಪಟ್ಟು ತನ್ನ ಅಸ್ತಿತ್ವವನ್ನೇ ಇಲ್ಲವಾಗಿಸಿಕೊಂಡು ಮೂಕ ಜೀವಿಯಂತೆ

ಬದುಕಬೇಕಾಗುತ್ತದೆ. ಈ ವ್ಯವಸ್ಥೆಯು ಹೆಣ್ಣನ್ನು ತಂಗಿಯಾಗಿ, ತಾಯಿ, ಅತ್ತೆ-ಸೊಸೆಯಾಗಿ, ವಿಭಜನೆ ಮಾಡಿ ಅವರವರಲ್ಲಿಯೇ ಪಿತೂರಿ, ಶತ್ರುತ್ವವನ್ನಿಟ್ಟು ಸ್ತ್ರೀಗೆ ಸ್ತ್ರೀಯೇ ಶತ್ರು ಎನ್ನುವ ಭಾವನೆಯ ಬಲೆಯನ್ನು ಎಣೆದು ತಾನು ಹೇಳಿದಂತೆ ಕೇಳುವ ಸೂತ್ರದ ಗೊಂಬೆಯಾಗಿಸಿಕೊಳ್ಳುತ್ತಾನೆ. ಮದುವೆ ಪವಿತ್ರ ಬಂಧವೆಂಬ ಪಾರಂಪರಿಕ ಪರಿಕಲ್ಪನೆಯನ್ನು ಭಂಜಿಸಿ ಅದು ಕೇವಲ ಹೆಣ್ಣನ್ನು ಶೋಷಿಸುವ ಅವಳ ಬದುಕನ್ನು ನಾಶಮಾಡುವ ಸಂಸ್ಥೆಯಾಗಿದೆ ಎಂಬುದನ್ನು ಈ ಕವನ ಧ್ವನಿಸುತ್ತದೆ.

ವಿಮಲ ಮೊದಲ ತಲೆಮಾರಿನ ಸ್ತ್ರೀವಾದಿ ಲೇಖಕಿಯರಲ್ಲಿ ಒಬ್ಬರಾಗಿದ್ದು, ೧೯೮೩-೮೪ರ ಕಾಲ ಘಟ್ಟದಲ್ಲಿ ವಿಪ್ಲವ ರಚಯಿತಲ ಸಂಘದ ಉಪಾಧ್ಯಕ್ಷರಾಗಿ, ವಿಮೋಚನಾ ಪತ್ರಿಕೆಯ ಸಂಪಾದಕರಾಗಿ ಕಾರ್ಯ ನಿರ್ವಹಿಸಿದ್ದಾರೆ. ಅಡವಿ ಉಪ್ಪೊಂದಿನ ರಾತ್ರಿ, ಸೌಂದರ್ಯಾತ್ಮಕ ಹಿಂಸ, ವಂಟಿಲ್ಲು, ತೆಗಬಡಿನ ಮಾ ಕಲಲ ಪ್ರಪಂಚಂ ಕವಿತೆಗಳು ಇವರ ಕವಿತಾಭಿವ್ಯಕ್ತಿಗೆ ಹಿಡಿದ ಕನ್ನಡಿಯಾಗಿವೆ. ಮಹಿಳೆಯರ ಮನೆ ಕೆಲಸ, ಇವರು ಅನುಭವಿಸುವ ಸೌಂದರ್ಯಾತ್ಮಕ ಹಿಂಸೆಯನ್ನು ಅತ್ಯಂತ ಶಕ್ತಿಯುತವಾಗಿ ತಮ್ಮ ಕವಿತೆಗಳಲ್ಲಿ ಹಿಡಿದಿಟ್ಟಿದ್ದಾರೆ.

ಮಹಿಳೆಯ ಬದುಕು ಅಡಿಗೆ ಮನೆಯ ಕೆಲಸಕ್ಕೆ ಸೀಮಿತಗೊಳಿಸಿ ಅವಳ ಆಲೋಚನೆ, ಅನುಭವಗಳು ಈ ಪರಿಧಿಯೊಳಗೆಯೇ ಇರುವಂತೆ ಮಾಡಿರುವ ಪುರುಷ ಪ್ರಧಾನ ವ್ಯವಸ್ಥೆಯ ವಿರುದ್ಧ 'ವಂಟಿಲ್ಲು' ಕವನದಲ್ಲಿ ತಮ್ಮ ಆಕ್ರೋಶವನ್ನು ವ್ಯಕ್ತಪಡಿಸಿದ್ದಾರೆ.

ಅಡುಗೆಮನೆತನವನ್ನು ಇಲ್ಲಿಯೇ ಕಲಿಸಿದ್ದಾರೆ ನನಗೆ
ನಮ್ಮ ಅಮ್ಮ, ನಮ್ಮ ಅಜ್ಜಿ
ಮನೆಯಲ್ಲಿನ ಅಮ್ಮಂದಿರೆಲ್ಲ ಇಲ್ಲಿಯೇ ಸ್ತ್ರೀಯರಾದರಂತೆ

ಅನಾದಿ ಕಾಲದಿಂದಲೂ ಅಜ್ಜಿಯಿಂದ, ತಾಯಿಗೆ, ತಾಯಿಯಿಂದ ಮಗಳಿಗೆ ಪರಂಪರಾಗತವಾಗಿ ವರ್ಗಾವಣೆಯಾಗುತ್ತಲೆ ಬಂದಿದೆ ಈ ಅಡಿಗೆ ಕೋಣೆ. ಕಾರ್ಖಾನೆಯೊಳಗೆ ತಯಾರಾಗುವ ವಸ್ತುಗಳ ಹಾಗೆ ಮಹಿಳೆಯರು ಅಡುಗೆ ಕೋಣೆಯೊಳಗೆ ತಯಾರಾಗುತ್ತಿದ್ದಾರೆ ಎಂಬುದನ್ನು ಹೇಳುತ್ತ

ಈ ಅಡುಗೆ ಮನೆಯ ಸಾಮ್ರಾಜ್ಯಕ್ಕೆ ನಮ್ಮ ಅಮ್ಮನೇ ರಾಣಿ
ಆದರೂ ಅಡುಗೆ ಮನೆ ಬಟ್ಟಲುಗಳ ಮೇಲೆ
ನಮ್ಮಪ್ಪನದೆ ಹೆಸರು

ಮಹಿಳೆಯನ್ನು ಅಡುಗೆ ಮನೆಯಲ್ಲಿನ ಪರಿಕರಗಳಲ್ಲಿ ಒಬ್ಬಳನ್ನಾಗಿ ನೋಡಲಾಗುತ್ತದೆಯೇ ವಿನಃ ಕೋಣೆಯ ಮೇಲಾಗಲಿ ಅಲ್ಲಿನ ಸಾಮಾನುಗಳ ಮೇಲಾಗಲಿ ಯಾವುದೇ ಅಧಿಕಾರವನ್ನು ಹೊಂದಿರುವುದಿಲ್ಲ. ಏನುಮಾಡಬೇಕು ಹೇಗೆ ಮಾಡಬೇಕು ಎನ್ನುವುದನ್ನು ನಿರ್ಧರಿಸುವುದು ಪುರುಷನೇ ಆಗಿರುತ್ತಾನೆ. ಅವಳ ಯಾವ ಹಕ್ಕುಗಳಿಗೂ ಇಲ್ಲಿ ಮಾನ್ಯತೆ ಇರುವುದಿಲ್ಲ.

ಹೀಗೆ ಹೆಣ್ಣನ್ನು ನಿರ್ಜೀವ ವಸ್ತುವಾಗಿ ರೂಪಿಸಿದ ಪುರುಷ ಪ್ರಧಾನ ವ್ಯವಸ್ಥೆಯ ಜಾಲದಿಂದ ವಿಮುಕ್ತರಾಗೋಣ ಬನ್ನಿ ಎಂದು ಮಹಿಳಾ ಸಮುದಾಯಕ್ಕೆ ಕರೆಕೊಡುತ್ತಾರೆ.

ಈ ಅಡುಗೆ ಮನೆಯ ಸುಟ್ಟುಹಾಕ
ರಾಕ್ಷಸಿಹದ್ದು ಈ ಅಡುಗೆ ಮನೆ
ಅಡುಗೆ ಅಕ್ಕಂದಿರಾದ ನಾವು ನಮ್ಮ ಅಂತಿಮ ಕರ್ತವ್ಯ
ಸೌಟು ತಿರುವುವಂತೆ ಮಾಡಿದ ಅಡುಗೆ ಮನೆಯನ್ನು
ಧ್ವಂಸ ಮಾಡೋಣ ಬನ್ನಿ
....................................
ಮತ್ತೆ ನಮ್ಮ ಮಕ್ಕಳು ಈ ಅಡುಗೆ ಮನೆಯೊಳಕ್ಕೆ
ಕಾಲಿಡಲಿದ್ದಾರೆ
ನಮ್ಮ ಮಕ್ಕಳಿಗಾಗಿ
ಅಡುಗೆ ಮನೆಯ ಉರಿಕೆಂಡದ ಕೊಠಡಿಗಳನ್ನು ಧ್ವಂಸ ಮಾಡೋಣ
ದಕ್ಕಾಗಿ ಬನ್ನಿ[೫]

(ಓಲ್ಗಾ, ನೀಲಿ ಮೇಘಲು, ಪುಟ–೧೦೩–೧೦೫)

ಮುಂದೆ ಬರುವ ಹೆಣ್ಣುಮಕ್ಕಳು ಸಹ ಈ ಅಡಿಗೆ ಮನೆಯ ಶೋಷಣೆಗೆ ಕಾಲಿಡುತ್ತಿದ್ದಾರೆ. ಅವರ ಮುಂದಿನ ಭವಿಷ್ಯಕ್ಕಾಗಿ ಈ ಪಿತೃಪ್ರಧಾನ ಸಂಸ್ಕೃತಿ ವ್ಯವಸ್ಥೆಯನ್ನು ಧ್ವಂಸಮಾಡಿ, ಶೋಷಣೆಯಿಂದ ಮುಕ್ತಗೊಳಿಸಿ, ಸಮಾನತೆಯ ಸಮಾಜವನ್ನು ನಿರ್ಮಿಸೋಣ ಎಂದು ಮಹಿಳಾ ಸಮುದಾಯಕ್ಕೆ ವಿಮಲ ಕರೆನೀಡಿದ್ದಾರೆ.

ಸನಾತನ ಕಾಲದಿಂದಲೂ ಹೆಣ್ಣನು ಲೈಂಗಿಕ ವಸ್ತುವಾಗಿ ಪರಿಗಣಿಸಿ ಅದನ್ನು ರಕ್ಷಿಸುವ ಇಲ್ಲವೆ ಭಕ್ಷಿಸುವ ಅಧಿಕಾರವನ್ನು ಪುರುಷ ಹೊಂದಿದ್ದಾನೆ. ಅಂದರೆ ಸ್ತ್ರೀಗೆ ಅವಳ ದೇಹದ ಮೇಲಾಗಲಿ ನಿರ್ಧಾರಗಳನ್ನು ತೆಗೆದುಕೊಳ್ಳುವುದಕ್ಕಾಗಲಿ ಯಾವ ಅಧಿಕಾರವು ಇಲ್ಲದೆ, ನಿರ್ಜೀವ ವಸ್ತುವಾಗಿ ಬದುಕಬೇಕಾದ ಅಸಹಾಯಕ ಸ್ಥಿತಿಯನ್ನು ದಿಗಂಬರುಲ ಉರೇಗಿಂಪು ಕವನ ವ್ಯಕ್ತಪಡಿಸುತ್ತದೆ.

ನಾವು ಹೆಂಗಸರಲ್ಲವೇ!
ಶರೀರ ಬಿಟ್ಟು, ಹೃದಯ, ಮೆದಳು ಇಲ್ಲದವರು
ನಾವು ದೊಡ್ಡ ಅನುಭವವನ್ನು ಕೊಡುವ ಬಲತ್ಕಾರಕ್ಕೊಳಗಾಗುವ
ಸಂಭೋಗ ವಸ್ತುಗಳು
ಈ ಗಂಡು ದುರಹಂಕಾರ ಮೃಗಗಳ ಮುಖಗಳ ಮೇಲೆ
ದ್ವೇಷದಿಂದ ಉಗಿಯೋಣ[೬]

(ವಿಮಲ, ಮೃಗನ, ಪುಟ–೧೭)

ಪಾರಂಪರಿಕ ಮೌಲ್ಯಗಳನ್ನು ಹೇರುವ ಪುರುಷ ಪಧ್ರಾನ ವ್ಯವಸ್ಥೆಯ ಮೌಲ್ಯಗಳನ್ನು ಅರಿತು ಎಚ್ಚೆತ ಇಂದಿನ ಮಹಿಳೆ ಆ ಹುಸಿ ಮೌಲ್ಯಗಳಿಗೆ ಬದ್ಧವಾಗಿರದೆ ದಿಟ್ಟತನದಿಂದ ಪ್ರತಿಭಟನೆಯನ್ನು ವ್ಯಕ್ತಪಡಿಸಿದ್ದಾಳೆ. ಲೈಂಗಿಕ ವಿವಕ್ಷೆಯೊಳಗೆ ಸಿಲುಕಿ ನಲುಗುವ ಮಹಿಳೆಯರ ಅಸಹಾಯಕತೆಯನ್ನು ವಿಮಲ ಅವರು "ಚದುಪಾಟ" ಕವನದಲ್ಲಿ ಹಿಡಿದಿಟ್ಟಿದ್ದಾರೆ.

ಪಿತೃಸ್ವಾಮ್ಯ ಪದ್ಮವ್ಯೂಹದ ನಡುವೆ ಸಿಕ್ಕಿಕೊಂಡು
ನಿಮ್ನೋನ್ನತ ಲೈಂಗಿಕ ತಾರತಮ್ಯಗಳ ಆಧಾರ ಸ್ತಂಭದ ಚಕ್ರಗಳ
ಅಡಿ ನಲುಗಿದವರು
ಜೇನು ಪೂಸಿದ ಪಿತೃಸ್ವಾಮ್ಯ ವಿಷಗುಳಿಗೆಗಳನ್ನು
ನಿಮ್ಮ ಜೊತೆ ಸೇರಿ ನುಂಗಿದವರು
ಅವಿಶ್ವಾಸದಿಂದ, ಅಭದ್ರತೆಯಿಂದ, ಕೀಳರಿಮೆಯಿಂದ ಗಡ್ಡೆಕಟ್ಟಿ
ದವರು[೭]

(ವಿಮಲ, ಮೃಗನ, ಪುಟ–೪೦)

ಪುರುಷ ಪ್ರಧಾನ ವ್ಯವಸ್ಥೆಯು ರೂಪಿಸಿರುವ "ಲೈಂಗಿಕ ರಾಜಕೀಯದ ನಂಬಿಕೆ, ಮೌಲ್ಯಗಳನ್ನು ಸ್ತ್ರೀಯರು ಆಂತರೀಕರಿಸಿ ಕೊಂಡಿರುವುದರಿಂದ ಇಂತಹ ಶೋಷಣೆಯ ವಿರುದ್ಧ ಬಂಡೇಳುವ ಸುಪ್ತ ಬಯಕೆಯನ್ನು ಹೊಂದಿಲ್ಲ. ಅದರ ಹಿಂದಿರುವ ಉದ್ದೇಶ, ಪೊಳ್ಳುತನವನ್ನು ಅರಿತರೆ ಮಾತ್ರ ಸ್ತ್ರೀಯರು ಸ್ವತಂತ್ರರಾಗಲು ಸಾಧ್ಯ ಎಂಬ ವಿಚಾರಗಳನ್ನು ವ್ಯಕ್ತಪಡಿಸಿದ್ದಾರೆ.

ಜಯಪ್ರಭ ತೆಲುಗು ಸ್ತ್ರೀವಾದಿ ಲೇಖಕಿಯರಲ್ಲಿ ಒಬ್ಬರಾಗಿದ್ದು, ೧೯೮೮ರಲ್ಲಿ ಇವರು ಬರೆದ ಕವಿತೆಗಳೆಂದರೆ ಚೂಪುಲು, ಪೈಟನು ತಗಲೆಯ್ಯಾಲಿ, ಅಂದುಕೆಗಾವಾಳ್ಳು ಖುಷುಲು, ಪೂಲದಾರುಲ ಪಾರ್ತಿವಾಕೃತಿ, ಪಾರಿಪೋದಾಮಂಟೆ ವಿಷಯ ವೈವಿಧ್ಯತೆಯಿಂದ ಕೂಡಿದ್ದು ಈ ಕವನಗಳು ತೆಲುಗು ಸಾಹಿತ್ಯ ರಂಗದಲ್ಲಿ ಸಂಚಲನವನ್ನೇ ಸೃಷ್ಟಿಸಿರುವುದರ ಜೊತೆಗೆ ತೆಲುಗು ಸ್ತ್ರೀವಾದಿ ಸಾಹಿತ್ಯಕ್ಕೆ ಮತ್ತಷ್ಟು ಹೊಸ ಹುರುಪನ್ನು ನೀಡಿವೆ. ಸೂರ್ಯುಡು ಕೊಡ ಉದಯಿಸ್ತಾಡು, ಆಡುಗೊಂತು, ಯುದ್ಧೋನ್ಮುಖಂಗಾ, ವಾಮುನುಡಿ ಮೂಡೋ ಪಾದಂ ಇವು ಜಯಪ್ರಭ ಅವರ ಕವನ ಸಂಕಲನಗಳು. ಅನೇಕ ವಿಮರ್ಶಾತ್ಮಕ ಲೇಖನಗಳನ್ನು ಬರೆದು ಪ್ರಕಟಿಸಿದ್ದಾರೆ. "ಲೋಹಿತ" ಪತ್ರಿಕೆಯ ಸಂಪಾದಕರಾಗಿಯೂ ಕಾರ್ಯನಿರ್ವಹಿಸಿದ್ದಾರೆ. ತಾನು ಸ್ತ್ರೀವಾದಿ ಎಂದು ಧೈರ್ಯವಾಗಿ ಹೇಳಿಕೊಂಡಿದ್ದಾರೆ. ಲೈಂಗಿಕ ಸಮಾನತೆಯನ್ನು ಸ್ತ್ರೀ ವಿಮುಕ್ತಿ ಚಳುವಳಿಯ ಪ್ರಧಾನ ಭಾಗವಾಗಿ ಗ್ರಹಿಸಿದ್ದಾರೆ. ಇವರ ಸಾಹಿತ್ಯವೆಲ್ಲ ವಿಷಯ ವೈವಿದ್ಯತೆಯಿಂದ ಕೂಡಿದೆ.

ಪಿತೃ ಪ್ರಧಾನ ವ್ಯವಸ್ಥೆಯು ಪಾರಂಪರಿಕವಾಗಿ ಮಹಿಳೆಯರ ಮೇಲೆ ವಸ್ತ್ರಸಂಹಿತೆಯನ್ನು ವಿಧಿಸುತ್ತ ಬಂದಿದೆ. ಮಹಿಳೆಯರು ಸೀರೆಯನ್ನೆ ತೊಡಬೇಕು ಇತರೆ ಉಡುಪುಗಳನ್ನು ತೊಡಬಾರದೆಂಬ ನಿರ್ಬಂಧವನ್ನು ಹಾಕಿದೆ. ಸೀರೆಯ ಸುತ್ತ ಪಾತಿವ್ರತ್ಯದ ಮೌಲ್ಯಗಳ ಜಾಲವನ್ನು ಹರಡಿ

ಮಹಿಳೆಯರನ್ನು ತನ್ನ ಹದ್ದುಬಸ್ತಿನಲ್ಲಿ ಇಟ್ಟುಕೊಳ್ಳುತ್ತಿದೆ. ಜಯಪ್ರಭ ಇಂತಹ ಮೌಲ್ಯಗಳ ಹಿಂದೆ ಇರುವ ಪುರುಷ ಪ್ರಧಾನ ವ್ಯವಸ್ಥೆಯ ಕುತಂತ್ರಗಳನ್ನು "ಪೈಟನು ತಗಲೆಯ್ಯಾಲಿ" ಕವಿತೆಯಲ್ಲಿ ಬಯಲುಗೊಳಿಸುತ್ತಾರೆ.

ಸೀರೆಯ ಸೆರಗನ್ನು ನೋಡಿದರೆ
ನನಗೇತಕ್ಕೊ ಪಾತಿವ್ರತ್ಯ ನೆನಪಿಗೆ ಬರುತ್ತದೆ
..............................................................................
ಹೆಂಗಸೆಂದು
ಹಿಪ್ನಟೈಜ್ ಮಾಡುತ್ತದೆ
ನಾನು ಮನುಷ್ಯಳೆಂಬ ಭಾವವನ್ನು
ನನ್ನಿಂದಲೇ ಮರೆಸುತ್ತದೆ
................................................
ನನ್ನ ಮೇಲೆ
ತಲೆಮಾರುಗಳಿಂದ ಹೊರಿಸಿದ
ಅಪನಿಂದನೆ ಸೆರಗು!
ನನ್ನನ್ನು ಅಬಲೆಯನ್ನಾಗಿ ಮಾಡಿದ
ಪಿತೃಸ್ವಾಮ್ಯದ ಅದೃಶ್ಯ ಹಸ್ತ ಸೆರಗು!
ನನ್ನ ವ್ಯಕ್ತಿತ್ವವನ್ನು ಶವವಾಗಿಸಿ
ಅದರ ಮೇಲೆ ಹೊದಿಸಿದ ಬಿಳಿಯ ದುಪ್ಪಟಿ ಸೆರಗು

ಈ ಕವಿತೆಯಲ್ಲಿನ "ಪೈಟ" ಪುರುಷ ವಿಕೃತ ಮನಸ್ಸಿನ ಪ್ರತೀಕವಾಗಿದೆ. ಪುರುಷ ಪ್ರಧಾನ ವ್ಯವಸ್ಥೆ ಮಹಿಳೆಯರನ್ನು ತನ್ನ ನಿಯಂತ್ರಣದಲ್ಲಿಡಲು ಎಣೆದಿರುವ ಕುತಂತ್ರಗಳಲ್ಲಿ ಪಾತಿವ್ರತ್ಯವು ಒಂದಾಗಿದೆ. ಅಡಿಯಿಂದ ಮುಡಿಯವರೆಗೂ ತೊಟ್ಟಿರುವ ಸೀರೆ ಈ ದೇಶದಲ್ಲಿನ ಪ್ರತಿಯೊಬ್ಬ ಮಹಿಳೆಯ ಪಾತಿವ್ರತ್ಯತೆಯನ್ನು ನೆನಪಿಗೆ ತರುತ್ತದೆ. ಮಹಾಪತಿವ್ರತೆ ಎಂದು ಮೆರೆದಾಡುವಂತೆ ಮಾಡುತ್ತದೆಯೆ ವಿನಃ ತಾನು ಒಬ್ಬ ಮನುಷ್ಯಳು ಎಂಬುದನ್ನು ನೆನಪಿಗೆ ತರುವುದಿಲ್ಲ. ಸೆರಗು(ಪೈಟ) ಸ್ತ್ರೀ ಶರೀರವನ್ನು ಹೊದ್ದಿರುವ ಸಾಧಾರಣ ವಸ್ತ್ರವಲ್ಲ. ಸಾವಿರಾರು ವರ್ಷಗಳಿಂದ ಭಾರತೀಯ ಸಂಸ್ಕೃತಿಯಲ್ಲಿನ ಪಿತೃ ಪ್ರಧಾನ ವ್ಯವಸ್ಥೆ ಹೊದಿಸಿರುವ ಅಪನಿಂದನೆಯ ಪ್ರತೀಕ. ಸೆರಗು(ಪೈಟ) ಮಹಿಳೆಯರನ್ನು ಅಬಲಳನ್ನಾಗಿಸುವುದಷ್ಟೇ ಅಲ್ಲದೆ, ಜೀವಂತ ಶವವಾಗಿಸಿ ಹೊದಿಸಿರುವ ಬಿಳಿಯ ಬಟ್ಟೆ, ಎಂಬ ವಿಚಾರವನ್ನು ಜಯಪ್ರಭಾ ಹೇಳುತ್ತಾರೆ. ಇಂದಿನ ಎಚ್ಚೆತ್ತ

ಮಹಿಳೆ ಒಬ್ಬ ಮನುಷ್ಯಳಾಗಿ ಬದುಕಬೇಕೆಂದು ಆಸೆ ಪಡುತ್ತಾಳೆಯೇ ವಿನಃ ಜೀವಂತ ಶವವಾಗಿ ಬದುಕಲು ಇಷ್ಟಪಡುವುದಿಲ್ಲ.

ನಾನು ನಡೆಯುವ ಶವವಾಗಿ ಇರಬಾರದೆಂದರೆ
ಮೊದಲು ಸೆರಗನ್ನು ಸುಡಬೇಕು
ಸೆರಗನ್ನು ಸುಡಬೇಕು[೮]

(ಜಯಪ್ರಭ, ವಾಮುನುಡಿ ಮೂಡೊ ಪಾದಂ, ಪು-೩೮,೩೯)

ಈ ವಸ್ತ್ರ ಸಂಹಿತೆಯನ್ನು ನಾಶಮಾಡಬೇಕೆಂದು ನಿಶ್ಚಯಿಸಿಕೊಳ್ಳುತ್ತಾಳೆ. ಪೈಟನಿ ತಗಲೆಯ್ಯಾಲಿ (ಸೆರಗನ್ನು ಸುಟ್ಟುಹಾಕಬೇಕು) ಅಂದರೆ ಪಿತೃಪ್ರಧಾನ ವ್ಯವಸ್ಥೆಯೊಳಗಿನ ಪುರುಷರ ಮನೋಭಾವನೆಯನ್ನು ಸುಟ್ಟು ಹಾಕಬೇಕೆಂದು ಅರ್ಥೈಸಿಕೊಳ್ಳಬೇಕು. ಆಗಲೇ ಸ್ತ್ರೀಯರು ಕೂಡ ಪುರುಷರ ಸರಿಸಮ ವ್ಯಕ್ತಿಯಾಗಿ ಬದುಕಲು ಸಾಧ್ಯ ಎಂಬುದನ್ನು ಹೇಳುತ್ತದೆ. ಸ್ತ್ರೀವಾದಿಗಳು ಪುರುಷರನ್ನು ದೂಷಿಸುವುದಿಲ್ಲ, ಪುರುಷ ಪ್ರಧಾನ ವ್ಯವಸ್ಥೆಯೊಳಗಿನ ಢಾಂಭಿಕತನವನ್ನು ದೂಷಿಸುತ್ತಾರೆ. ಸ್ತ್ರೀಯರು ಅಧಿಪತ್ಯವನ್ನೇನು ಅಪೇಕ್ಷಿಸುದಿಲ್ಲ, ಸ್ತ್ರೀ ಪುರುಷ ಸಮಾನತೆಯನ್ನಷ್ಟೇ ಕೋರುತ್ತಾರೆ.

ಸ್ತ್ರೀ ಶೋಷಣೆಗೆ ಕಾರಣವಾಗಿರುವ ಹಲವು ಸಾಮಾಜಿಕ ಸಂಸ್ಥೆಗಳಲ್ಲಿ ವಿವಾಹವೂ ಒಂದು. ವಿವಾಹವು ಲಿಂಗ ಸಮಾನತೆಯ ತಳಹದಿಯ ಮೇಲೆ ರೂಪುಗೊಂಡಿಲ್ಲವಾದ್ದರಿಂದ ವಿವಾಹಿತ ಸ್ತ್ರೀ ಅಭದ್ರತೆಯಲ್ಲಿರುತ್ತಾಳೆ. ವಿವಾಹಕ್ಕೆ ಸಂಬಂಧಿಸಿದಂತೆ ತೆಗೆದುಕೊಳ್ಳುವ ಎಲ್ಲಾ ನಿರ್ಧಾರಗಳು ಪುರುಷನವೇ. ಹೆಣ್ಣಿಗೆ ತನ್ನ ಅಭಿಪ್ರಾಯಗಳನ್ನು ತಿಳಿಸುವ ಅಥವಾ ತಿರಸ್ಕರಿಸುವ ಯಾವ ಅಧಿಕಾರವು ಇರುವುದಿಲ್ಲ. ತಲೆ ತಗ್ಗಿಸಿ ಮೂಕ ಜೀವಿಯಂತೆ ತಾಳಿ ಕಟ್ಟಿಸಿಕೊಳ್ಳುವುದೊಂದೆ ಅವಳಿಗಿರುವ ಸ್ವಾತಂತ್ರ್ಯ. ಗಂಡ ನೀಡುವ ಶಾರೀರಿಕ ಮಾನಸಿಕ ಹಿಂಸೆಯನ್ನು ಸಹಿಸಬೇಕೆ ವಿನಹಃ ಪ್ರಶ್ನಿಸುವಂತಿಲ್ಲ. ಇಂತಹ ದುಸ್ಥಿತಿಯನ್ನು ಜಯಪ್ರಭಾ "ಪ್ರಕೃತಿಲೊ ಪ್ರಳಯಂ" ಕವಿತೆಯ ಮೂಲಕ ಸ್ತ್ರೀ ಸಮುದಾಯಕ್ಕೆ ತಲುಪಿಸುವ ಪ್ರಯತ್ನ ಮಾಡಿದ್ದಾರೆ.

ಕಪಟ ವಾಗ್ದಾನಗಳೊಂದಿಗೆ
ನಿನ್ನ ಬಾಳನ್ನು ಬಂಧಿಸಿ
ಮೋಸದಿಂದ ನಿನ್ನೊಬ್ಬ ಗುಲಾಮಳನ್ನಾಗಿಸಿ
ಕ್ಷಮಿಸುತ್ತೀಯ ಏತಕ್ಕೆ?
'ಮದುವೆ' ಎಂಬ ಕೆಸರಿಗೆ ಇಳಿಸಿದರೂ
ನಿನ್ನ ಸ್ತ್ರೀತ್ವದೊಂದಿಗೆ ಆಡಿಕೊಂಡು
ತನ್ನ ವಿಲಾಸಗಳಿಗೆ
ನಿನ್ನನ್ನು ದಾಳವಾಗಿ ಬಳಸಿಕೊಂಡು

ಎಂಜಲು ಎಲೆಯಂತೆ
ನಿನ್ನ ಬದುಕನ್ನು ಬಲಿ ಕೊಟ್ಟರೆ
ಆ ನೀಚತ್ವವನು ಸಹಿಸಿಕೊಳ್ಳುವೆ ಏಕೆಂದು?[೯]

(ಜಯಪ್ರಭ, ಯುದ್ಧೋನ್ಮುಖಂಗಾ, ಪುಟ-೨೨-೨೪)

ಸ್ತ್ರೀವಾದ ಪ್ರಶ್ನಿಸುವುದು ಪುರುಷರನಲ್ಲ. ಪುರುಷ ಪ್ರಧಾನ ವ್ಯವಸ್ಥೆಯೊಳಗಿರುವ ಮೌಲ್ಯಗಳನ್ನು. ಈ ವಿವಾಹ ಮತ್ತು ಕುಟುಂಬಗಳು ಕನಸೊಂದನ್ನು ಬಿತ್ತಿ ಬೆಳೆಯಲಾರದ ಬರಡು ಭೂಮಿಗಳಾಗಿವೆ. ಮದುವೆಯೊಂದು ಪವಿತ್ರ ಬಂಧ ಎಂಬ ಪಾರಂಪರಿಕ ಪರಿಕಲ್ಪನೆಯನ್ನು ಭಂಜಿಸಿ ಅದು ಕೇವಲ ಹೆಣ್ಣನ್ನು ಶೋಷಿಸುವ ಅವಳ ಬದುಕನ್ನು ನಾಶಮಾಡುವ ಸಂಸ್ಥೆಯಾಗಿದೆ ಎಂಬುದನ್ನು ಜಯಪ್ರಭ ಅವರ ಈ ಕವನ ಧ್ವನಿಸುತ್ತದೆ.

ಹೆಣ್ಣು ಶಿಶುಹತ್ಯೆ ನಮ್ಮ ಸಮಾಜದ ಒಂದು ಸಮಸ್ಯೆಯಾಗಿದೆ. ಸಮಾಜವು ಹೆಣ್ಣು ಮಕ್ಕಳ ಬಗೆಗೆ ತೋರುವ ತಾತ್ಸಾರ, ಉದಾಸೀನತೆ ಹಾಗೂ ನಿರ್ಲಕ್ಷತನಗಳಿಂದ ಅವರು ಅಪೌಷ್ಠಿಕತೆಗೆ ಮತ್ತು ಕಾಯಿಲೆಗಳಿಗೆ ತುತ್ತಾಗಿ ಸಾಯುತ್ತಿದ್ದಾರೆ. ಕೆಲವೊಮ್ಮೆ ಇಂಥ ಸಾವುಗಳು ಉದ್ದೇಶ ಪೂರ್ವಕವಾಗಿರುತ್ತವೆ ಎಂಬುದು ಈ ಸಮಾಜ ಹೆಣ್ಣು ಮಕ್ಕಳ ಬಗೆಗೆ ಹೊಂದಿರುವ ಧೋರಣೆಯನ್ನು ಸ್ಪಷ್ಟಪಡಿಸುತ್ತದೆ. ಈ ಸಮಸ್ಯೆ ಕುರಿತು ಅನೇಕ ಸ್ತ್ರೀವಾದಿ ಲೇಖಕಿಯರು, ಹೋರಾಟಗಾರರು ತಮ್ಮದೇ ಆದ ರೀತಿಯಲ್ಲಿ ಖಂಡಿಸಿರುವಂತೆ ಜಯಪ್ರಭ ಅವರು ತಮ್ಮ ಕವನಗಳಲ್ಲಿ ತನ್ನದೇ ಆ ರೀತಿಯಲ್ಲಿ ವಿರೋಧವನ್ನು ವ್ಯಕ್ತಪಡಿಸಿದ್ದಾರೆ.

ವಧ್ಯಶಿಲೆಯಂತಹ ವ್ಯವಸ್ಥೆಯಲ್ಲಿ
ಕೊರಳುಗಳು ತುಂಡಾದರೂ
ಹೆಣ್ಣು ಜಾತಿ ಹೊಡೆದುಕೊಳ್ಳುತ್ತಿದೆ
ಗರ್ಭದಲ್ಲಿ ಬೆಳೆಯುವ ಶಿಶುಹಂತದಿಂದ
ಹೆಣ್ಣುತನದ ಮೇಲೆ ಅತ್ಯಾಚಾರ
ಜೀವನ್ಮರಣ ಹೋರಾಟದಲ್ಲಿ
ಮಗುವನ್ನು ಹೆತ್ತ ತಾಯಿ ತನ್ನ ಹಸುಗೂಸಿನ ಪ್ರಾಣವನ್ನು
ವಿಷವಾಗಿ ನಾಶಪಡಿಸುತ್ತಿದೆ

.....................................................

ಬೆಳೆಯುತ್ತಿರುವ ಪ್ರತಿ ಹಂತದಲ್ಲೂ
ಗಂಡುತನವೆಂಬ ಕ್ರೂರಮೃಗ
ಕುಟುಕುತ್ತದೆ[೧೦]

(ಜಯಪ್ರಭ, ವಾಮುನುಡಿ ಮುಡೋಪಾದಂ, ಪುಟ-೭-೯)

ಹೆಣ್ಣು ಭ್ರೂಣ ಹತ್ಯೆ ಸಮಾಜದ ತಾರತಮ್ಯ ಧೋರಣೆಯಿಂದಲೆ ಪ್ರೇರಿತವಾದುದು. ಹೆಣ್ಣು ಮಗು ಹುಟ್ಟಿದ ನಂತರ ಹತ್ಯೆ ಮಾಡುವುದಕ್ಕಿಂತ ಭ್ರೂಣವಾಗಿರುವಾಗಲೆ ಹತ್ಯೆಗೈಯ್ಯುವ ಸುಲಭೋಪಾಯವನ್ನು ಪುರುಷ ಪ್ರಧಾನ ಸಮಾಜ ಕಂಡುಕೊಂಡಿದೆ. ಗರ್ಭದಲ್ಲಿನ ಮಗುವನ್ನು ಆರೋಗ್ಯ ತಪಾಸಣೆಯ ನೆಪದಲ್ಲಿ ಭ್ರೂಣ ಪರೀಕ್ಷೆ ನಡೆಸಿ ಭ್ರೂಣ ಹೆಣ್ಣಾಗಿದ್ದರೆ, ಗರ್ಭಪಾತ ಮಾಡಿಸಿ ಹೆಣ್ಣು ಶಿಶು ಹುಟ್ಟುವ ಮೊದಲೆ ಹತ್ಯೆಮಾಡುವ ಕೆಲಸ ನಿರಾತಂಕವಾಗಿ ನಡೆಯುತ್ತಿದೆ. ಹೀಗೆ ಮುಂದುವರೆದರೆ ಅವಸಾನದ ಅಂಚಿನಲ್ಲಿರುವ ಪ್ರಾಣಿ ಪ್ರಭೇದದಂತೆ ಮಹಿಳೆಯು ಅಂಚಿನ ಪ್ರಭೇದಕ್ಕೆ ತಲುಪುವ ಅಪಾಯವೊಂದನ್ನು ಈ ಕವನ ಪುರುಷ ಪ್ರಧಾನ ಸಮಾಜಕ್ಕೆ ಎಚ್ಚರಿಕೆಯನ್ನು ನೀಡಿದೆ.

ಪಿತೃ ಪ್ರಧಾನ ವ್ಯವಸ್ಥೆಯ ಮೌಲ್ಯಗಳ ಚಲಾವಣೆಗಾಗಿಯೆ ಈ ನೀತಿ ಸೂತ್ರ, ಧರ್ಮಶಾಸ್ತ್ರ ಗ್ರಂಥಗಳು ಹುಟ್ಟಿ ಕೊಂಡಿವೆ ಇವು ಸನಾತನ ಕಾಲದಿಂದಲೂ ಹೆಣ್ಣನ್ನು ಸತಿತ್ವ, ಪಾತಿವ್ರತ್ಯಗಳ ಹೆಸರಿನಲ್ಲಿ ಹೆಣ್ಣಿನ ಅಸ್ತಿತ್ವವನ್ನೆ ನಾಶಮಾಡಿವೆ ಎನ್ನುವಂತಹ ವೈಚಾರಿಕ ಚಿಂತನೆಯನ್ನು 'ಮಾನವಿ' ಕವಿತೆಯ ಮೂಲಕ ಹೇಳುತ್ತಾರೆ.

ಪಿತೃಸ್ವಾಮ್ಯಕ್ಕೆಂದು ಹುಟ್ಟಿದ
ಈ ವೇದಗಳು, ಶಾಸ್ತ್ರಗಳು
ನೀತಿ ಬಲೆಗಳೆಲ್ಲ
ಮಾತೃತ್ವವೆಂದು, ಸತೀತ್ವವೆಂದು
ಮಾಯ ಮಾಡಿ
ಗಂಡಸಿಗೆ ಪಟ್ಟಕಟ್ಟಿ
ನನ್ನೇನೋ ಮೋಸಮಾಡಿ
ಕುತ್ತಿಗೆಗೊಂದು ನೇಣು ಹಗ್ಗ ಸುತ್ತಿ
ನನ್ನ ಸ್ವಾತಂತ್ರ್ಯವನ್ನು ಮಟ್ಟಹಾಕಿ
ನನ್ನ ಚೈತನ್ಯವನ್ನು ದೋಚಿವೆ
ತಲೆಮಾರುಗಳಿಂದ ಅನಿಷ್ಟ ನಂಬಿಕೆಗಳಿಂದ
ನನ್ನನ್ನು ನಿರ್ವೀರ್ಯಗೊಳಿಸಿವೆ''

(ಜಯಪ್ರಭ, ಯುದ್ಧೋನ್ಮುಖಂಗಾ, ಪುಟ-೪೮,೪೯)

ಈ ವ್ಯವಸ್ಥೆಯ ಮೌಲ್ಯಗಳು, ಪಾರಂಪರಿಕವಾಗಿ ಪುರುಷನನ್ನು ಅರಸನನ್ನಾಗಿಸಿ ಮಹಿಳೆಯನ್ನು ಗುಲಾಮಳನ್ನಾಗಿಸಿದ್ದಲ್ಲದೆ, ಪಿತೃಪ್ರಧಾನ ವ್ಯವಸ್ಥೆಯ ಮನೋಜಾಲವನ್ನು ಹರಡುವ ಉದ್ದೇಶದಿಂದ ಈ ವೇದಶಾಸ್ತ್ರ, ನೀತಿ ಮೌಲ್ಯಗಳು ಹುಟ್ಟಿಕೊಂಡಿವೆ. ಇವು ಮಹಿಳೆಯರ ಚೈತನ್ಯವನ್ನು ಪರಂಪರಾಗತವಾಗಿ ಹತ್ತಿಕ್ಕುತ್ತ, ಶೋಷಣೆಗೀಡು ಮಾಡುತ್ತ ಬಂದಿವೆ. ಇವು ಪುರುಷನನ್ನು

ಅರಸನನ್ನಾಗಿ, ಮಹಿಳೆಯನ್ನು ಗುಲಾಮಳನ್ನಾಗಿಸಿದ್ದಾವೆ ಎಂಬ ವಿಚಾರಗಳನ್ನು ಈ ಕವನ ಧ್ವನಿಸುತ್ತದೆ. ಮಹಿಳೆಯನ್ನು ಚೈತನ್ಯ ಹೀನಳನ್ನಾಗಿ ಮಾಡಿವೆ ಎನ್ನುವಂತಹ ವಿಷಾದವನ್ನು ಕವಯತ್ರಿ ವ್ಯಕ್ತಪಡಿಸಿದ್ದಾರೆ.

ಕೊಂಡಪೊಡಿ ನಿರ್ಮಲ ಸ್ತ್ರೀವಾದಿ ಕವಿತೆ ರಚನೆಗಳ ಮೂಲಕವೆ ತೆಲುಗು ನಾಡಿನಲ್ಲಿ ವಿಶೇಷವಾಗಿ ಗುರುತಿಸಿಕೊಂಡಿದ್ದಾರೆ. ಪ್ರಬುದ್ದವಾದ ವೈಚಾರಿಕ ಪ್ರಜ್ಞೆಯಿಂದೊಡಗೂಡಿದ ತರ್ಕಬದ್ಧವಾದ ಅಭಿವ್ಯಕ್ತಿ, ಸಂಕೇತಗಳ ಸೂಕ್ತ ಬಳಕೆ, ತೃಣದಲ್ಲಿಯೇ ಮಣಗಟ್ಟಲೆ ತುಂಬುವ ಪ್ರತಿಭೆ ಇವು ಇವರ ಸಾಹಿತ್ಯದ ಮುಖ್ಯ ಲಕ್ಷಣಗಳಾಗಿವೆ. ವಿಶೇಷವೆಂದರೆ, ವೈಚಾರಿಕತೆಯ ಪಾತಳಿಯಲ್ಲಿ ತನಗೆ ತಾನೆ ಹುಟ್ಟಿಕೊಂಡ ಬಂಡಾಯ ಮನೋಭಾವ ಇವರ ಕವಿತೆಗಳಲ್ಲಿ ಪ್ರಧಾನವಾಗಿ ವ್ಯಕ್ತಗೊಂಡಿದೆ. ಇವರ ಕವನ ಸಂಕಲನಗಳೆಂದರೆ 'ಸಂದಿಗ್ಧ ಸಂಧ್ಯ', ನಡಿಚೆಗಾಯಾಲು, ಬಾಧಾ ಸಪ್ತನದಿ, ಮಲ್ಪಿ ನ್ಯಾಷಿನಲ್ ಮುದ್ದು, ಇತ್ಯಾದಿ ಅನೇಕ ಕಥೆ, ಲೇಖನಗಳನ್ನು ಸಹ ಬರೆದು ಪ್ರಕಟಿಸಿದ್ದಾರೆ. ಇವರ ಸಾಹಿತ್ಯ ಕೃಷಿಯನ್ನು ಗುರುತಿಸಿ ಅನೇಕ ಪ್ರಶಸ್ತಿಗಳನ್ನು ನೀಡಲಾಗಿದೆ.

ಗೃಹಿಣಿಯ ಪ್ರಸವವೇದನೆಗೆ ಈ ಪುರುಷ ಪ್ರಧಾನ ವ್ಯವಸ್ಥೆ ಹೇಗೆ ಕಾರಣವಾಗಿದೆ ಎಂಬುದನ್ನು ಕುರಿತು "ಲೆಬರ್ ರೂಮ್" ಕವಿತೆಯಲ್ಲಿ ಕೊಂಡಪೋಡಿ ನಿರ್ಮಲ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

ಜಗತ್ತಿನೊಳಗಡೆ ನರಕವೋ
ನರಕದೊಳಗೆ ಜಗತ್ತೋ
ತ್ರೀಡಿಯಲ್ಲಿ ನೋಡುತ್ತಿರುವಂತಿದೆ
ಲೇಬರ್ ರೂಮ್‌ನಲ್ಲಿ ಅಡಿಯಿಟ್ಟರೆ ಸಾಕು
ನೀವೆಲ್ಲ ಹೇಳುತ್ತಿರುವ ಬಿಳಿಯ ಸೀರೆ ಮಲ್ಲಿಗೆ ಹೂವು
ಹಾಲಿನ ಲೋಟ ಸರದಿಯಾಗಿ
ಪರಾಧೀನತೆ, ಗುಲಾಮದ ಕಣ್ಣೀರು, ದ್ವೀಪಾಂತರವಾಸ
ಫ್ರೇಂ ಕಟ್ಟಿದಂತೆ ಕಾಣಿಸುತ್ತವೆ
..............................................
ಆಲೋಚಿಸುವ ಅವಕಾಶವಿಲ್ಲ
ಸಾವು ಬದುಕಿನ ಮಧ್ಯೆ ಕಾಣದಷ್ಟು ಗೆರೆಯಿಲ್ಲ[೪೫]

(ಕೊಂಡೆಪೊಡಿ ನಿರ್ಮಲ, ಕೊಂಡಪೊಡಿ ನಿರ್ಮಲ ಕವಿತ್ವಂ (ಸಮಗ್ರ) ಪುಟ-೪೭)

ಪುರುಷರ ಹೊಗಳಿಕೆಗೆ ಸುಲಭವಾಗಿ ಮರುಳಾಗುವ ಸ್ತ್ರೀಯರ ದೌರ್ಬಲ್ಯವೆ ಸ್ತ್ರೀ ಶೋಷಣೆಗೆ ಅನುಕೂಲವಾಗಿ ಪರಿಣಮಿಸಿದೆ. ಮಕ್ಕಳನ್ನು ಹೆರುವ ವಿಶಿಷ್ಟ ಸಾಮರ್ಥ್ಯ ಮಹಿಳೆಯರಿಗೆ ನಿಸರ್ಗವೆ ನೀಡಿದ ಕೊಡುಗೆ. ಇಂತಹ ವಿಶಿಷ್ಟ ಶಕ್ತಿಯನ್ನು ಪಡೆದಿರುವುದಕ್ಕೆ ಸ್ತ್ರೀಯರು ಹೆಮ್ಮೆ

ಪಡಬೇಕಾಗಿದೆ. ಮಕ್ಕಳನ್ನು ಹೆತ್ತು ಪೊಷಿಸುವ ಪ್ರಕ್ರಿಯೆಯಲ್ಲಿಯೆ ಅವರು ಸಂಭ್ರಮ ಮತ್ತು ಸಾರ್ಥಕ ಭಾವವನ್ನು ಅನುಭವಿಸಬೇಕು, ಹೆಣ್ಣಾದವಳು ಮಕ್ಕಳನ್ನು ಹಡೆದಾಗಲೆ ಅವಳಿಗೆ ಮೋಕ್ಷ ಎನ್ನುವಂತಹ ಪಿತೃಪ್ರಧಾನ ವ್ಯವಸ್ಥೆಯ ಹುಸಿ ಮೌಲ್ಯಗಳೇ ಹೆಣ್ಣು ಹೆರಿಗೆಯ ನೋವನ್ನು ಸಹಿಸಿಕೊಂಡು ಅಗತ್ಯವಾದರೆ ತನ್ನ ಪ್ರಾಣವನ್ನೆ ಬಲಿಕೊಟ್ಟು ಮಗುವಿಗೆ ಜನ್ಮನೀಡುವಂತೆ ಮಾಡುತ್ತವೆ. ಈ ವ್ಯವಸ್ಥೆಯ ಸಮಾಜದಲ್ಲಿ ಹೆಣ್ಣು ಕೇವಲ ಹೆರುವ ಯಂತ್ರವಾಗಿ ಮಾರ್ಪಡುವುದನ್ನು ಅನೇಕ ಸ್ತ್ರೀವಾದಿಗಳು ಪ್ರಬಲವಾಗಿ ಖಂಡಿಸಿದ್ದಾರೆ.

ಮದುವೆ ಎನ್ನುವುದು ಏಳೇಳು ಜನ್ಮದ ಅನುಬಂಧ ಎನ್ನುತ್ತಾರೆ. ಆದರೆ ತನ್ನ ಬಾಳ ಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯವನ್ನು ಈ ಪಿತೃಪ್ರಧಾನ ವ್ಯವಸ್ಥೆ ಹೆಣ್ಣಿಗೆ ನೀಡಿರುವುದಿಲ್ಲ. ಹೆಣ್ಣಿನ ಆಸೆ, ಆಕಾಂಕ್ಷೆ, ಆಲೋಚನೆಗಳಿಗೆ ಯಾವುದೇ ಕಾರಣಕ್ಕೂ ತಂದೆ,ತಾಯಿ ಪ್ರಾಮುಖ್ಯತೆ ಕೊಡದೆ, ಗಂಡಿಗೆ ಹೆಣ್ಣು ಇಷ್ಟವಾದರೆ ಸಾಕು ಸಂಬಂಧವನ್ನು ಖಾಯಂ ಮಾಡಿಬಿಡುತ್ತಾರೆ. ಹೆಣ್ಣಿನ ಇಷ್ಟ ನಿಷ್ಟಗಳನ್ನು ತಿಳಿಯದಲೇ ಮದುವೆಯ ಕೆಲಸಗಳನ್ನು ಆರಂಭಿಸುತ್ತಾರೆ. ಮಾತಿನ ವರಸೆಗೆಂಬಂತೆ "ಮಗಳೆ ನಿನಗೆ ಮದುವೆ ಇಷ್ಟತಾನೆ" ಎಂದು ಕೇಳಿ ಜಾರಿಕೊಳ್ಳುವ ಮನಸ್ಥಿತಿಯನ್ನು ಕೊಂಡಪೋಡಿ ನಿರ್ಮಲ "ಅಮ್ಮಡೂ ಈ ಪೆಳ್ಳಿ ನಿಕಿಷ್ಟಮೇನಾ" ಕವಿತೆಯಲ್ಲಿ ಖಂಡಿಸುತ್ತಾರೆ.

ಇಷ್ಟವೇನೇ ಹುಡುಗಿ
ಅರಿಸಿನ ಕುಟ್ಟಿದ್ದೇವೆ ಮಾತು ಕೊಟ್ಟಿದ್ದೇವೆ
ಲಗ್ನ ಹಿಡಿಸಿದ್ದೇವೆ ಹಗ್ಗಗಳಿಗೆ ಆರ್ಡರ್ ಕೊಟ್ಟಿದ್ದೇವೆ
ಕಾಲಿಗೆ ಉಂಗುರ ಮೈಗೆ ಕಟ್ಟಿಗೆ ಎಲ್ಲ ತಂದಿದ್ದೇವೆ
.................................................................
ಆ ಮನೆಯ ಕಲಾಭಿರುಚಿ ಸಾರುವುದಕ್ಕೆ
ನೀನೊಂದು ಹೊಸ ಬೊಂಬೆ ಆಗಬೇಕಾದ್ದೆ[೧೩]

(ಕೊಂಡೆಪೊಡಿ ನಿರ್ಮಲ, ಕೊಂಡಪೊಡಿ ನಿರ್ಮಲ ಕವಿತ್ವಂ (ಸಮಗ್ರ) ಪುಟ-೯೧-೯೨)

ತಂದೆ-ತಾಯಿ ಮನ ನೋಯಿಸಲು ಇಷ್ಟಪಡದೆ ತನ್ನ ಆಸೆಗಳನ್ನು ಬದಿಗೊತ್ತಿ ಮದುವೆ ಮಾಡಿಕೊಂಡು ಗಂಡನ ಮನೆಗೆ ಹೋದರೆ, ಅಲ್ಲಿ ಇವಳನ್ನು ಕೇವಲ ಒಂದು ಆಟದ ಗೊಂಬೆಯಂತೆ ನೋಡಲಾಗುತ್ತದೆ. ಪುರುಷ ಪ್ರಧಾನ ಸಮಾಜ ರಚನೆಯಲ್ಲಿ ಹುಟ್ಟಿ ಬೆಳೆಯುವ ಪ್ರತಿಯೊಬ್ಬರ ಮನಸ್ಸು, ಪ್ರಜ್ಞೆಯು ಸಹ ಪುರುಷ ಪಾರಮ್ಯದಿಂದಲೇ ಕೂಡಿರುತ್ತದೆ ಎನ್ನುವ ಚಿಂತನೆಗಳನ್ನು ಕೊಂಡೆಪೋಡಿ ನಿರ್ಮಲ ಈ ಕವಿತೆಯಲ್ಲಿ ವ್ಯಕ್ತಪಡಿಸಿದ್ದಾರೆ.

ಹೊಸದಾಗಿ ಮದುವೆಯಾಗಿ ಗಂಡನ ಮನೆಗೆ ಹೋಗುತ್ತಿರುವ ಮಗಳಿಗೆ ತಂದೆ-ತಾಯಿ ಬುದ್ಧಿವಾದ ಹೇಳುವುದು ಅಥವಾ ನೀತಿಭೋದನೆ ಮಾಡುವುದು ಭಾರತೀಯ ಸಾಮಾಜಿಕ

ವ್ಯವಸ್ಥೆಯಲ್ಲಿ ಬಹುಹಿಂದಿನಿಂದಲು ನಡೆದುಕೊಂಡು ಬಂದಿರುವ ಪದ್ಧತಿಯಾಗಿದೆ. ಸಾಮಾನ್ಯವಾಗಿ ಈ ನೀತಿಬೋಧೆ ಕೌಟುಂಬಿಕ ವ್ಯವಸ್ಥೆ ಹಾಗೂ ಪರಂಪರಾಗತ ಮೌಲ್ಯಗಳು ಹೆಣ್ಣಿನ ಬದುಕನ್ನು ಜೀವಂತ ಶವವಾಗಿಸಿವೆ ಎನ್ನುವುದನ್ನು 'ಸತ್ಯಂ ಶಿವಂ ಸುಂದರಂ' ಕವನ ಧ್ವನಿಸುತ್ತದೆ.

ಮಾನ ಮರ್ಯಾದೆಯ ಕುಲುಮೆಯಲ್ಲಿ ಒಂಟಿ ಕಣ್ಣೀರನು
ಸುಡುತ್ತಿರುವ ಕಡೆ
ಮಾನ ಮರ್ಯಾದೆಯ ಕಲ್ಲ ಕೆಳಗೆ ಮೂಕ ನಿಟ್ಟುಸಿರನು
ಜಜ್ಜುತ್ತಿರುವ ಕಡೆ
ಆಕೆಯ ದುಃಖ ಸತ್ಯ
ಆಕೆಯ ಬದುಕು ಶವ[೧೪]

(ಕೊಂಡೆಪೊಡಿ ನಿರ್ಮಲ, ಕೊಂಡಪೊಡಿ ನಿರ್ಮಲ ಕವಿತ್ವಂ (ಸಮಗ್ರ) ಪುಟ-೧೨೭,೧೨೯)

ಮಾನ, ಮರ್ಯಾದೆಯಂತಹ ನೀತಿ ಸೂತ್ರಗಳ ಅಡಿಯಲ್ಲಿ ಹೆಣ್ಣಿನ ಬದುಕು ನಾಶವಾಗುತ್ತಿರುವುದರ ಬಗೆಗೆ ಕೊಂಡೆ ಪೋಡಿ ನಿರ್ಮಲ ಅವರು ವಿಷಾದವನ್ನು ವ್ಯಕ್ತಪಡಿಸಿದ್ದಾರೆ. ಇಂತಹ ಮೌಲ್ಯಗಳ ಹಿಂದೆ ಪುರುಷ ಪ್ರಧಾನ ವ್ಯವಸ್ಥೆಯ ಕುತಂತ್ರವಿದೆ ಎಂಬುದನ್ನು ಕವಯತ್ರಿ ಹೇಳುತ್ತ ಇವುಗಳಿಂದ ಹೊರಬಂದು ಮಹಿಳೆಯರು ತಮ್ಮ ಅಸ್ತಿತ್ವವನ್ನು ತಾವು ಕಂಡುಕೊಳ್ಳಬೇಕೆಂದು ಮಹಿಳಾ ಸಮುದಾಯಕ್ಕೆ ಕರೆ ನೀಡಿದ್ದಾಳೆ.

ತೆಲುಗು ಸ್ತ್ರೀವಾದಿ ಸಾಹಿತ್ಯ ವಲಯದಲ್ಲಿ ಪ್ರಮುಖವಾಗಿ ಕೇಳಿ ಬರುವ ಹೆಸರೆಂದರೆ ಓಲ್ಗಾ ಅವರದು. ಸತತ ನಾಲ್ಕುವರೆ ದಶಕಗಳಿಂದಲೂ ಸಾಹಿತ್ಯ ಕೃಷಿಯನ್ನು ಮಾಡುತ್ತ ಬಂದಿರುವ ಅವರು ಸ್ತ್ರೀವಾದಿ ಸಾಹಿತ್ಯವನ್ನು ಒಂದು ಚಳವಳಿಯಾಗಿ ಬೆಳೆಸುವಲ್ಲಿ ಬಹುಮುಖ್ಯ ಪಾತ್ರವಹಿಸಿದ್ದಾರೆ ಜೊತೆಗೆ ಸ್ತ್ರೀವಾದಕ್ಕೆ ಒಂದು ತಾತ್ವಿಕ ತಳಹದಿಯನ್ನು ಹಾಕಿದವರಾಗಿದ್ದಾರೆ. ಸ್ತ್ರೀವಾದವನ್ನು ಸೈದ್ಧಾಂತಿಕ ಚೌಕಟ್ಟಿಗೆ ತಂದಿದ್ದಲ್ಲದೆ ಅನೇಕ ಸೃಜನಾತ್ಮಕವಾಗಿ ಸಾಹಿತ್ಯವನ್ನು ಸಹ ರಚಿಸಿದ್ದಾರೆ. ಇವರ ಕಾದಂಬರಿಗಳೆಂದರೆ ಸ್ವೇಚ್ಚ, ಮಾನವಿ, ಸಹಜ, ಆಕಾಶಂಲೊ ಸಗಂ ಇತ್ಯಾದಿ. ಪ್ರಯೋಗಂ, ಭಿನ್ನ ಸಂದರ್ಭಾಲು ಎಂಬ ಕಥಾ ಸಂಕಲನಗಳು ಇವರ ಸಮಗ್ರ ಕವಿತೆಗಳನ್ನು ೨೦೧೧ರಲ್ಲಿ "ಓಲ್ಗಾ ಕವಿತಲು ಕೊನ್ನಿ" ಶೀರ್ಷಿಕೆಯಡಿ ಹೊರತಂದಿದ್ದಾರೆ.

ಮದುವೆಯೊಂದು ಪವಿತ್ರ ಬಂಧ ಎಂಬುದು ಪಾರಂಪರಿಕ ನಂಬಿಕೆ. ಇದು ಆರ್ಥಿಕ ಸಂಬಂಧವಾಗಿ ಮಾರ್ಪಟ್ಟಾಗ ದಾಂಪತ್ಯದಲ್ಲಿ ಆಗುವ ವೈಪರಿತ್ಯಗಳೇನು, ಇದು ಸಮಾಜದ ಮೇಲೆ ಎಂತಹ ಪರಿಣಾಮಗಳನ್ನು ಬೀರುತ್ತದೆ ಎಂಬುದನ್ನು ಓಲ್ಗಾ "ದಾಂಪತ್ಯಂ" ಎಂಬ ಕವಿತೆಯಲ್ಲಿ ದಾಖಲಿಸಿದ್ದಾರೆ.

ಒಬ್ಬರಿಗೊಬ್ಬರು ವಸ್ತುಗಳಾದಾಗ
ಒಬ್ಬರಿಗೊಬ್ಬರು ಆಸ್ತಿಗಳಾದಾಗ

ಇತರರ ದುರಾಕ್ರಮಣದಿಂದ
ಆಸ್ತಿಗಳ ಸಂರಕ್ಷಣೆ
ಜೀವನದ ಏಕೈಕ ಗುರಿಯಾದಾಗ
ಒಬ್ಬರಿಗೊಬ್ಬರು ಅಗತ್ಯವಿಲ್ಲದಾಗ ನಾವು
ಮತ್ತಾರಿಗೂ ಸೇರದೆ
ಲಕ್ಷಲಾದಿ ಸಾಮಾಜಿಕ ರಕ್ಷಣ ಯಜ್ಞ
ನಿರಂತರ ಸಾಗುತ್ತಲೇ ಇರುತ್ತದೆ[೨೫]

(ಓಲ್ಗಾ, ಓಲ್ಗಾ ಕವಿತಲು ಕೊನ್ನಿ, ಪುಟ-೨೬)

ಪ್ರೀತಿ, ಮಮತೆ, ವಿಶ್ವಾಸದಿಂದ ಕೂಡಿರಬೇಕಾದ ಸಹಜ ಸಂಬಂಧಗಳು ಇಂದು ಆರ್ಥಿಕ ವಿಷಯವಾಗಿ ಕೇವಲ ಕೃತಕ ಸಂಬಂಧಗಳಾಗಿ ಮಾರ್ಪಟ್ಟಿವೆ. ಸೃಷ್ಟಿಯಲ್ಲಿ ಸ್ತ್ರೀಪುರುಷರಿಬ್ಬರು ಸಮಾನರು ಆದರೂ ಈ ಸಮಾನತೆ ವಾಸ್ತವವಾಗಿ ಕಾಣಿಸುತ್ತಿಲ್ಲ. ಪುರುಷ ಸಹಜ ಅಹಂಕಾರ ಸ್ತ್ರೀ ತನಗೆ ಸರಿಸಮಾನಳು ಎನ್ನುವ ಸತ್ಯವನ್ನು ಅಂಗೀಕರಿಸಲು ಇಷ್ಟ ಪಡದೆ, ತನ್ನ ಅಧಿಕಾರದ ದರ್ಪದಲ್ಲಿ ಮಹಿಳೆಯ ಸ್ಥಾನವನ್ನು ತನ್ನ ನೆರಳಾಗಿರುವಂತೆ ಮಾಡಿದ್ದಾನೆ.

ಸ್ತ್ರೀಯ ಲೈಂಗಿಕತೆಯನ್ನು ಕುರಿತಂತೆ ತಮಗೆ ಬೇಕಾದ ಪರಿಕಲ್ಪನೆಗಳನ್ನು ಸೃಷ್ಟಿಸುವ ಪುರುಷ ವರ್ಗವು ಆಕೆಯನ್ನು ಭೋಗದ ವಸ್ತುವಾಗಿ ಪರಿಗಣಿಸಿದುದರ ಸ್ವರೂಪವನ್ನು ಓಲ್ಗಾ "ಪಂಚಾದಿ ನಿರ್ಮಲ ವಾರಸುರಾಲಿನಿ" ಕವಿತೆಯಲ್ಲಿ ಹೀಗೆ ಕಟ್ಟಿಕೊಟ್ಟಿದ್ದಾರೆ.

ಅಂದವಾದ ಶೋಷಣೆಗೆ
ಪವಿತ್ರವಾದ ಹಿಂಸೆಗೆ
ನ್ಯಾಯವಾದ ದಾಸ್ಯಕ್ಕೆ ಬಲಿಯಾದ ನಾನು
ಭಾರತ ಸ್ತ್ರೀ
ಸ್ವಲ್ಪಕಾಲ ಪತಿವ್ರತೆ
ಕುಷ್ಠರೋಗಿಗಳ ಎಂಜಲು ನಾಯಿ
ಅನುಮಾನ, ಅವಮಾನಗಳ
ಅಗ್ನಿಜ್ವಾಲೆಗಳಿಗೆ ಆಹುತಿ
ಸಹಗಮನ ಜ್ವಾಲೆಗಳ ಚಟ್ಟವುನಾ

ಈ ಪಿತೃ ಪ್ರಧಾನ ವ್ಯವಸ್ಥೆಯ ಸಮಾಜ ಅನಾದಿ ಕಾಲದಿಂದಲೂ ಹೆಣ್ಣಿನ ಬಗೆಗೆ ಯಾವ ದೃಷ್ಟಿಕೋನವನ್ನು ಹೊಂದಿದೆ ಎಂಬುದನ್ನು ಹೇಳುತ್ತ, ಚಾರಿತ್ರಿಕವಾಗಿ ಮಹಿಳೆಯನ್ನು ಶೋಷಣೆಗೀಡು ಮಾಡುತ್ತಬರಲಾಗಿದೆ ಎಂಬುದನ್ನು ಮುಂದಿನ ಸಾಲುಗಳು ಸಮರ್ಥವಾಗಿ ಬಿಂಬಿಸಿವೆ.

ಸ್ವಲ್ಪ ಕಾಲ ಪ್ರಬಂಧ ಕನ್ಯೆ
ನೀರೂರಿಸುವ ಅರೆಗಿಳಿ
ರಾಜರಿಗೋಸ್ಕರ ರೋದಿಸಿದ ಕೋಗಿಲೆ
ಸ್ತನಗಳ ಭಾರದಿಂದ ಸತ್ತ ಶವ
ಮನುಷ್ಯಳಲ್ಲ ಅಪ್ಪಭೋಗ

ಸ್ತ್ರೀ ಎಂದರೆ ಪುರುಷನ ಲೈಂಗಿಕ ಬಯಕೆಯನ್ನು ತೀರಿಸುವ ವಸ್ತು ಎನ್ನುವ ವ್ಯವಸ್ಥೆಯ ಮನೋಭಾವವನ್ನು ಖಂಡಿಸುತ್ತ, ಸನಾತನ ಕಾಲದಿಂದಲೂ ಹೆಣ್ಣನ್ನು ಸತಿತ್ವ, ಪಾತಿವ್ರತ್ಯ, ಪಾವಿತ್ರ್ಯಗಳ ನೆಪವೊಡ್ಡಿ ತನ್ನ ಅಧೀನವಾಗಿಸಿಕೊಂಡ ಪುರುಷ, ಆಕೆಯನ್ನು ಲೈಂಗಿಕ ವಸ್ತುವನ್ನಾಗಿ ಉಪಯೋಗಿಸಿದ. ಇಂಥ ಪಾರಂಪರಿಕ ಮೌಲ್ಯಗಳನ್ನು ಹೇರುವ ಪುರುಷ ಪ್ರಧಾನ ವ್ಯವಸ್ಥೆ ಹುನ್ನಾರಗಳನ್ನು ಅರಿತ ಇಂದಿನ ಎಚ್ಚೆತ್ತ ಮಹಿಳೆ ಅಂತಹ ಹುಸಿ ಮೌಲ್ಯಗಳಿಗೆ ಬದ್ಧವಾಗುವುದಿಲ್ಲವೆಂದು ದಿಟ್ಟವಾಗಿ ಹೇಳುವುದು ಹೀಗಿದೆ.

ಆದರೆ ನಾಳೆ ನಾನು
ಪತಿವ್ರತಾ ತಾಯಿಯಲ್ಲ
ಕಾವ್ಯ ಕನ್ಯೆಯಲ್ಲ
ಅರೆಗಿಳಿಯಲ್ಲ
ಫ್ಯಾಶನ ಫೆರೆಡ್ ಬೊಂಬೆಯಲ್ಲ
ಹಸುಗೂಸುಗಳನ್ನು ಕೊಲ್ಲುವ ಪಾಪಿಯಲ್ಲ
'ಪಂಚಾದಿ ನಿರ್ಮಲ' ವಾರಸುದಾರಳು[೧೬]

(ಓಲ್ಗಾ, ಓಲ್ಗಾ ಕವಿತಲು ಕೊನ್ನಿ, ಪುಟ-೧೫)

ಪಿತೃ ಪ್ರಧಾನ ಸಂಸ್ಕೃತಿಯಲ್ಲಿ ಕಲಾರಾಧನೆಯ ನೆಪದಲ್ಲಿ ಸ್ತ್ರೀ ಶೋಷಣೆ ಹೇಗೆ ನಡೆದಿದೆ ಎಂಬುದನ್ನು ಧ್ವನಿಸಿದೆ. ಇಡೀ ಸಾಮಾಜಿಕ ವ್ಯವಸ್ಥೆಯಲ್ಲಿಯೇ ಹಾಸುಹೊಕ್ಕಾಗಿರುವಂಥ ಪುರುಷ ಪ್ರಧಾನ ಮೌಲ್ಯಗಳಿಗೆ ಅಡಿಪಾಯ ದೊರೆಯುವುದು ಕುಟುಂಬದಲ್ಲಿಯೇ. ಹೆಣ್ಣಿನ ಬೌದ್ಧಿಕ ಹಾಗೂ ಭೌತಿಕ ಚಲನೆಗಳಿಗೆ ಯಾವುದೇ ಆಸ್ಪದವಿರುವುದಿಲ್ಲ ಇಲ್ಲಿ ಹೆಣ್ಣು ಮಕ್ಕಳನ್ನು ಹೆರುವ, ಪೋಷಿಸುವ ಒಂದು ಪರಿಕರವಾಗಿ ಪರಿಗಣಿಸುವುದರ ಬಗ್ಗೆ ಕವಯತ್ರಿ 'ಪ್ರತಿ ಸ್ತ್ರೀ ಒಕ ನಿರ್ಮಲ ಕಾವಾಲಿ' ಕವನದಲ್ಲಿ ವಿಷಾದದಿಂದ ಹೇಳಿರುವಳು.

ತಿನ್ನುವುದು ಮಕ್ಕಳನ್ನು ಹೆರುವುದು ಬಿಟ್ಟು
ಮತ್ತಾವುದು ಹಿಡಿಸದ
ಇಡಿಸಿಕೊಳ್ಳುವುದಕ್ಕೆ ತೀರದ

ಯಂತ್ರ ಚಕ್ರ[೨೭]

(ಓಲ್ಗಾ (ಸಂ) ನೀಲಿ ಮೇಘಲು, ಪುಟ-೨೧೦,೨೧೧)

ಸ್ತ್ರೀಯರನ್ನು ಒಂದು ವಸ್ತುವಿನಂತೆ ಪರಿಗಣಿಸಿ ಅದನ್ನು ರಕ್ಷಿಸುವ ಇಲ್ಲವೆ, ಭಕ್ಷಿಸುವ ಅಧಿಕಾರವನ್ನು ಪುರುಷ ಹೊಂದಿದ್ದಾನೆ. ಅಂದರೆ ಸ್ತ್ರೀಗೆ ಸ್ವಾತಂತ್ರ್ಯ, ಸಮಾನತೆ, ಸ್ವಾವಲಂಬನೆಗಳು ಕನಸುಗಳಾಗಿವೆ. ಸ್ತ್ರೀ ಬದುಕಿನ ದುರಂತ ಸ್ಥಿತಿ ಕುರಿತು ಈ ಕಾವ್ಯ ವಿಷಾದಿಸಿದೆ.

ಮಂದರಪು ಹೈಮಾವತಿ ತೆಲುಗು ಸ್ತ್ರೀವಾದಿ ಲೇಖಕಿಯರಲ್ಲಿ ಒಬ್ಬರು. ಇವರ ಕವನ ಸಂಕಲನಗಳೆಂದರೆ "ಸೂರ್ಯುಡು ತಪ್ಪಿ ಪೊಯಾಡು" ನಿಷಿದ್ದಾಕ್ಷರಿ, ಇತ್ಯಾದಿ "ಸರ್ಪಪರಿಷ್ಯಂಗಂ" ಕವಿತೆ ಚಿರಸ್ಮರಣೆಯವಾದ ಸ್ತ್ರೀವಾದಿ ಕವಿತೆಗಳಲ್ಲಿ ಒಂದಾಗಿದೆ. ಸತಿಪತಿಗಳಲ್ಲಿನ ಅನ್ಯೂನ್ಯತೆಯನ್ನು ಆರ್ಥಿಕತೆ ಯಾವ ರೀತಿ ವಿಷಮ ದಾಂಪತ್ಯವನ್ನಾಗಿಸುತ್ತದೆ ಎಂಬುದನ್ನು ಹೇಳುತ್ತದೆ.

ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಯು ಗಂಡನಿಗೋಸ್ಕರ ಮಕ್ಕಳಿಗೋಸ್ಕರ ನಿರೀಕ್ಷಿಸುತ್ತ, ಅವರಿಗೋಸ್ಕರ ಕನಸುಗಳನ್ನು ಕಾಣುತ್ತ, ಅವರ ಅಗತ್ಯತೆಗಳಿಗಾಗಿ ಬದುಕುತ್ತ ಇಡೀ ಜೀವನವನ್ನೆ ತ್ಯಾಗಮಾಡುತ್ತ ಚೈತನ್ಯ ಹೀನಳಾಗಿದ್ದಾಳೆ. ಗಂಡನಾದವನು ಕುಡುಕನೇ ಆಗಿರಲಿ, ತಿರುಭೋಕಿನೇ ಆಗಿರಲಿ, ಮದುವೆ ಮಾಡಿಕೊಂಡ ತಪ್ಪಿಗಾಗಿ ಅವನು ನೀಡುವ ಎಲ್ಲ ಹಿಂಸೆಯನ್ನು ತಾಳ್ಮೆಯಿಂದ ಸಹಿಸುವಂತೆ ಹೆಣ್ಣು ಮಕ್ಕಳಿಗೆ ತಂದೆ, ತಾಯಿ ಆದವರು ಚಿಕ್ಕವಯಸ್ಸಿನಿಂದಲೂ ಕೆಲವು ಸಿದ್ದ ಮೌಲ್ಯಗಳನ್ನು ಬೋಧಿಸುತ್ತ ಬಂದಿರುತ್ತಾರೆ. ಇವುಗಳೇ ಮಹಿಳಾ ಶೋಷಣೆಗೆ ಪ್ರಧಾನ ಕಾರಣ ಎಂಬುದನ್ನು ಕವಯತ್ರಿ "ಸರ್ದುಕು ಪೋ" ಕವಿತೆಯ ಮೂಲಕ ವ್ಯಕ್ತಪಡಿಸಿದ್ದಾರೆ.

ಜೀವನವನ್ನು
ಕುಡುಕನಿಗೆ ಅರ್ಪಿಸಿ
ಹೆಂಡತಿ ಮಕ್ಕಳನ್ನು
ಜೀವವಿರುವ ಶವವನ್ನು ಮಾಡಿ
ಸಾವಾದರು ಬದುಕಾದರೂ
ಅತ್ತೆಯ ಮನೆಯಲ್ಲೇ
ತವರು ಮನೆಗೆ ಹೆಜ್ಜೆಯಿಟ್ಟರೆ
ಬೆಲೆಯಿರದು ಸಮಾಜದಲ್ಲಿ
ಹೊಂದಿಕೊಂಡು ಹೋಗಬೇಕಮ್ಮ ! ಹೊಂದಿಕೊಂಡು ಹೋಗಬೇಕು[೨೮]

(ಮಂದರಪು ಹೈಮಾವತಿ, ನಿಷಿದ್ದಾಕ್ಷರಿ, ಪುಟ.೧೯)

ಮದುವೆಯಾದ ಹೆಣ್ಣು ಸಾವೆ ಇರಲಿ, ನೋವೆ ಇರಲಿ ಗಂಡನ ಮನೆಯಲ್ಲಿಯೇ ಬದುಕಬೇಕು. ಒಂದು ವೇಳೆ ಗಂಡನ ಹಿಂಸೆ ತಾಳಲಾರದೆ ತವರು ಮನೆಗೆ ಬಂದರೆ ಪುರುಷ ಪ್ರಧಾನ ವ್ಯವಸ್ಥೆಯ ಸಮಾಜ ಇಲ್ಲ ಸಲ್ಲದ ಅನೈತಿಕ ಸಂಬಂಧಗಳ ಬೆಲೆಕಟ್ಟಿ ಹೀನಾಯವಾಗಿ ಕಾಣುತ್ತದೆ.

ಹಾಗಾಗಿ ಸಹಿಸಿಕೊಳ್ಳಬೇಕು ಎಂದು ಬುದ್ಧಿವಾದ ಹೇಳುವ ತಂದೆ, ತಾಯಿಯರ ಮಾತುಗಳ ಹಿಂದೆ ಪುರುಷ ಪ್ರಧಾನ ವ್ಯವಸ್ಥೆಯ ಕುತಂತ್ರಗಳು ಇರುವುದನ್ನು ಕಾಣಬಹುದು. ಈ ಪುರುಷ ಪ್ರಧಾನ ಸಮಾಜ ರಚನೆಯಲ್ಲಿ ಹುಟ್ಟಿ ಬೆಳೆಯುವ ಹೆಣ್ಣಿನ ಮನಸ್ಸು, ಪ್ರಜ್ಞೆ ಸಹ ಪುರುಷ ಮೌಲ್ಯಗಳಿಂದಲೇ ನಿಯಂತ್ರಿತಗೊಂಡಿರುತ್ತದೆ ಎಂಬುದನ್ನು ಈ ಕವನ ವ್ಯಕ್ತಪಡಿಸುತ್ತದೆ.

ಪಿತೃಪ್ರಧಾನ ವ್ಯವಸ್ಥೆ ಮಹಿಳೆಯರ ಸುತ್ತ ಸಹನೆ, ತ್ಯಾಗ ಪಾತಿವ್ರತ್ಯ, ಸಮರ್ಪಣೆಯಂತಹ ಮುಂತಾದ ಹುಸಿ ಮೌಲ್ಯಗಳ ಆವರಣವನ್ನು ನಿರ್ಮಿಸಿ ಸ್ತ್ರೀ ಸಮುದಾಯವನ್ನು ನಿಯಂತ್ರಿಸಲಾಗುತ್ತಿದೆ. ಇಂತಹ ಮೌಲ್ಯಗಳ ಹಿಂದೆ ಇರುವ ಪುರುಷರ ಢಾಂಭಿಕತೆ, ಕುತಂತ್ರಗಳನ್ನು ಮಂದರಪು ಹೈಮಾವತಿ ಅವರ ಕವನ ಎತ್ತಿತೋರಿಸುತ್ತದೆ.

ಮನೆ ಕೆಲಸದಲ್ಲಿ ಬಿಡುವಿಲ್ಲದೆ
ಹೊರ ಜಗತ್ತಿಗೆ ಗವಾಕ್ಷಿಗಳು ಮುಚ್ಚಿಕೊಂಡು
ಪಂಜರದಲ್ಲಿನ ಪಕ್ಷಿಯಂತೆ
ಬಂದಿಖಾನೆಯಲ್ಲಿ ಕೊಳೆಯುವುದು ನಾವೇ
ಹೌದು ಸ್ತ್ರೀಯರನ್ನು ಗೃಹಲಕ್ಷ್ಮಿಯರನ್ನಾಗಿ ಪೂಜಿಸುತ್ತಾರಿಲ್ಲಿ !

ಮಹಿಳೆ ಎಷ್ಟೇ ಪ್ರತಿಭಾವಂತೆಯಾದರೂ ನಾಲ್ಕು ಗೋಡೆಗಳ ಮಧ್ಯೆ ಬಂಧಿಯಾಗಿರಬೇಕಾಗುತ್ತದೆ. ಇವಳ ಭಾವನೆಗಳಿಗಾಗಲಿ ಅಭಿವ್ಯಕ್ತಿಗಾಗಲಿ ಯಾವುದೇ ಆಸ್ಪದವನ್ನು ಈ ವ್ಯವಸ್ಥೆಯ ಸಮಾಜ ನೀಡುವುದಿಲ್ಲ. ಹೆಣ್ಣಿನ ಇಂತಹ ಅಸಹಾಯಕತೆಯ ಕುರಿತು ಕವಯತ್ರಿ ವಿಷಾದವನ್ನು ವ್ಯಕ್ತಪಡಿಸಿದ್ದಾರೆ.

ಮನೆಯ ಗ್ಯಾಸ್ ಕಾರ್ಡ್‌ಮೇಲೆ, ರೇಷನ್ ಕಾರ್ಡ್‌ಮೇಲೆ ಆತನ ಹೆಸರೆ
ಅಡುಗೆ ಮನೆ ಸಾಮ್ರಾಜ್ಯಕ್ಕೆ ಮಾತ್ರ
ಏಕ ಛತ್ರಾಧಿಪತ್ಯ ನಮ್ಮದೇ
ಆದರೆ ಅಡುಗೆ ಮಾತ್ರ ಶ್ರೀಯುತರ ಅಭಿರುಚಿಗೆ ತಕ್ಕಂತೆಯೇ[೯]

(ಮಂದರಪು ಹೈಮಾವತಿ, ನಿಷಿದ್ದಾಕ್ಷರಿ, ಪುಟ-೬೧)

ಈ ಪಿತೃ ಪ್ರಧಾನ ವ್ಯವಸ್ಥೆಯ ಸಮಾಜ ಮಹಿಳೆಯರನ್ನು ಪರಂಪರಾಗತವಾಗಿ ಅಡಿಗೆ ಮನೆಯ ಕೆಲಸಕ್ಕೆ ತಳ್ಳುತ್ತ ಬಂದಿದೆ. ಇಲ್ಲಿನ ಪರಿಕರ (ಸಾಮಾನು)ಗಳ ಮೇಲಾಗಲಿ, ಅಡುಗೆ ಮನೆಯ ಮೇಲಾಗಲಿ ಯಾವುದೇ ಹಕ್ಕು ಇರುವುದಿಲ್ಲ. ಕೊನೆಯ ಪಕ್ಷ ಅವಳಿಗೆ ಇಷ್ಟವಾದ ಅಡುಗೆಯನ್ನು ಮಾಡಿಕೊಂಡು ತಿನ್ನುವ ಹಕ್ಕು ಕೂಡ ಇರುವುದಿಲ್ಲ. ಗಂಡ ಹೇಳಿದ ತಿಂಡಿಯನ್ನು ಮಾಡಿ ಬಡಿಸುವುದಷ್ಟೇ ಅವಳ ಕೆಲಸ. ಇಂತಹ ಬಿಟ್ಟಿಚಾಕರಿ ಕೆಲಸಗಳಿಂದ ಮಹಿಳೆಯರು ಹೊರ ಬಂದು ತಮ್ಮ ತಮ್ಮ ಅಸ್ತಿತ್ವವನ್ನು ಹೊಂದಿ ಸ್ವತಂತ್ರವಾಗಿ ಬದುಕಬೇಕೆಂದು ಸ್ತ್ರೀ ಸಮುದಾಯಕ್ಕೆ "ಗೃಹಲಕ್ಷ್ಮೀಲ್ನಿ ಪೂಜಿಸ್ತಾಂ" ಕವಿತೆಯ ಮೂಲಕ ಕರೆ ನೀಡುತ್ತಾರೆ.

ಪಿತೃ ಪ್ರಧಾನ ಸಾಮಾಜಿಕ ವ್ಯವಸ್ಥೆ ಅನಾದಿ ಕಾಲದಿಂದಲೂ ಮಹಿಳೆಗೆ ಸ್ವಾತಂತ್ರ್ಯವನ್ನು ನೀಡಿಲ್ಲ. ಧರ್ಮ, ಸಂಪ್ರದಾಯ, ನೀತಿಸೂತ್ರ, ಪಾತಿವ್ರತ್ಯದ ಮೌಲ್ಯಗಳ ನೆಪದಲ್ಲಿ ಹೆಣ್ಣನ್ನು ಭೌತಿಕ ಹಾಗೂ ಬೌದ್ಧಿಕವಾಗಿ ನಿಯಂತ್ರಿಸುತ್ತಲೇ ಬಂದಿದೆ ಎಂಬುದನ್ನು ಹೀಗೆ ಹೇಳುತ್ತಾರೆ.

ಹಾಗೆ ಬಿದ್ದು ಬಿದ್ದು ನಗುವುದು ತಪ್ಪಲ್ಲವೇ
ಅದರಗಳ ಮೇಲೆ ಕಿರು ನಗೆಯ ಮಂದಹಾಸವೆ ಸುಂದರ
ಹಾಗೆ ಗಂಡನ ಮಾತನ್ನು ಎದುರಿಸುತ್ತೀಯಾ ಯಾಕೆ

ಈ ವ್ಯವಸ್ಥೆಯ ಸಮಾಜದಲ್ಲಿ ಹೆಣ್ಣಿಗೆ ಮನುಷ್ಯ ಸಹಜ ಭಾವನೆಗಳಾದ ಅಳುವುದು, ನಗುವುದು, ನಡೆಯುವುದು ಸಹ ನಿಷಿದ್ಧವಾಗಿವೆ. ಗಂಡನ ಮಾತಿಗೆ ಪ್ರತಿ ಉತ್ತರ ಕೊಡುವಂತಿಲ್ಲ ಎನ್ನುವಂತಹ ನಿರ್ಬಂಧಗಳನ್ನು ಈ ಪಿತೃ ಪ್ರಧಾನ ವ್ಯವಸ್ಥೆಯ ಸಮಾಜ ನಿರ್ಬಂಧವನ್ನು ಹಾಕಿದೆ. ಅದಕ್ಕಾಗಿಯೆ ಕವಯತ್ರಿ ಪುರುಷ ಪ್ರಧಾನ ವ್ಯವಸ್ಥೆಯ ವಿರುದ್ಧ ಹೋರಾಟದ ಕಹಳೆಯನ್ನು ಊದುತ್ತ ಮಹಿಳೆಯರೆಲ್ಲ ಒಂದಾಗಿ ಈ ವ್ಯವಸ್ಥೆ ಹೆಣೆದಿರುವ ಮೌಲ್ಯಗಳನ್ನು, ಧರ್ಮಗ್ರಂಥ. ಶಾಸ್ತ್ರಗಳನ್ನು ಬದಲಾಯಿಸಬೇಕೆಂದು "ಸಿಲಬಸ್ ಮಾರ್ಚಲೆಮಾ" ಕವಿತೆಯಲ್ಲಿ ಈ ರೀತಿಯಲ್ಲಿ ಚಿತ್ರಿಸಿದ್ದಾರೆ.

ಈಗೀಗಲೆ ಅನಿಸುತ್ತದೆ ನಮಗೆ
ಎಷ್ಟುದಿನ ಈ ಪೂರ್ವಕಾಲದ ಪಾಠಗಳು
ಮನಸ್ಸನು ಗುರುತಿಸಲಾಗದ ಹಳೆಯಕಾಲದ ಭಾವನೆಗಳು
ಎಲ್ಲರೂ ಸೇರಿ ಈ ಜೀವನ ಸಿಲಬಸ್ ಬದಲಾಯಿಸಲಾರೆವಾ[೨೦]

(ಮಂದರಪು ಹೈಮಾವತಿ, ನಿಷಿದ್ಧಾಕ್ಷರಿ, ಪುಟ-೪೧,೪೨)

ಮಹಿಳೆಯರೆಲ್ಲ ಒಂದಾಗಿ ಹೋರಾಡಿ ತಮ್ಮನ್ನು ಗುಲಾಮಳನ್ನಾಗಿ ಮಾಡಿರುವ ಪುರುಷ ಪ್ರಧಾನ ವ್ಯವಸ್ಥೆಯ ಸಾಂಪ್ರದಾಯಕ ಮೌಲ್ಯಗಳನ್ನು ಧ್ವಂಸಮಾಡಿ ಪುರುಷರಿಗೆ ಸರಿಸಮಾನವಾದ ಸ್ಥಾನಮಾನವನ್ನು ಪಡೆಯ ಬಲ್ಲೆವು ಎನ್ನುವ ಆಶಯವನ್ನು ಒಂದನ್ನು ಕವಯತ್ರಿ ವ್ಯಕ್ತಪಡಿಸಿದ್ದಾರೆ.

ಶಿಲಾಲೊಲಿತ ತೆಲುಗು ಸ್ತ್ರೀವಾದಿ ಲೇಖಕಿಯರಲ್ಲಿ ಒಬ್ಬರಾಗಿದ್ದು, "ಕವಯತ್ರುಲ ಕವಿತ್ವಂಲೊ ಸ್ತ್ರಿ ಮನೋಭಾವಾಲು" ಎಂಬ ಪಿಎಚ್.ಡಿ. ಮಹಾಪ್ರಬಂಧ. ಇವರ ಕವನ ಸಂಕಲನಗಳೆಂದರೆ, ಪಂಜರಾನ್ನಿ ನೆನೆ...ಪಕ್ಷಿನಿ ನೆನೆ, ಎಂತೆಂತ ದೂರಂ, ಗಾಜುನದಿ,...ಇತ್ಯಾದಿ ಇವರ ಲೆಖನಗಳನ್ನು "ನಾರಿ ಸಾರಿಂಚಿ" ಎಂಬ ಶಿರ್ಷಿಕೆಯಡಿ ೨೦೦೬ರಲ್ಲಿ ಹೊರತರಲಾಗಿದೆ.

ಪುರುಷ ಪ್ರಧಾನ ಸಂಸ್ಕೃತಿಯಲ್ಲಿ ನಡೆಯುವ ಸ್ತ್ರೀ ಶೋಷಣೆಯ ನೆಲೆಗಳನ್ನು ಗುರುತಿಸಿ ಪ್ರತಿಭಟಿಸುವುದು, ಎಲ್ಲ ಕ್ಷೇತ್ರಗಳಲ್ಲಿಯೂ ಪುರುಷ ಪ್ರಾಬಲ್ಯದಿಂದ ಮಹಿಳೆಯರಿಗೆ ಆಗಿರುವ ಅನ್ಯಾಯವನ್ನು ಎತ್ತಿ ತೋರಿಸುವುದು ಇವರ ಕವನಗಳ ಪ್ರಧಾನ ಆಶಯವಾಗಿದೆ.

ಪಿತೃಪ್ರಧಾನ ವ್ಯವಸ್ಥೆ ಪುರುಷನ ಪ್ರಾಬಲ್ಯ ಮತ್ತು ಸ್ತ್ರೀಯ ಅಧೀನತೆ ಸಹಜವೆಂಬಂತೆ ರೂಪುಗೊಂಡು ಸರ್ವವ್ಯಾಪ್ತಿಯಾಗಿದೆ. ಸಾಮಾಜೀಕರಣ ಅದನ್ನು ಪೋಷಿಸುತ್ತ ಶಾಶ್ವತಗೊಳಿಸುತ್ತ ಹೋಗುತ್ತದೆ. ಕೇವಲ ಅಭ್ಯಾಸ ಬಲದಿಂದ ಪುರುಷರು ಆಳುವವರಾಗಿ ರೂಪುಗೊಳ್ಳುತ್ತಾರೆ. ಕುಟುಂಬದ ಒಳಗೆ ಪ್ರಾರಂಭವಾದ ಈ ಆಳ್ವಿಕೆ ವ್ಯವಸ್ಥೆ ಕುಟುಂಬದ ಹೊರಗಿನ ಸಾಮಾಜಿಕ ಸಾಂಸ್ಕೃತಿಕ ವಲಯಗಳಲ್ಲಿಯೂ ಕಾಣಿಸಿಕೊಳ್ಳುತ್ತದೆ ಎನ್ನುವ ವಿಚಾರಗಳನ್ನು ಹೇಳುತ್ತ ಈ ವ್ಯವಸ್ಥೆ ಹೆಣ್ಣಿನ ದೇಹವನ್ನು ಹೇಗೆ ಪರಿಕಲ್ಪಿಸಿಕೊಂಡಿದೆ ಎಂಬುದನ್ನು "ಸರುಕು" ಎಂಬ ಕವಿತೆಯಲ್ಲಿ ಹೀಗೆ ಬಿಚ್ಚಿಟ್ಟಿದ್ದಾರೆ.

ಸ್ತ್ರೀ ಶರೀರವಾಗಿದೆ
ಒಂದು ವಸ್ತುವಾಗಿದೆ
ಒಂದು ವ್ಯಾಪಾರ ಸರಕಾಗಿದೆ
ಬಂಡಿಗಟ್ಟಲೆ ಚಾಕರಿ ಮಾಡುವ ಯಂತ್ರಮಾನವಳಾಗಿದ್ದಾಳೆ
ಮಾನಸಿಕ ಸಂಚಲನದಿಂದ ದೂರವಾದ ರೊಬೋಟ್ ಆಗಿದ್ದಾಳೆ
ಮಾತು, ನೋಟ, ನಗು, ನಡಿಗೆ ಯಾವೂ ಆಕೆಯವಲ್ಲ
ನಿರ್ಣಯ, ನಿರ್ದೇಶನಗಳ ಕಟ್ಟೆಗೆಯ ಬೊಂಬೆ
ಸಮಾಜದ "ರಿಮೋಟ್ ಕಂಟ್ರೋಲ್" ಎತ್ತತಿರುವುದೆ ಅತ್ತ[೨೧]

(ಶಿಲಾಲೊಲಿತ, ಪಂಜರಾನ್ನಿ ನೆನೆ ಪಕ್ಷಿನಿ ನೆನೆ, ಪುಟ-೬೦-೬೧)

ಈ ವ್ಯವಸ್ಥೆ ಹೆಣ್ಣಿನ ಶರೀರವನ್ನು ಮಾರುವ ಸರಕಾಗಿ ಪರಿಗಣಿಸಿ, ಅದನ್ನು ಕೊಳ್ಳುವ ಅಥವಾ ಮಾರುವ ಅಧಿಕಾರವನ್ನು ಪುರುಷನಿಗೆ ಸೇರಿದ್ದು, ಈ ವ್ಯವಸ್ಥೆಯೊಳಗೆ ಹೆಣ್ಣಿನ ಮನಸ್ಸನ್ನಾಗಲಿ ಅಥವಾ ಅವಳ ಭಾವನೆಗಳಿಗಾಗಲಿ ಯಾವುದೇ ಬೆಲೆ ಇರುವುದಿಲ್ಲ. ಪುರುಷ ಆಡಿಸಿದಂತೆ ಆಡುವ ಕೈಗೊಂಬೆ ಮಹಿಳೆ ಎಂದು ಕವಯತ್ರಿ ತಮ್ಮ ಅಸಹಾಯಕತೆಯನ್ನು ವ್ಯಕ್ತಪಡಿಸಿದ್ದಾರೆ.

ಪಿತೃ ಪ್ರಧಾನ ವ್ಯವಸ್ಥೆಯ ಸಮಾಜದಲ್ಲಿ ಗಂಡ ಹೆಂಡತಿಯನ್ನು ಸೇವಕಿ ಇಲ್ಲವೆ ಗುಲಾಮಳನ್ನಾಗಿ ನೋಡುತ್ತಾನೆ. ಈ ಕಾರಣಕ್ಕಾಗಿ ವಿವಾಹ ಹೆಣ್ಣಿನ ಪಾಲಿಗೆ ಸುಖಪ್ರದವಾದುದಲ್ಲ ಎಂಬ ವಿಚಾರವನ್ನು ಶಿಲಾಲೊಲಿತ 'ಪೆಳ್ಳಿ' ಎಂಬ ಕವಿತೆಯ ಮೂಲಕ ವ್ಯಕ್ತಪಡಿಸಿದ್ದಾರೆ.

ನಿನಗೆ
ನಿನ್ನ ಬಯಕೆಗಳಿಗೆ ವೇದಿಯಾಗಿದ್ದು
ನಿನ್ನ ಕಣ್ಣರೆಪ್ಪೆಗಳು ಸಹಿತ ಅಲುಗಾಡಲು ಬಿಡದ
ಚಾಕರಿಕೆ, ಪರಿಚಾರಿಕೆ, ಗುಲಾಮತನ, ಮೊದಲಾದ
ಸಂಹಾರವೆಲ್ಲ ನಿನ್ನ ಜೀವನವನ್ನಾಕ್ರಮಿಸಿದೆ[೨೨]

(ಶಿಲಾಲೊಲಿತ, ಎಂತೆಂತ ದೂರಂ, ಪುಟ-೫೫)

ಗಂಡ ಹೆಣ್ಣಿನ ಬಗೆಗೆ ತೋರಿಸುವ ಪ್ರೀತಿ ಪ್ರೇಮಗಳೆಲ್ಲವೂ ಸ್ವಾರ್ಥ ಪ್ರೇರಿತವಾದ ನಟನೆಗಳು. ಇಂಥ ಸೋಗಿನ ಮೂಲಕ ತನ್ನ ಲೈಂಗಿಕ ಬಯಕೆಯನ್ನು ತೀರಿಸಿಕೊಳ್ಳುವುದಲ್ಲದೆ ಮಕ್ಕಳನ್ನು ಹೆರುವ, ಪೋಷಿಸುವ ಯಂತ್ರವಾಗಿಸುತ್ತಾನೆ. ಆದ್ದರಿಂದ ಗಂಡಸರ ಕುತಂತ್ರಹುನ್ನಾರಗಳಿಗೆ ಬಲಿಯಾಗುದೆ ಇವುಗಳಿಂದ ಹೊರಬಂದು ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ಸ್ವತಂತ್ರವಾಗಿ ಬದುಕಬೇಕೆಂಬ ಆಶಯವನ್ನು ಈ ಕವಿತೆಯಲ್ಲಿ ವ್ಯಕ್ತಪಡಿಸಿದ್ದಾರೆ.

ಪುರುಷ ಪ್ರಧಾನ ವ್ಯವಸ್ಥೆಯ ಸಮಾಜವು ಹೆಣ್ಣು ಎಂದರೆ ಸೌಂದರ್ಯ ಸೌಂದರ್ಯವೆಂದರೆ ಹೆಣ್ಣು ಎಂದು ಪರಿಭಾವಿಸುವ ಮನೋಧೋರಣೆಯನ್ನು ಶಿಲಾಲೊಲಿತ ಪ್ರಬಲವಾಗಿ ಖಂಡಿಸಿದ್ದಾರೆ. ಹೆಣ್ಣಿನ ಮನಸ್ಸಿಗೆ ನೆಲೆಯಾದ ಅವಳ ದೇಹದ ಮೇಲೆ ಅವಳಿಗೆ ಹಕ್ಕಿರುವುದಿಲ್ಲ. ಪುರುಷನ ಕಾಮೋದ್ವೇಗವನ್ನು ಬಡಿದೆಬ್ಬಿಸುವ ಅಥವಾ ಅವನ ಮನಸ್ಸನ್ನು ಉಲ್ಲಾಸಗೊಳಿಸುವ ಸೌಂದರ್ಯ ಪರಿಕರಗಳಲ್ಲಿ ಒಂದನ್ನಾಗಿ ನೋಡಲಾಗುತ್ತಿದೆ ಈ ವ್ಯವಸ್ಥೆಯ ಸಮಾಜ.

ನನ್ನ ಬಾಯಿಗೆ ಯಾರೋ ರೂಪ ಕಲ್ಪನೆ ಮಾಡಿದ ಬಾಷೆಯನ್ನು
ನನ್ನ ಕೈ, ಕಾಲುಗಳಿಗೆ, ಮೂಗು, ತಲೆಗೆ
ಕೋಲೆಬಸವನಂತೆ ಅಲಂಕರಣಗಳ ಸಂಕೋಲೆ ಒತ್ತುತ್ತಾರೆ
ನಾನೊಂದು ಪ್ರದರ್ಶನ ವಸ್ತುವೆಂದು
ನನ್ನ ಒಂಟಿ ಕಾಲೂ, ಮೈಬಣ್ಣವೂ ಹೊಟ್ಟೆ ಚೀಲಗಳು
ಕಡಲೆ ಹಿಟ್ಟಿನ ಪೌಡರುಗಳಿಂದ ಕಾಪಾಡಿಕೊಳ್ಳುತ್ತಲೇ ಇರಬೇಕು
ನನ್ನನೊಂದು ಚೌಕಟ್ಟಿನಲ್ಲಿ ಬಂಧಿಸಿ
ಶರೀರವನ್ನು ಶೀಲಕ್ಕೆ ಆಳತೆಗೋಲೆಂಬ ಅಗ್ನಿಪ್ರವೇಶವನ್ನು ಪ್ರಶ್ನಿಸುತ್ತಿದ್ದೇನೆ
ಪಂಜರವೂ ನಾನೆ
ಪಕ್ಷಿಯೂ ನಾನೆ[೨೩]

(ಶಿಲಾಲೊಲಿತ, ಕವಯಿತ್ರುಲ ಕವಿತಾ ಮಾರ್ಗಂ, ಪುಟ-೧೭೩)

ಹೆಣ್ಣಿಗೆ ಸೌಂದರ್ಯ, ಅಲಂಕಾರ, ಅಂದ ಭದ್ರತೆಯನ್ನು ಒದಗಿಸುತ್ತದೆ, ಜೊತೆಗೆ ಬದುಕನ್ನು ನೀಡುತ್ತದೆ. ತನ್ನ ಸೌಂದರ್ಯವನ್ನು ಕಾಪಾಡಿಕೊಳ್ಳುವುದು ಆಧ್ಯ ಕರ್ತವ್ಯ. ಇಲ್ಲದೆ ಇದ್ದರೆ ಗಂಡನಾದವನು ಅನ್ಯಕ್ರಾಂತನಾಗಬಹುದು ಎನ್ನುವ ಕುತಂತ್ರಗಳನ್ನು ಹೆಣೆದು ತನ್ನನ್ನು ತಾನು ಬಂಧಿಸಿಕೊಳ್ಳುವಂತೆ ಮಾಡಿದೆ ಈ ಪುರುಷ ಪ್ರಧಾನ ವ್ಯವಸ್ಥೆಯ ಸಮಾಜ. ಮಹಿಳೆಯರು ಇಂತಹ ಕುತಂತ್ರಗಳಿಂದ ಹೊರಬಂದು ಹಕ್ಕಿಯಂತೆ ಸ್ವತಂತ್ರವಾಗಿ ಹಾರಾಡುವುದನ್ನು, ಬದುಕುವುದನ್ನು ಕಲಿಯಬೇಕು ಎನ್ನುವಂತಹ ಆಶಯವನ್ನು ವ್ಯಕ್ತಪಡಿಸಿದ್ದಾರೆ.

ಪಾಟಿಬಂಡ್ಲ ರಜನಿ ಅವರು "ಎರ್ರಿ ಜಾಬಿಳ್ಳ ಎರಿನಾ" ಎಂಬ ಕವನ ಸಂಕಲನವನ್ನು ಪ್ರಕಟಿಸುವ ಮೂಲಕ ತೆಲುಗು ಸ್ತ್ರೀವಾದಿ ಕಾವ್ಯಕ್ಷೇತ್ರಕ್ಕೆ ತಮ್ಮದೆ ಆದ ಕೊಡುಗೆಯನ್ನು

ನೀಡಿದ್ದಾರೆ. "ಮಾಮಗಾರಿ ಕಥಲು" ಶಿರ್ಷಿಕೆಯಡಿ ವಾರ್ತೆ ದಿನ ಪತ್ರಿಕೆಗಳಲ್ಲಿ ಧಾರವಾಹಿಯಾಗಿ ಸ್ತ್ರೀವಾದಿ ಕಥೆಗಳನ್ನು ಬರೆದಿದ್ದಾರೆ.

ಪುರುಷ ಪ್ರಧಾನ ವ್ಯವಸ್ಥೆಯ ಸಮಾಜದಲ್ಲಿ ಮಹಿಳೆಗೆ ಜಾತಿ, ಧರ್ಮಗಳು ಇರುವುದಿಲ್ಲ. ಇವು ಪುರುಷನಿಗೆ ಮಾತ್ರ ಸಂಬಂಧಿಸಿರುತ್ತವೆ. ಗಂಡನು ಯಾವ ಧರ್ಮ, ಜಾತಿಯನ್ನು ಪ್ರತಿನಿಧಿಸುತ್ತಾನೆಯೋ ಅವನ ಹೆಂಡತಿ, ಮಕ್ಕಳು ಅದೇ ಜಾತಿ, ಧರ್ಮವನ್ನೂ ಪ್ರತಿನಿಧಿಸುತ್ತಾರೆ. ಮದುವೆಗೆ ಸಂಬಂದಿಸಿದಂತೆ ಬೀಗತನ ಬೆಳೆಸುವಾಗ ಮೊದಲು ತಂದೆಯ ಜಾತಿ, ಗೋತ್ರಗಳನ್ನು ಕೇಳುತ್ತಾರೆಯೇ ವಿನಃ ಹೆಂಡತಿಯಾದವಳ, ತಾಯಿಯಾದವಳ ಜಾತಿ, ಧರ್ಮಗಳನ್ನು ಕೇಳುವುದಿಲ್ಲ. ಪಾಟಬಂಡ್ಲ ರಜನಿ ಅವರು "ಕುಲೌಕಿಕಂ" ಕವಿತೆಯಲ್ಲಿ ನ್ಯಾಯಾಡಳಿತ ವ್ಯವಸ್ಥೆಯು ಕೂಡ ಪಿತೃಪ್ರಧಾನ ವ್ಯವಸ್ಥೆಯನ್ನೆ ಸಮರ್ಥಿಸುತ್ತದೆ ಎನ್ನುವ ವಿಚಾರವನ್ನು ಹೇಳಿದ್ದಾರೆ.

ತಾಯಿ ಕುಲ ಸಲ್ಲದೆಂದು ನೀವನ್ನುತ್ತಿದ್ದರೆ
ಬಿದ್ದು ಬಿದ್ದು ನಗಬೇಕೆನಿಸುತ್ತದೆ
ಅಷ್ಟೇ ಅಲ್ಲ ಅಸಲು ಸ್ತ್ರೀಗೆ ಜಾತಿಯೇ ಇಲ್ಲವೆನ್ನುತ್ತಾ
ತಾಯಿಗೆ ಜಾತಿಯಿಲ್ಲ !
ತಾಯಿಗೆ ಅಲ್ಲ ತರುಣೆಯರೆಲ್ಲರಿಗೂ ಜಾತಿಯಿಲ್ಲ[೨೪]

(ಪಾಟಿಬಂಡ್ಲ ರಜನಿ, ಎರ್ರಿಜಾಬಿಳ್ಳ ಎರ್ರಿನಾ, ಪುಟ-೮೬)

ಪುರುಷ ಪ್ರಧಾನ ವ್ಯವಸ್ಥೆಯ ಸಮಾಜದಲ್ಲಿ ಕುಲ, ಗೋತ್ರ, ಧರ್ಮಗಳೆಲ್ಲವು ಪುರುಷನಿಗೆ ಸಂಬಂಧಿಸಿದವುಗಳಾಗಿರುತ್ತವೆ ಎಂಬ ಸತ್ಯವನ್ನು ತಿಳಿಸಲಾಗಿದೆ. ಹೆಣ್ಣಿನ ಅಸ್ತಿತ್ವವು ಪ್ರತಿಯೊಂದು ಕ್ಷೇತ್ರದಲ್ಲಿ ಹೇಗೆ ಕಾಣೆಯಾಗಿದೆ ಎಂಬ ವಿಚಾರವನ್ನು ಈ ಕವನ ಧ್ವನಿಸುತ್ತದೆ.

ಪಿತೃ ಪ್ರಧಾನ ಸಮಾಜದಲ್ಲಿ ಮಹಿಳೆಯರಿಗೆ ಮಕ್ಕಳನ್ನು ಹೆರುವ ಸ್ವಾತಂತ್ರ್ಯವು ಸಹ ಇರುವುದಿಲ್ಲ. ಮಕ್ಕಳು ಬೇಕು, ಬೇಡವೆಂದು ನಿರ್ಧರಿಸುವ ಅಧಿಕಾರ ಗಂಡನದೆ ಆಗಿರುತ್ತದೆ. ಹೆರಲು ಅನುಕೂಲಕರವಾದ ವಾತಾವರಣವಿಲ್ಲದೆ ಇದ್ದಾಗ, ಗರ್ಭಪಾತ ಮಾಡಿಸಿಕೊಳ್ಳುವಾಗ ಅನುಭವಿಸುವ ನೋವು, ಗಂಡನು ತೋರುವ ನಿರ್ಲಕ್ಷತೆಯನ್ನು ಪಾಟಬಂಡ್ಲ ರಜನಿ ಹೀಗೆ ಕವಿತ್ವಿಕರಿಸಿದ್ದಾರೆ.

ತಪ್ಪೊಪ್ಪುಗಳ ನಡುವೆ ತಡಕಾಡುತ್ತಲೇ
ತಳವಾರನಾಗಿ ಕಟ್ಟೆಹತ್ತಿ
ರಬ್ಬರ್ ಕೈಗಳ ಮುಸುಕು ನಿನ್ನ ಮುಖದ ಮೇಲೆ ಮುಚ್ಚಿ
ಹೊಟ್ಟೆ ಹರಿದುಕೊಂಡರೆ
ಮನಸು ಗಾಯವಾಗಿ

ಗಡಿಗೆಯಷ್ಟು ಕಣ್ಣೀರ ದುಃಖವಾಗಿ ಇದೆಯಪ್ಪ[೨೫]

(ಪಾಟಿಬಂಡ್ಲ ರಜನಿ, ಎರ್ರಿಜಾಬಿಳ್ಳ ಎರ್ರಿನಾ, ಪುಟ-೪೬)

ಬದುಕಿನಲ್ಲಿ ಹೆಣ್ಣಿಗೆ ಆಯ್ಕೆಯ ಸ್ವಾತಂತ್ರ್ಯ ಮತ್ತು ಅವಕಾಶಗಳು ಇಲ್ಲ. ಇಷ್ಟವಿಲ್ಲದೆಯೂ ಕೆಲವು ಸಂದರ್ಭಗಳಲ್ಲಿ ಬದುಕಿಗೆ ಒಗ್ಗಿಸಿಕೊಳ್ಳಬೇಕಾದ ಅನಿವಾರ್ಯ ಸ್ಥಿತಿಯನ್ನು ಹೇಳುತ್ತ ಸಮಾಜ ಹೆಣ್ಣಿನ ವಿಷಯದಲ್ಲಿ ತೋರುವ ತಾತ್ಸಾರವನ್ನು ಪ್ರಬಲವಾಗಿ ಖಂಡಿಸಲಾಗಿದೆ.

ದಲಿತ ಸಮುದಾಯದ ಹೆಣ್ಣು ಮಕ್ಕಳ ಸಾಮಾಜಿಕ, ರಾಜಕೀಯ, ಆರ್ಥಿಕ ಹಾಗೂ ಸಾಂಸ್ಕೃತಿಕ ವಿನ್ಯಾಸಗಳು ಇತರೆ ಜಾತಿ, ವರ್ಗದ ಹೆಣ್ಣು ಮಕ್ಕಳಿಗಿಂತ ಭಿನ್ನವಾದವು. ಕಡುಬಡತನ, ಹಸಿವು, ಹಿಂಸೆ, ಲೈಂಗಿಕ ಶೋಷಣೆ, ಕಡಿಮೆ ಕೂಲಿ ಇದೆಲ್ಲಕ್ಕಿಂತ ಹೆಚ್ಚಾಗಿ ಜಾತಿ ತಾರತಮ್ಯವಾದ ಎಲ್ಲಾ ನಿಷಿದ್ಧ ಆಚರಣೆಗಳು ಇಲ್ಲಿ ಇನ್ನೂ ಜೀವಂತವಾಗಿವೆ. "ದಲಿತರಲ್ಲಿ ದಲಿತಳಾದ ದಲಿತಮಹಿಳೆ", ಸಾಮಾನ್ಯ ಮಹಿಳೆಯರಿಗಿಂತ ಹೆಚ್ಚಿನ ಶೋಷಣೆಗೆ ಗುರಿಯಾಗಿರುವುದನ್ನು ದಲಿತ ಸ್ತ್ರೀವಾದಿ ಲೇಖಕಿಯರು ಗುರುತಿಸಿದ್ದಾರೆ. ಲಿಂಗ ಅಸಮಾನತೆ, ಜಾತಿ, ಶೋಷಣೆ, ಧರ್ಮ ಪುರುಷ ಪ್ರಧಾನ ವ್ಯವಸ್ಥೆಯನ್ನು ಖಂಡಿಸುತ್ತಾರೆ. ವಿಶೇಷವಾಗಿ ಉನ್ನತ ವರ್ಗದ ಮಹಿಳೆಯರಿಂದ ದಲಿತ ವರ್ಗದ ಮಹಿಳೆಯರು ಅನುಭವಿಸುವ ಶೋಷಣೆಯನ್ನು ದಲಿತ ಪುರುಷರು ದಲಿತ ಮಹಿಳೆಯರ ಮೇಲೆ ಮಾಡುವ ಶೋಷಣೆಯನ್ನು ದಲಿತ ಸ್ತ್ರೀಯರ ದುಡಿಮೆಯ ಶೋಷಣೆ. ಅಂತರ್ಜಾತಿ ಮದುವೆ ಮಾಡಿಕೊಂಡ ದಲಿತ ಸ್ತ್ರೀ ಅನುಭವಿಸುವ ಹಿಂಸೆ, ಅವಮಾನವನ್ನು, ಮೇಲುವರ್ಗದ ಪುರುಷರ ಶೋಷಣೆಯನ್ನು ಕವಿತ್ವೀಕರಿಸಿದ್ದಲ್ಲದೆ ಪ್ರಬಲವಾಗಿ ವಿರೋಧವನ್ನು ವ್ಯಕ್ತಪಡಿಸಿದ್ದಾರೆ.

ದಲಿತ ಸ್ತ್ರೀವಾದಿ ಲೇಖಕಿಯಾದ ಚಲ್ಲಪಲ್ಲಿ ಸ್ವರೂಪರಾಣಿ ಹೇಳುವಂತೆ ಪಿತೃ ಪ್ರಧಾನತೆ ಮತ್ತು ಪುರುಷ ಪ್ರಾಬಲ್ಯ ಈ ಎರಡು ಅಂಶಗಳು ಅತ್ಯಂತ ನಿರ್ಣಾಯಕವಾಗಿ ಕೆಲಸ ಮಾಡುವುದು ದಲಿತ ಹೆಣ್ಣು ಮಕ್ಕಳ ಬದುಕಿನ ಮೇಲೆಯೆ. ಇದನ್ನೆ ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಪುರುಷ ಪ್ರಾಬಲ್ಯದ ದೌರ್ಜನ್ಯ ಮತ್ತು ಅಮೂರ್ತ ಹಿಂಸೆಗಳು ಅತ್ಯಂತ ಕ್ರೂರವಾಗಿ ದಲಿತ ಹೆಣ್ಣುಮಕ್ಕಳ ಮೇಲೆ ಕಾರಲ್ಪಡುತ್ತಿರುತ್ತವೆ. ಹೀಗಾಗಿ ನಿರ್ವಹಿಸುವ, ನಿಭಾಯಿಸುವಂತಹ ಹೆಣ್ಣು ಮಕ್ಕಳನ್ನು ಸೃಷ್ಟಿಸುವುದರಲ್ಲಿ ದಲಿತ ಸಮುದಾಯ ಹಾಗೂ ಇತರೆ ಜಾತಿಯ ಸಮುದಾಯಗಳು ಪ್ರಜ್ಞಾಪೂರ್ವಕವಾಗಿಯೇ ಅಡ್ಡಗಾಲನ್ನು ಒಡ್ಡುತ್ತವೆ ಎಂಬ ವಿಚಾರಗಳನ್ನು 'ಮಂಕೆನ ಪುವ್ವು' ಕವಿತೆಯಲ್ಲಿ ವ್ಯಕ್ತಪಡಿಸಿದ್ದಾರೆ.

ಮುಂದೆ ಬಾವಿ, ಹಿಂದೆ ಹಳ್ಳದಂತೆ
ಯಾವಾಗಲೂ ನನ್ನ ಸುತ್ತಲೂ
ಅಪಾಯ ಬುಸುಗುಡುತ್ತದೆ
ನಿಜಕ್ಕೂ ನನ್ನ ಜೀವನವನ್ನು ನಾನಾಗಿ ಜೀವಿಸಿದ್ದು ಯಾವಾಗ

ಮನೆಯಲ್ಲಿ ಪುರುಷ ಅಹಂಕಾರ
ಒಂದು ಕೆನ್ನೆ ಚಟ್ ಎನಿಸಿದರೆ
ಬೀದಿಯಲ್ಲಿ ಜಾತಿ ಅಧಿಕಾರ
ಎರಡೂ ಕೆನ್ನೆಗಳನ್ನು ಹೊಡೆಯುತ್ತದೆ.
ಕೂಲಿಯ ಹಣಕ್ಕಾಗಿ ಹೊಲದ ಕೆಲಸಕ್ಕೆ ಹೋದರೆ
ಅಲ್ಲಿ ಕಾಮಾಂದನ ಬೆವರಿನೊಂದಿಗೆ
ನನ್ನನ್ನು ಕೂಡಾ ದೋಚಿಕೊಳ್ಳಬೇಕೆಂದು, ಹೊಂಚು ಹಾಕಿದಾಗ
ನನ್ನನ್ನು ನಾನು ಬೀಜವಾಗಿ
ಭೂಮಿಯಲ್ಲಿ ಹೂತುಹೋಗಬೇಕೆನಿಸಿದೆ[೨೬]

(ಅಬ್ಬೂರಿ ಛಾಯಾದೇವಿ, ೨೦ವ ಶತಾಬ್ದಂಲೊ ತೆಲುಗು ರಚಯಿತ್ರುಲ ರಚನಾಲು ಪು-೯೮)

ದಲಿತ ಮಹಿಳೆ ಮನೆಯಲ್ಲಿ ತಂದೆಯಿಂದಲೋ, ಅಣ್ಣ-ತಮ್ಮ, ಗಂಡನಿಂದಲೋ ಅಸಮಾನತೆಗೆ ಗುರಿಯಾದರೆ, ಹೊರಗಡೆ ಕೆಲಸದ ಸ್ಥಳಗಳಲ್ಲಿ ಕಾಮಾಂಧ ಧನಿಕರಿಂದಲೋ, ಕೆಲಸದ ಆಳುಗಳಿಂದಲೋ, ಶಾಲಾಕಾಲೇಜುಗಳಲ್ಲಿ ಶಿಕ್ಷಕರಿಂದ, ಹಾಸ್ಟೇಲ್‌ಗಳಲ್ಲಿ ವಾರ್ಡನ್‌ಗಳಿಂದ ಲೈಂಗಿಕ ಶೋಷಣೆಗೆ ಗುರಿಯಾಗುತ್ತಿದ್ದಾಳೆ. ಜಾತಿಯ ಕಾರಣದಿಂದಾಗಿ ಕೀಳಾಗಿ ನೋಡುವ, ಹೆಣ್ಣಾದ ಕಾರಣಕ್ಕೆ ಲಿಂಗ ಅಸಮಾನತೆಗೆ ಗುರಿಯಾಗುವ ವಿಪರ್ಯಾಸವನ್ನು ಹೇಳುತ್ತ ಒಟ್ಟಾರೆ ಒಬ್ಬ ದಲಿತ ಮಹಿಳೆ ಸಮಾಜದಲ್ಲಿ ಎದುರುಗೊಳ್ಳುವ ಸಮಸ್ಯೆಗಳನ್ನು ಅನುಭವಿಸುವ ಶೋಷಣೆಯನ್ನು ಚಲ್ಲಪಲ್ಲಿ ಸ್ವರೂಪರಾಣಿಯವರ ಕವಿತೆ 'ಮಂಕೆನ ಪುವ್ವು' ಕವಿತೆ ಸಮರ್ಥವಾಗಿ ಹಿಡಿದಿಟ್ಟಿದೆ.

ದಲಿತ ಸ್ತ್ರೀಯರನ್ನು ಮೇಲ್ ಜಾತಿಯ ಪುರುಷರು ಪ್ರೀತಿಸಿ ಮದುವೆ ಮಾಡಿಕೊಂಡಿರುವ ನಿದರ್ಶನಗಳು ಇಲ್ಲದೆಇಲ್ಲ. ಹೀಗೆ ಮದುವೆ ಮಾಡಿಕೊಂಡ ದಲಿತ ಸ್ತ್ರೀ ಮೇಲ್ ಜಾತಿಯ ಗಂಡನಿಂದ ಅನುಭವಿಸುವ ಅವಮಾನ, ಶೋಷಣೆಯನ್ನು ಮದ್ದೂರಿ ವಿಜಯಶ್ರೀ 'ಪಂಚಾಯಿತಿ' ಕವನದಲ್ಲಿ ಸಮರ್ಥವಾಗಿ ಹಿಡಿದಿಟ್ಟಿದ್ದಾರೆ.

ನನಗೆ ರಾಮನ ಕೀರ್ತನೆಗಳು ಬಾರದಿರುವುದಕ್ಕೆ
ಗೇಲಿಮಾಡಿ ನಗುತ್ತಿದ್ದರೆ ನಾಚಿಕೆ ತೆಗೆದುಹಾಕಿದಂತಾಗುತ್ತದೆ.
ಪತ್ರ ಬರೆಯಲು ಕೂಡಾ ಕೈಲಾಗದವಳು
ಕಾಡಿನವಳಂತೆ
ನನಗೆ ಚಿಲ್ಲರೆಯನ್ನು ಲೆಕ್ಕ ಹಾಕಲು ಬಾರದೆಂದು
ಕುರಿಯಂತೆ
ನನಗಿಂತಲೂ ಗೊಡ್ಡೆಮ್ಮೆ ಮೇಲಂತೆ

ನಾನು ಆದಿ ಮಾನವಳಂತೆ
ಜಾತಿಯಲ್ಲಿ ಕೀಳಿನವಳಂತೆ[೨೨]

(ಮದ್ದೂರಿ ವಿಜಯಶ್ರೀ, ಪದುನೆಕ್ಕಿನ ಪಾಟ, ಪುಟ-೧೪)

ಮದುವೆಯಾದ ನಂತರ ದಲಿತ ಮಹಿಳೆಯರನ್ನು, ಅವಳ ಸಂಸ್ಕೃತಿಯನ್ನು, ಜಾತಿಯನ್ನು, ಅವಳಿಗೆ ಸಂಬಂಧಿಸಿದ ಪ್ರತಿ ಅಂಶಗಳನ್ನು ಕ್ಷಣಿಕವಾಗಿ, ಕೀಳಾಗಿ ನೋಡುತ್ತ ಮಾತನಾಡುವ ಮೇಲ್ ಜಾತಿಯ ಗಂಡನನ್ನು ಉದ್ದೇಶಿಸಿ ಬರೆದಿರುವ ಕವಿತೆ ಇದು. ಮಾದಿಗಳೆಂದು ಅಸ್ಪೃಶ್ಯಳೆಂದು ಚುಚ್ಚುಮಾತುಗಳಿಂದ ಮನಸನ್ನು ಘಾಸಿಗೊಳಿಸಿದ್ದಲ್ಲದೆ, ಕುಟುಂಬದಲ್ಲಿ ಆಳಾಗಿ ದುಡಿವ ಗಾಣದೆತ್ತಾಗಿಸಲಾಗುತ್ತದೆ. ಪಟ್ಟಭದ್ರ ಶಕ್ತಿಗಳು ತಮ್ಮ ಬುದ್ಧಿಶಕ್ತಿಯನ್ನು ಬಳಸಿ ಒಂದು ಶೋಷಿತ ವರ್ಗದ ಮೂಲಕ ಇನ್ನೊಂದು ಶೋಷಿತ ವರ್ಗವನ್ನು ನಾಶಗೊಳಿಸುವ ಇಲ್ಲವೆ ತಮ್ಮ ಗುಲಾಮರನ್ನಾಗಿಸಿಕೊಳ್ಳುವ ಹುನ್ನಾರಗಳಲ್ಲಿ ಸಫಲವಾಗಿವುದನ್ನು ಇಲ್ಲಿ ಕಾಣಬಹುದು.

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆಯರೆಲ್ಲ ಅಸ್ಪೃಶ್ಯರೆ ಎನ್ನುವ ವಾದ ಬಹುದಿನಗಳಿಂದಲೂ ಇದೆ. ಆದರೆ ದಲಿತ ಸ್ತ್ರೀಯರು ಇತರ ಸಮುದಾಯಗಳ ಮಹಿಳೆಯರಿಗೆ ಸಮಾನರಲ್ಲ ದಲಿತ ಸ್ತ್ರೀಯರು. ಅತ್ತ ಪುರುಷರಿಂದಲೂ, ಇತ್ತ ಉನ್ನತ ವರ್ಗದ ಸ್ತ್ರೀಯರಿಂದಲೂ ಶೋಷಣೆ, ಅವಮಾನಕ್ಕೆ ಗುರಿಯಾಗುತ್ತಿದ್ದಾರೆ ಎನ್ನುವಂತಹ ಸತ್ಯಾಂಶವನ್ನು ದರೀಶ್‌ಶಶಿ ನಿರ್ಮಲ ಅವರು "ದಲಿತುರಾಲು" ಕವನದಲ್ಲಿ ವ್ಯಕ್ತಪಡಿಸಿದ್ದಾರೆ.

ಯಾರೊ ಯಾತಕ್ಕೊ ನನ್ನ ಜೊತೆಯ ಹೆಂಗಸನ್ನು ನನ್ನನ್ನು
ಕೊಂಡುಕೊಂಡಳಂತೆ
ತನ್ನ ಮೇಲ್ಜಾತಿಯ ಹೊಸಸೀರೆಗೆ ನನ್ನನ್ನು ಜರಿಯಾಗಿ ಬಳಸಿ
ಕೊಂಡಳಂತೆ
ತನ್ನ ತುಟಿಯ ಕೆಂಪುಬಣ್ಣವಾಗಿ ನನ್ನನ್ನು ಬಳಿದುಕೊಂಡಳಂತೆ
ತನ್ನ ಮನೆಯ ನಾಯಿಗೆ ಹಾಕಿದಂತೆ ನನಗಿಷ್ಟು ತುತ್ತು ಅನ್ನ ಹಾಕುತ್ತಾಳಂತೆ
ಇವರ ಚೇಷ್ಟೆಗಳೆಲ್ಲ ಭತ್ತದ ತೆನೆಯಂತೆ ತಲೆತಗ್ಗಿಸುವಷ್ಟರವರೆಗೆ
ಅವರ ದಬ್ಬಾಳಿಕೆಯ ಹೋರಿಗಳು ಜೊಲ್ಲುಸುರಿಸುವುದು
ನಾನು ಹಸಿರುಹುಲ್ಲಿನಂತೆ ತುಟಿಗಳನ್ನು ಬಿಚ್ಚದಿರುವವರೆಗೆ[೨೮]

(ದರಿಶ್ ಶಶಿ ನಿರ್ಮಲ, ಪದುನೆಕ್ಕಿನ ಪಾಟ (ದಳಿತುರಾಲು) ಪುಟ-೨೬)

ದಲಿತ ಸ್ತ್ರೀ ಎಲ್ಲರಿಗೂ ಸೇವಕಳಾಗಿ ಬಿದ್ದಿರಬೇಕೆಂದು ಪಿತೃಪ್ರಧಾನ ಸಮಾಜ ಹೇಳುತ್ತದೆ. ಸ್ತ್ರೀಯರೆಲ್ಲರೂ ಸಮಾನರು ಎನ್ನುತ್ತಲೆ ಉನ್ನತ ವರ್ಗದ ಮಹಿಳೆಯರು ದಲಿತ ಸ್ತ್ರೀಯರನ್ನು ಅತ್ಯಂತ ಹೀನಾಯವಾಗಿ ನೋಡಲಾಗುವ ಜೊತೆಗೆ ಸೇವಕಳನ್ನಾಗಿ ಬಳಸಿಕೊಳ್ಳಲಾಗುತ್ತದೆ. ಹೀಗೆ ನೋಡುವುದು, ಬಳಸಿಕೊಳ್ಳುವುದು ತಾನು ಅವುಗಳನ್ನು ಪ್ರಶ್ನಿಸುವವರೆಗೆ ಮಾತ್ರ ಎಂಬುದನ್ನು

ಕವಯತ್ರಿ ಹೇಳುತ್ತಾಳೆ. ಪದ್ಯದ ಕೊನೆಯ ಸಾಲುಗಳು ಇನ್ನು ಮುಂದೆ ಇಂತಹ ಶೋಷಣೆ, ಗುಲಾಮತನವನ್ನು ಸಹಿಸುವುದಿಲ್ಲ ಪ್ರತಿಭಟಿಸುತ್ತೇನೆ. ತನಗೂ ಅಸ್ತಿತ್ವವಿದೆ ಎನ್ನುವುದನ್ನು ಈ ಸಮಾಜಕ್ಕೆ ತೋರಿಸುತ್ತೇನೆ ಎನ್ನುವ ಆಶಯವನ್ನು ಹೊಂದಿದೆ.

ಉಳಿದ ಸಮಾಜ, ಧರ್ಮಗಳಿಗಿಂತ ಮುಸ್ಲಿಂ ಸಮಾಜ ಅಥವಾ ಇಸ್ಲಾಂ ಧರ್ಮದಲ್ಲಿ ಮಹಿಳೆಯರ ಪರಿಸ್ಥಿತಿ ಭಿನ್ನವಾಗಿದೆ. ಜಗತ್ತಿನ ಎಲ್ಲಾ ಧರ್ಮಗಳು ಮಹಿಳೆಯರನ್ನು ದ್ವಿತೀಯ ದರ್ಜೆಯ ಪ್ರಜೆಯನ್ನಾಗಿ ನೋಡುತ್ತವೆ. ಆದರೆ ಇಸ್ಲಾಂ ಧರ್ಮವು ಒಂದು ಹೆಜ್ಜೆ ಮುಂದೆ ಹೋಗಿ ಮಹಿಳೆಯರನ್ನು ಪರದಾ ಪದ್ದತಿಯೊಳಗೆ ಬಂಧಿಸಿ, ಪರಪುರುಷರ ದೃಷ್ಟಿ ಬೀಳುವುದೇ ದೊಡ್ಡ ಅಪರಾಧವೆಂಬಂತೆ ಬಿಂಬಿಸಿದೆ. ಮುಸ್ಲಿಂ ಮಹಿಳೆಯರ ಆಸೆ–ಆಕಾಂಕ್ಷೆಗಳೆಲ್ಲ ಕಪ್ಪು ಮುಸಿಕಿನಲ್ಲಿಯೇ ಮಣ್ಣಾಗುವಂತೆ ಮಾಡಿದೆ. ಇಂತಹ ಅನಿಷ್ಠ ಪದ್ಧತಿ, ಧಾರ್ಮಿಕ ಶೋಷಣೆಯನ್ನು ಪ್ರಶ್ನಿಸುವುದಕ್ಕಾಗಿಯೇ ಮುಸ್ಲಿಂ ಸ್ತ್ರೀವಾದ ಚಿಂತನೆ ಹುಟ್ಟಿಕೊಂಡಿದೆ.

ದಲಿತ, ಹಿಂದೂ ಸ್ತ್ರೀಯರಿಗಿಂತ ಮುಸ್ಲಿಂ ಸ್ತ್ರೀಯರು ಹೇಗೆ ಹೆಚ್ಚಿನ ಶೋಷಣೆ, ನಿರ್ಭಂದಗಳಿಗೆ ಗುರಿಯಾಗಿದ್ದಾರೆ ಎಂಬುದನ್ನು ಕುರಿತು ಅನೇಕ ಮುಸ್ಲಿಂ ಸ್ತ್ರೀವಾದಿ ಲೇಖಕಿಯರು ಕವಿತ್ವಕರಿಸಿದ್ದಾರೆ.

ಮಹರ್ ಅನ್ನು ಮುಖಕ್ಕೆ ಹೊಡೆದು ಹೆಂಡತಿಯರನ್ನು ಬದಲಿಸಿಕೊಳ್ಳುವ
ಟೆಂಪರರಿ ಗಂಡಂದಿರೆಂದು ತಿಳಿದು
ತ್ಯಾಗಿಗಳ ದುಪ್ಪಟ್ಟಿಯನ್ನು ಕಿರುನಗೆಯ ಚಿಮಣಿಗಳೊಂದಿಗೆ
ಅಲಂಕರಿಸಿಕೊಳ್ಳುತ್ತಿರುವವರು

ಷಾಜಹಾನ ಅವರ 'ಖಬರ್ದಾರ್' ಕವಿತೆ ಮುಸ್ಲಿಂ ಮಹಿಳೆಯರನ್ನು ತೀವ್ರ ಶೋಷಣೆಗೆ ಒಳಪಡಿಸುವ ಪುರುಷರ ಹುನ್ನಾರಗಳನ್ನು ಪರಿಣಾಮಕಾರಿಯಾಗಿ ಅನಾವರಣಗೊಳಿಸುತ್ತದೆ. ಪುರುಷ ಪ್ರಧಾನ ಮುಸ್ಲಿಂ ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣು ಕೇವಲ ಅಲಂಕಾರದ ಗೊಂಬೆ, ಲೈಗಿಂಕ ವಸ್ತು, ಇಲ್ಲಿ ಆಕೆಗೆ ಸ್ವಂತ ವ್ಯಕ್ತಿತ್ವವಾಗಲಿ, ಅಸ್ತಿತ್ವವಾಗಲಿ ಇಲ್ಲ. ಗಂಡು ಈ ವಸ್ತುವನ್ನು ತನಗೆ ಬೇಕಾದಂತೆ ಬಳಸಿ ಬಿಸಾಡಬಹುದು. ಪುರುಷರ ಈ ದುಷ್ಟ ಪ್ರವೃತ್ತಿಗೆ ಧರ್ಮವು ಒತ್ತಾಸೆಯಾಗಿದೆ.

ಮೂರು ಪದಗಳ ತಲಾಕ್ ಎಂದರೆ ಚೂರಾಗುವ ಓಡು ಸಂಸಾರಕ್ಕೆ ಕೂಡ ಮತ್ತೆ
ಮತ್ತೆ ಸಿಂಗರಿಸಿಕೊಂಡು ಭ್ರಮೆಯಲ್ಲಿ ತೇಲಿ ಹೋಗುತ್ತಿರುವವರು
ಗಂಡಿನ ಮೃಗತನಕ್ಕೆ ಬಲಿಯಾಗುವುದಕ್ಕೆ
ಸಂಪ್ರದಾಯ ಹೆಬ್ಬಾವಿನಂತೆ ಕಪ್ಪು ಮಣಿಗಳನು ಸುತ್ತಿಕೊಂಡವರು[೨೫]

(ಶಿಲಾಸುಭದ್ರಾದೇವಿ (ಸಂ) ಮುದ್ರ, ಪುಟ, ೧೮೦–೧೮೧)

ಮುಸ್ಲಿಮ್‌ರ ಧರ್ಮಗ್ರಂಥ ಕುರಾನ್ ಹೇಳುವಂತೆ ಒಮ್ಮೆಗೆ ಒಬ್ಬವ್ಯಕ್ತಿ ತನ್ನ ಹೆಂಡತಿಗೆ ತಲಾಕನ್ನು ಮೂರು ಸಲ ಹೇಳಿದರೆ ಅಲ್ಲಿಗೆ ಆ ಗಂಡ ಹೆಂಡತಿಯ ಸಂಬಂಧ ಸಂಪೂರ್ಣ

ಕೊನೆಗೊಳ್ಳುತ್ತದೆ. ಪುನಃ ಅವರು ಒಂದಾಗಬೇಕಾದರೆ ಆಕೆ ಬೇರೊಬ್ಬನನ್ನು ಮದುವೆಯಾಗಿ ಅವನಿಂದಲೂ ತಲಾಕ್ ಪಡೆದಿರಬೇಕು. ಹಾಗೆ ಅವಳು ಬೇರೊಬ್ಬನನ್ನು ಮದುವೆಯಾಗಿಲ್ಲದಿದ್ದರೆ ಒಂದು ದಿನಕ್ಕಾದರೂ ಒಬ್ಬನನ್ನು ಮದುವೆಯಾಗಬೇಕು. ಒಂದು ರಾತ್ರಿ ಅವನ ಜೊತೆಯಲ್ಲಿ ಕಳೆದಿರಬೇಕು. ಮರುದಿನ ಅವನಿಂದ ತಲಾಕ್ ಹೇಳಿಸಿಕೊಂಡು ಮೂರು ತಿಂಗಳು ಕಾಯಬೇಕು. ಗರ್ಭವೇನಾದರೂ ನಿಂತಿದೆಯೇ ಎಂದು ರುಜುವಾತು ಪಡಿಸಿಕೊಂಡು ಇಲ್ಲವೆಂದು ಖಚಿತವಾದ ಮೇಲೆ ಆ ಮೊದಲ ಗಂಡ ಅವಳನ್ನು ಮದುವೆಯಾಗಬಹುದು ಇದು ಮುಸ್ಲಿಂ ಧರ್ಮಶಾಸ್ತ್ರ. ಹೀಗೆ ಧರ್ಮ, ಸಂಪ್ರದಾಯದ ಹೆಸರಿನಲ್ಲಿ ಮುಸ್ಲಿಂ ಮಹಿಳೆಯರನ್ನು ಅತ್ಯಂತ ನಿಕೃಷ್ಟವಾಗಿ ನಡೆಸಿಕೊಳ್ಳಲಾಗುತ್ತದೆ. ಇಂತಹ ಸಂಪ್ರದಾಯಗಳನ್ನು ಮೀರಬೇಕೆಂದು ಸ್ತ್ರೀ ಸಮುದಾಯಕ್ಕೆ ಕರೆಯನ್ನು ನೀಡುತ್ತಾಳೆ ಕವಯತ್ರಿ.

ಪರದಾ ಪದ್ಧತಿಯ ಪಿರಮಿಡ್ಡುಗಳೊಳಗೆ ಪ್ರಾಣವಿಲ್ಲದ ಮಮ್ಮಿಗಳಂತೆ ಮಾಡಿ
ನಮ್ಮನ್ನು ಮೌನ ಮಾಂಸಗಳಾಗಿ
ಉತ್ಪತ್ತಿ ಯಂತ್ರಗಳಾಗಿ ಬದುಕಿರೆಂದು ನಿಮ್ಮ ಸಂಪ್ರದಾಯಕ್ಕೊಂದು ಸಲಾಂ
ಈ ಪರದಾ ಪಂಜರವನು ಈಗ ಉದ್ದುದ್ದಕ್ಕೆ ಸೀಳುವೆ
ನನ್ನನ್ನು ಕಾಫಿರ್ ಎಂದರೂ ನೋವಿಲ್ಲ[೩೦]

ಪರದಾ ಪದ್ದತಿ ಮುಸ್ಲಿಂ ಸಮಾಜದ ಅನಿಷ್ಠ ಸಂಪ್ರದಾಯ ಪದ್ಧತಿಗಳಲ್ಲಿ ಒಂದು ಪರಪುರುಷರ ದೃಷ್ಟಿ ಬೀಳುವುದೇ ದೊಡ್ಡ ಅಪರಾಧವೆಂಬಂತೆ ಭಾವಿಸಿ ಹೆಣ್ಣಿನ, ಆಸೆ, ಆಕಾಂಕ್ಷೆಗಳಿಗೆ ಕಪ್ಪುಮುಸುಕೆಂಬ ತಡೆಗೋಡೆ ನಿರ್ಮಿಸಿ ಬೌದ್ಧಿಕವಾಗಿ ಹಾಗೂ ಭೌತಿಕವಾಗಿ ನಿಯಂತ್ರಿಸಲಾಗುತ್ತದೆ.

ಇವುಗಳನ್ನೆಲ್ಲ ನೋಡಿದರೆ ಮುಸ್ಲಿಂ ಧರ್ಮ ಹಾಗೂ ಪುರುಷರ ಪ್ರತಿಷ್ಠೆ ಅಹಂಕಾರಗಳು ಆ ಸಮಾಜದ ಮಹಿಳೆಯರ ಬದುಕಿಗೆ ಹೇಗೆ ಮಾರಕವಾಗಿವೆ ಎಂಬುದು ಗೊತ್ತಾಗುತ್ತದೆ. ಧಾರ್ಮಿಕ ನಿಯಮಗಳು ಭಾವ ವಿರೋಧಿಯಾಗಿರುವುದು ಒಂದು ದುರಂತವೇ ಸರಿ. ಮಹಿಳೆಯರು ಇಂಥ ಮುಸ್ಲಿಂ ಧರ್ಮದ ಪಟ್ಟಭದ್ರ ಹಿತಾಸಕ್ತಿಯ ನಿಯಮಗಳನ್ನು ಹಾಗೂ ಪುರುಷಾಧಿಪತ್ಯವನ್ನು ಮೀರಿ ಬದುಕನ್ನು ರೂಪಿಸಿಕೊಳ್ಳಬೇಕಿದೆ ಎನ್ನುವ ಆಶಯವನ್ನು ಷಾಹಜನ ಅವರು ವ್ಯಕ್ತಪಡಿಸುತ್ತಾರೆ.

ಮೆಹಜಬಿನ್ ಮುಸ್ಲಿಂ ಸ್ತ್ರೀವಾದಿ ಲೇಖಕಿಯರಲ್ಲಿ ಒಬ್ಬರು. 'ಅಮ್ಮಕಳ್ಳು' ಕವಿತೆಯಲ್ಲಿ ಹೇಳುವಂತೆ ಅಡುಗೆ ಮನೆಗೆ ಪರ್ಯಾಯ ಪದ ಮಹಿಳೆಯಾಗಿದ್ದಾಳೆ. ಕುಟುಂಬದೊಳಗಿನ ಎಲ್ಲ ಬೇಕುಗಳಿಗೆ ಅಡುಗೆ ಮನೆಯೇ ಕೊನೆ. ಅಡುಗೆ ಮನೆ ಹೆಣ್ಣಿನ ಕನಸುಗಳಿಗೆ ಬೆಂಕಿಹಚ್ಚಿದ, ಆಸೆಗಳನ್ನು ಬೇಯಿಸಿದ, ನೋವುಗಳಿಗೆ ಕುದಿಹಚ್ಚಿದ, ಬದುಕಿಗೆ ಹೊಗೆ ಹಾಕಿದ ತಾಣ. ಎಂಬುದಾಗಿ ಹೇಳುತ್ತ

ಅಡುಗೆ ಮನೆಗೆ ಜೀವನವನ್ನು ಅರ್ಪಣೆ ಕೊಟ್ಟ ವೇಳೆ ಹೋಗೆಯಾಡಿದ
ಅಮ್ಮನ ಕಣ್ಣುಗಳು ಅತ್ಯಂತ ವಾಸ್ತವದ ಸಂಗತಿ
ನಾಲ್ಕು ಗೋಡೆಗಳ ನಡುವೆ
ಸಜೀವ ಸಮಾಧಿ ಆದಾಗ
ಅಮ್ಮನ ಕಣ್ಣುಗಳು ನಿಶಬ್ದ ಜಲಪಾತಗಳು[೩೧]

(ಮೆಹಜಬಿನ್, ಅಮ್ಮಕಳ್ಳು, ಪುಟ-೮)

ಮಹಿಳೆ ಜೀವನದ ಆಸೆ, ಆಕಾಂಕ್ಷೆಗಳೆಲ್ಲ ಅಡುಗೆ ಮನೆಯಲ್ಲಿಯೇ ಮಣ್ಣಾಗುವ ವೈಖರಿಯನ್ನು ಈ ಕವಿತೆ ಚಿತ್ರಿಸುತ್ತದೆ.

ಇಲ್ಲಿ ವಿಶ್ಲೇಷಿಸಲಾಗಿರುವ ಕನ್ನಡ-ತೆಲುಗು ಸ್ತ್ರೀವಾದಿ ಕಾವ್ಯದ ಉದಹರಣೆಗಳು ಹೆಚ್ಚಿನ ಪ್ರಮಾಣದಲ್ಲಿ ಕುಟುಂಬ ಕೇಂದ್ರಿತವಾಗಿಯೇ ಪುರುಷ ಪ್ರಧಾನತೆಯನ್ನು ಗ್ರಹಿಸುವ ಮತ್ತು ಪ್ರತಿಕ್ರಿಯಿಸುವುದನ್ನು ಕಾಣಬಹುದು. ಅಪರೂಪಕ್ಕೆ ಎನ್ನುವಂತೆ ಉದ್ಯೋಗ ಸ್ಥಳ ಮತ್ತು ಸಾರ್ವಜನಿಕ ಸ್ಥಳಗಳಲ್ಲಿ ನಡೆಯುವ ಸ್ತ್ರೀಶೋಷಣೆಯನ್ನು ವಸ್ತುವಾಗಿಸಿಕೊಂಡು ಕಾವ್ಯದ ಮೂಲಕ ಅಭಿವ್ಯಕ್ತಿಸಿರುವುದು ಕಂಡುಬರುತ್ತದೆ. ಉದಾಹರಣೆಗೆ ಕನ್ನಡದಲ್ಲಿ ಪ್ರತಿಭಾ ನಂದಕುಮಾರ್ ಅವರ ಕಾಫಿಹೌಸ್, ಕೋಣ, ಭಾನು ಮುಷ್ತಾಕ್ ಅವರ ವಸುಂಧರೆ, ಕಮಲಾ ಹೆಮ್ಮಿಗೆ ಅವರ 'ಸಾಕ್ಷಿ', ವಿನಯ ಅವರ ಸಂಧಿಭೂಮಿ,...ಇತ್ಯಾದಿ ತೆಲುಗಿನಲ್ಲಿ ಕೆಲಸದ ಸ್ಥಳದಲ್ಲಿ ನಡೆಯುವ ಶೋಷಣೆಯ ಕುರಿತು ಕೊಂಡುಪೊಡಿ ನಿರ್ಮಲ ಅವರ ಲೇಬರ್ ರೂಮ್, ಮಲ್ಟಿನೆಷನ್ ಮುದ್ದು, ಶಿಲಾಲೊಲಿತ ಅವರ ಐನವಾಳ್ಳಂ ಓಲ್ಗಾ ಅವರ ಪಂಚಾದಿ ನಿರ್ಮಲ ವಾರಸುರಾಲಿನಿ, ಘಂಟಶಾಲ ನಿರ್ಮಲ ಅವರ ಆರ್ಥಿಕಾನರ್ಥಂ, ಸಾರ್ವಜನಿಕ ಸ್ಥಳಗಳಲ್ಲಿ ನಡೆಯುವ ಸ್ತ್ರೀ ಶೋಷಣೆಯನ್ನು ಕುರಿತವು. ಕೊಂಡೆಪೊಡಿ ನಿರ್ಮಲ ಅವರ ಸರ್ಕಸ್ ಪಿಲ್ಲ, ರಿಕಾರ್ಡಿಂಗ್ ಡ್ಯಾನ್ಸ್ ಘಂಟಶಾಲ ನಿರ್ಮಲ ಅವರ 'ರಂಗುಲ ಚಿಕಟಿ' ತುರ್ಲ ಪಾಟಿ ರಾಜೇಶ್ವರಿ ಅವರ ಕಲಲ ಕೋಸಂ, ಅಂದಾಲ ರಾಣುಲು, ವಸಂತ ಕನ್ನಾಬಿನಾನ್ ಅವರ ವಿಭಜನ ರೇಖಗೀತಂ, ಇತ್ಯಾದಿ.

ಕುಟುಂಬಕ್ಕೆ ಸಂಬಂಧಪಟ್ಟಂತೆ ಹೋಲಿಸಿದಾಗ ಈ ಎರಡೂ ಕ್ಷೇತ್ರಗಳಲ್ಲಿ ಹೆಚ್ಚಿನದಾಗಿ ತೊಡಗಿಸಿಕೊಂಡಂತೆ ಕಾಣುವುದಿಲ್ಲ. ಕಾರಣ ಸಮಾಜದ ಒಳಗಡೆಯೇ ಮಹಿಳೆಯ ಬದುಕು ಎನ್ನುವುದು ಹೆಚ್ಚುಕಡಿಮೆ ಕುಟುಂಬಕ್ಕೆ ಸೀಮಿತವಾಗಿರುವುದರಿಂದ ಅವಳ ಮೇಲೆ ನಡೆಯುವ ಶೋಷಣೆಗಳ ಮಾದರಿಗಳು ಹೆಚ್ಚಿನದಾಗಿ ಕುಟುಂಬ ಕೇಂದ್ರಿತವಾಗಿಯೇ ಸಿಗುತ್ತವೆ. ಆದ್ದರಿಂದ ಸಹಜವಾಗಿಯೆ ಕನ್ನಡ-ತೆಲುಗು ಸ್ತ್ರೀವಾದಿ ಲೇಖಕಿಯರ ಅಭಿವ್ಯಕ್ತಿಯಲ್ಲಿ ಇದನ್ನು ನೋಡಬಹುದು.

ಕೌಟುಂಬಿಕ ಅನುಭವ ಎನ್ನುವುದು ಎಲ್ಲಾ ಮಹಿಳೆಯರಿಗೂ ಸಿಗುವಂತಹ ಒಂದು ಸಾಮಾನ್ಯ ಅನುಭವ ಉದ್ಯೋಗ ಮತ್ತು ಸಾರ್ವಜನಿಕ ಸ್ಥಳ ಎನ್ನುವುದು ಸಿಗಬಹುದು, ಸಿಗದೆ ಇರಬಹುದು.

ಉದ್ಯೋಗಕ್ಕೆ ಸೇರಿಕೊಂಡರೆ ಉದ್ಯೋಗ ಇಲ್ಲವೆಂದರೆ ಇಲ್ಲ. ಆದ್ದರಿಂದ ಹೆಣ್ಣುಮಕ್ಕಳಿಗೆ ಪಿತೃಪ್ರಧಾನತೆಯ ಒಂದು ಸಾಮಾನ್ಯವಾದ ಅನುಭವ ಅಂದರೆ ಎಲ್ಲರು ಪಡೆಯಬಹುದಾದಂತಹ ಅನುಭವ ಕುಟುಂಬ ಕೇಂದ್ರಿತವಾದ ಅನುಭವ ಮತ್ತು ಸಾರ್ವಜನಿಕ ಸ್ಥಳಗಳಲ್ಲಿನ ಕುಟುಂಬ ಕೇಂದ್ರಿತವಾದ ಅನುಭವಗಳನ್ನೇ ಇದುವರೆಗೆ ತೆರೆದಿಡುತ್ತಿದ್ದ ಮಹಿಳೆಯರು, ಈಗ ಸಮಾಜದಲ್ಲಿ ತಮಗೆ ವಿಸ್ತಾರಗೊಂಡ ಅವಕಾಶಗಳ ಕಾರಣಕ್ಕಾಗಿ ಎಪ್ಪತ್ತರ ದಶಕದ ನಂತರದಲ್ಲಿ ಅವರು ಸಾಮಾಜಿಕ ಬದುಕಿಗೆ ಕಾಲಿಟ್ಟಿದ್ದಾರೆ. ಸಾಮಾಜಿಕ ಬದುಕಿಗೆ ಕಾಲಿಟ್ಟ ಈ ಸಂಧರ್ಭದಲ್ಲಿ ಸಾರ್ವಜನಿಕ ಕ್ಷೇತ್ರದ ಮತ್ತು ಉದ್ಯೋಗ ಕ್ಷೇತ್ರದ ಶೋಷಣೆಗಳು ಕಾಣುತ್ತಿವೆ. ಇದರ ಆಚೆಗೆ ಹೋಗದಿದ್ದರೆ ಗುರುತಿಸುವುದಕ್ಕೆ ಆಗುತ್ತಿರಲಿಲ್ಲ. ಈಗ ಶಿಕ್ಷಣವನ್ನು ಪಡೆದ ಹೆಣ್ಣು ಮಕ್ಕಳು ಉದ್ಯೋಗ ಇತ್ಯಾದಿ ಕಾರಣಗಳಿಗೆ ಸಾರ್ವಜನಿಕ ಬದುಕಿಗೆ ಕಾಲಿಡುತ್ತಿರುವುದರಿಂದ ಕುಟುಂಬದ ಆಚೆಗಿನ ಉದ್ಯೋಗ ಸ್ಥಳ ಎನ್ನುವಂತಹದ್ದೇ ಮಹಿಳೆಯರ ಪ್ರವೇಶ ನಿಧಾನವಾಗಿ ಆಗುತ್ತಿರುವುದರಿಂದ ಸಹಜವಾಗಿಯೇ ಉದ್ಯೋಗ ಸ್ಥಳದಲ್ಲಿನ ಪುರುಷ ಪ್ರಧಾನತೆಯ ಆವಿಷ್ಕಾರದ ಅನುಭವ ಎನ್ನುವುದು ಮಹಿಳೆಯರಿಗೆ ಇತ್ತೀಚಿನ ದಿನಗಳಲ್ಲಿ ಆಗುತ್ತಿದೆ. ಪ್ರಾಯಶಹಃ ಇದು ಮುಂದಿನ ದಿನಗಳಲ್ಲಿ ಹೆಚ್ಚಿನದಾಗಿ ಕಾಣಬಹುದು. ಏಕೆಂದರೆ ಎಲ್ಲಾ ಕೆಲಸದ ಅನುಭವದ ಮೇಲೆ ಕೆಲಸ ಮಾಡಬಹುದು. ಸಾರ್ವಜನಿಕ ಸ್ಥಳ ಮತ್ತು ಕೆಲಸದ ಸ್ಥಳಗಳಲ್ಲಿ ನಡೆಯುತ್ತಿರುವ ಸ್ತ್ರೀಶೋಷಣೆಯನ್ನು ಗ್ರಹಿಸುವಲ್ಲಿ ಕಾವ್ಯ ಸೋತಿದೆ. ಈ ಕೊರತೆಯನ್ನು ಕಥಾ ಸಾಹಿತ್ಯ ತುಂಬಿರುವುದನ್ನು ಕಾಣಬಹುದು.

ಕನ್ನಡ–ತೆಲುಗು ಸ್ತ್ರೀವಾದಿ ಕಥಾ ಸಾಹಿತ್ಯದಲ್ಲಿ ಚಿತ್ರಣಗೊಂಡ ಚಿತ್ರಣದ ಮಾದರಿ ಮಾತ್ರ ಸೀಮಿತ ಚೌಕಟ್ಟಿನಲ್ಲೇ ಪುರುಷ ಚಿಂತನೆಯ ಪರವಾಗಿ ಮಾತ್ರ ನಿಲ್ಲುವಂಥದಾಗಿದೆ. ಹೆಣ್ಣಿಗೆ ಆರ್ಥಿಕ ಸ್ವಾವಲಂಬನೆ ದೊರೆತರೆ ಕುಟುಂಬಕ್ಕೆ ಎಂಥದೋ ದುರಂತ ಬಡಿಯುತ್ತದೆ ಎಂಬಂತೆ, ಪುರುಷ ಚಿಂತನೆ ರೇಗುತ್ತಿದ್ದರೂ ಹೆಣ್ಣುಗಳಿಸಿ ತರುವ ಹಣ ತನ್ನ ಕೈ ಸೇರುವುದಾದರೆ, ಅವಳ ನೌಕರಿಯ ಬಗ್ಗೆ ವಿರೋಧವೇನೂ ಇರದು ಬದಲಿಗೆ ಅಂಥ ಗಳಿಕೆಗೆ ಅವಳನ್ನು ತಳ್ಳುವ ಕುತಂತ್ರಗಳು ಬೇಕಾದಷ್ಟು ಹುಟ್ಟಿಕೊಳ್ಳುತ್ತವೆ. ಗಳಿಸುತ್ತಿರುವ ಮಗಳಿಗೆ ಮದುವೆ ಮಾಡಿ ಬಿಟ್ಟರೆ ನಷ್ಟವಾದಿತೆಂದು ತಂದೆ, ತಾಯಿಯರೇ ಅವಳನ್ನು ಅವಿವಾಹಿತ ಸ್ಥಿತಿಗೆ ಕಟ್ಟಿಹಾಕಿ ಬಿಡಬಹುದು. ವೈದೇಹಿ ಅವರ 'ಸೌಗಂಧಿಯ ಸ್ವಗತಗಳು' ಈ ಮುಖವನ್ನು ತೆರೆದಿಡುವ ಕತೆ, ಜೊತೆಗೆ ಅವಳ ಶೀಲಕ್ಕೆ ಕಾವಲುಗಾರರಾಗಿ ತಂದೆ, ತಾಯಿಯರಷ್ಟೇ ಏಕೆ ಮನೆಯ ಮಾಲೀಕಳಾದ ಅಜ್ಜಿಯು ನಡುಕಟ್ಟಿ ನಿಂತಿದ್ದಾಳೆ. ಪ್ರಕೃತಿ ಸಹಜ ಕಾಮನೆಗಳನ್ನು ಹೀಡೇರಿಸಿಕೊಳ್ಳುವಷ್ಟು ಸ್ವತಂತ್ರಳಲ್ಲ ದುಡಿದುಗಳಿಸಿ ಅಪ್ಪನಿಗೆ ಒಪ್ಪಿಸುವುದೊಂದೆ ದಾರಿ ಅವಳಿಗೆ ಉಳಿಯುತ್ತದೆ.

ಸಾವಿತ್ರಿಯವರ 'ನಿರಾಶ್ರಿತೆ' ತುಳಸಿ ಕೋಮುವಾದದ ಅಮಾನವೀಯ ಕೃತ್ಯಗಳಲ್ಲಿ ಒಂದಾದ ಅತ್ಯಾಚಾರಕ್ಕೆ ಸಿಲುಕಿ ಅನೈತಿಕ ಗರ್ಭಧರಿಸಿದ ವಿವಾಹಿತ ಹೆಣ್ಣು ಮಗಳು ಅವಳ ಗಂಡ ಸುಶಿಕ್ಷಿತ ವೈದ್ಯನಾಗಿದ್ದರೂ, ಸಂಪ್ರದಾಯಬದ್ಧ ಪುರುಷ ಪ್ರಧಾನ ಸಮಾಜದಲ್ಲಿ ಬೆಳೆದ ಚಂದ್ರುವಿನಲ್ಲಿ

ಅತ್ಯಾಚಾರಕ್ಕೆ ತನ್ನ ಹೆಂಡತಿಯಲ್ಲಿ ಹುಟ್ಟಿರುವ ಮಗುವನ್ನು ಒಪ್ಪಿಕೊಳ್ಳುವಷ್ಟು ಔದಾರ್ಯವಾಗಲಿ ಮಾನಸಿಕ ವಿಕಸನವಾಗಲಿ ಇಲ್ಲದಿರುವುದನ್ನು ಸಾವಿತ್ರಿ ಮಾರ್ಮಿಕವಾಗಿ ನಿರೂಪಿಸುತ್ತಾರೆ. ಹುಟ್ಟಿನ ಪಾವಿತ್ರ್ಯದ ಬಗೆಗೆ ಭ್ರಮೆಪಡುವ, ತನ್ನದೆ ಸಂತಾನದ ಬಗೆಗೆ ಮಾತ್ರ ಹೆಮ್ಮೆ ಪಡುವ ಪುರುಷ ಪ್ರಧಾನ ವ್ಯವಸ್ಥೆಯ ಮನೋಭಾವದ ಬಗೆಗೆ ಅತ್ಯಂತ ನವಿರಾದ ಟೀಕೆ, ವಿಶ್ಲೇಷಣೆಗಳಿವೆ. ಅನುಪಮ ನಿರಂಜನರ 'ಆಳ' ನೇಮಿಚಂದ್ರ ಅವರ 'ನನ್ನೆದೆಯ ಕದನದಲಿ' ಕಥೆಗಳು ಸಹ ಅತ್ಯಾಚಾರಕ್ಕೆ ಬಲಿಯಾದ ಹೆಣ್ಣಿನ ನೋವುಗಳನ್ನು ಹೇಳುತ್ತವೆ.

ಗೀತಾ ನಾಗಭೂಷಣ ಅವರು ಎಂಭತ್ತರ ದಶಕದಲ್ಲಿ ಬರೆದ 'ಏರಿಳಿತಗಳು' ಕಾದಂಬರಿಯ ಸ್ಮಿತಾಳು ತಾನು ಉದ್ಯೋಗ ಮಾಡುತ್ತಿದ್ದ ಕಂಪನಿಯ ಮಾಲೀಕನ ಕೆಂಗಣ್ಣಿಗೆ ಗುರಿಯಾಗಿ ಹುದ್ದೆಯನ್ನೆ ತೊರೆದು ಸ್ವಾಭಿಮಾನದಿಂದ ಬದುಕುವ ವಸ್ತುವನ್ನು ಒಳಗೊಂಡಿದೆ. ಇವರ ಅನೇಕ ಕಥೆ, ಕಾದಂಬರಿಗಳು ಅಸಂಘಟಿತ ವಲಯಗಳಲ್ಲಿ ದುಡಿಯುತ್ತಿರುವ ಮಹಿಳೆಯರ ಮೇಲೆ ನಡೆಯುತ್ತಿರುವ ಅತ್ಯಾಚಾರಗಳನ್ನು ಕುರಿತವುಗಳಾಗಿವೆ. ಉಷಾ.ಪಿ.ರೈ.ಅವರ "ಒಂದೇ ದೋಣಿಯ ಪ್ರಯಾಣಿಕರು" ತುಳಸಿ ವೇಣುಗೋಪಾಲ್ ಅವರ ಜುಗಲ್ ಬಂದಿ, ಸುಮಂಗಳ ಅವರ ಜುಮುರು ಮಳೆ ಕಥೆಗಳಲ್ಲಿ ಆರ್ಥಿಕ ಸಬಲತೆ, ಶಿಕ್ಷಣ, ಉದ್ಯೋಗ ಎಲ್ಲಾ ಇದ್ದರೂ ಸಾಂಗತ್ಯದ ಕೊರತೆ ಕಾಣುವ ವೃದ್ಧಾಪ್ಯದ ದಿನಗಳು ಹಾಗೂ ಅವರವರ ವೈಯಕ್ತಿಕ ಹಾಗೂ ಉದ್ಯೋಗ ಕ್ಷೇತ್ರದ ಅನುಭವ ಕಥನಗಳಾಗಿವೆ.

ತೆಲುಗು ಸ್ತ್ರೀವಾದಿ ಕಥಾಸಾಹಿತ್ಯವು ಸಾರ್ವಜನಿಕ ಮತ್ತು ಕೆಲಸದ ಸ್ಥಳಗಳಲ್ಲಿನ ಸ್ತ್ರೀ ಶೋಷಣೆಯನ್ನು ಸಮರ್ಥವಾಗಿ ಹಿಡಿದಿಟ್ಟಿದೆ ಉದಾಹರಣೆಗೆ ಓಲ್ಗಾ ಅವರ 'ಅಯೋನಿ' ಕಥೆಯಲ್ಲಿ ಏಳು ವರ್ಷದ ಹುಡುಗಿಯನ್ನು ಪುಂಡರ ಗುಂಪೊಂದು ಅಪಹರಿಸಿ ಬಲವಂತವಾಗಿ ಅತ್ಯಾಚಾರ ಮಾಡುತ್ತದೆ. ಈ ಘಟನೆಯಿಂದ ಜರ್ಜರಿತಳಾದ ಹುಡುಗಿಯ ಅಂತರಂಗದಲ್ಲಿ ಜಿಗುಪ್ಸೆ ಹುಟ್ಟಿ ತನ್ನ ಈ ಗತಿಗೆ ಕಾರಣ ಯೋನಿ. ನಾನು ಅಯೋನಿಯಾಗಿ ಹುಟ್ಟಬಾರದಿತ್ತೆ ಎಂದು ವಿಷಾದವನ್ನು ವ್ಯಕ್ತಪಡಿಸುತ್ತಾಳೆ. ಮಕ್ಕಳ ವಯಸ್ಸನ್ನು ಕೂಡ ಲೆಕ್ಕಿಸದೆ ಅತ್ಯಾಚಾರ ಗೈಯ್ಯುವ ಸಮಾಜದ ನಿಕೃಷ್ಠ ಮನಸ್ಥಿತಿಯನ್ನು ಖಂಡಿಸಿದ್ದಾಳೆ.

'ಅಂಜಲಿ ನಿರ್ಣಯಂ' ಕಥೆಯಲ್ಲಿ ಅತ್ಯಾಚಾರಕ್ಕೆ ಗುರಿಯಾದ ಹೆಂಡತಿಯನ್ನು ಆದರಿಸದೆ ಅವಳನ್ನು ವೇಶ್ಯಾವಾಟಿಕೆಗೆ ತಳ್ಳುವ ಗಂಡನ ನೀಚ ಪ್ರವೃತ್ತಿಯನ್ನು ಕೋಡೂರಿ ಅಮರಾವತಿ ಸಮರ್ಥವಾಗಿ ಚಿತ್ರಿಸಿದ್ದಾರೆ. ಇಲ್ಲಿಂದಿಲ್ಲ ಸರಸ್ವತಿ ದೇವಿ ಅವರ ಸ್ತ್ರೀ ನೀಕು ರಕ್ಷಣ ಎಕ್ಕಡ? ಎಕ್ಕಡ? ಕಥೆಯು ಸಹ ಇದೇ ವಸ್ತುವನ್ನು ಒಳಗೊಂಡಿದೆ.

ಶಾರದ ಅಶೋಕ ವರ್ಧನ್ ಅವರ 'ಪುರವು' ಕಥೆಯಲ್ಲಿ ಶಿರಿಷ ಪೆಂಟಿಂಗ್ ಎಗ್ಜಿಬಿಷನ್ ಕಂಪನಿಯ ಉದ್ಯೋಗಿಯಾಗಿದ್ದು, ಸಾಯಂಕಾಲ ಕೆಲಸ ಮುಗಿಸಿ ಮನೆಗೆ ತೆರಳುವಾಗ ನಾಲ್ಕು ಜನ ದುಷ್ಕರ್ಮಿಗಳಿಂದ ಅತ್ಯಾಚಾರಕ್ಕೆ ಗುರಿಯಾಗುತ್ತಾಳೆ. ವಿಷಯ ತಿಳಿದ ಗಂಡನ ಮನೆಯವರೆಲ್ಲ

ಅವಳನ್ನು ತವರು ಮನೆಗೆ ಕಳುಹಿಸಬೇಕೆಂದು ನಿರ್ಣಯಕ್ಕೆ ಬಂದಾಗ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಇದರಲ್ಲಿ ಹೆಣ್ಣಿನದೇನು ತಪ್ಪಿಲ್ಲದಿದ್ದರೂ, ಹೆಣ್ಣಿನದೆ ತಪ್ಪೆಂದು ಭಾವಿಸುವ ಪುರುಷ ಪ್ರಧಾನ ವ್ಯವಸ್ಥೆಯ ಮನೋಪ್ರವೃತ್ತಿಯನ್ನು ಕವಯತ್ರಿ ಖಂಡಿಸುತ್ತಾಳೆ.

ಅಬ್ಬೂರಿ ಛಾಯಾದೇವಿ ಅವರ 'ಕರ್ತ-ಕರ್ಮ-ಕ್ರಿಯ' ಕಥೆಯಲ್ಲಿ ವನಜಳಿಗೆ ಪ್ರಮೋಷನ್ ನೀಡಲು ಅವಳು ಕೆಲಸ ಮಾಡುತ್ತಿರುವ ಕಂಪನಿಯಲ್ಲಿ ಮುಖ್ಯಸ್ಥ ಲೈಂಗಿಕ ಬೇಡಿಕೆಯನ್ನು ಮುಂದಿಡುತ್ತಾನೆ. ಇದನ್ನು ತಿರಸ್ಕರಿಸಿ ಕಂಪನಿಯ ಜನರಲ್‌ಗೆ ಪಿರ್ಯಾದು ಸಲ್ಲಿಸಿ ಗೆಲ್ಲುತ್ತಾಳೆ. ಇದರಿಂದ ಕೋಪಿತನಾದ ಕಂಪನಿಯ ಮುಖ್ಯಸ್ಥ ಜನರಲ್‌ಗೂ ವನಜಳಿಗೂ ಅಕ್ರಮ ಸಂಬಂಧವಿದೆ ಎಂದು ಸುಳ್ಳು ಸುದ್ದಿಯನ್ನು ಹರಡಿಸುತ್ತಾನೆ. ಸುದ್ದಿತಿಳಿದ ವನಜ ಕುಗ್ಗಿಹೋಗುತ್ತಾಳೆ.

ಇವರದೆ ಮತ್ತೊಂದು ಕಥೆ 'ಅನುಚಿತಂ'ನಲ್ಲಿ ಮಿಸೆಸ್ ಶರ್ಮಳು ಕೆಲವು ದಿನಗಳ ಕಾಲ ಉದ್ಯೋಗವನ್ನು ಬಿಟ್ಟು ಮತ್ತೆ ವಾಲೆಂಟರಿಯಾಗಿ ಕೆಲಸ ಮಾಡಲು ಕಂಪನಿಗೆ ಬಂದಾಗ ಸಹೋದ್ಯೋಗಿಗಳು ತಮ್ಮ ಓವರ್ ಟೈಮ್ ಹೋಗುತ್ತದೆಂದು ನಿಂದಿಸುತ್ತಾರೆ. ಮನನೊಂದು ಶರ್ಮಳು ರಾಜಿನಾಮೆಯನ್ನು ನೀಡುತ್ತಾಳೆ.

ವೇದುಲ ಶಕುಂತಲ ಅವರ 'ಸುನಿತ'ಕಥೆಯಲ್ಲಿ ಸಂಸಾರಕ್ಕೆ ಯೋಗ್ಯನಲ್ಲದ ಗಂಡನನ್ನು ತೊರೆದು ಉದ್ಯೋಗಕ್ಕೆ ಸೇರುತ್ತಾಳೆ. ಇಲ್ಲಿ ಪುರುಷ ಉದ್ಯೋಗಿಗಳ ಲೈಂಗಿಕ ಶೋಷಣೆಗೆ ಬಲಿಯಾಗಿದ್ದಲ್ಲದೆ ಅಕ್ಕ ಪಕ್ಕದವರಿಂದ ಅವಹೇಳನಕ್ಕೆ ಗುರಿಯಾಗಿ ಉದ್ಯೋಗಕ್ಕೆ ರಾಜಿನಾಮೆ ನೀಡಿ ಮತ್ತೆ ಗಂಡನ ಮನೆ ಸೇರುತ್ತಾಳೆ.

ಚಿಲ್ಲರ ಭವಾನಿದೇವಿ ಅವರ 'ತಲಪುಲು ಪಂಡುನಾ' ಕಥೆಯಲ್ಲಿ ವಸಂತಳಿಗೆ ಆರ್ಥಿಕ ಸಮಸ್ಯೆ ಇದ್ದ ಕಾರಣ ಕಂಪನಿಯ ಮುಖ್ಯಸ್ಥನಿಂದ ಕಿರುಕುಳವನ್ನು ಅನಿವಾರ್ಯವಾಗಿ ಸಹಿಸಿಕೊಳ್ಳ ಬೇಕಾಗುತ್ತದೆ. ಸಿನಿಯಾರಿಟಿ ಪ್ರಕಾರ ತನಗೆ ನೀಡಬೇಕಾಗಿದ್ದ ಪ್ರಮೋಷನ್‌ನನ್ನು ಜೂನಿಯರ್‌ಗೆ ನೀಡಲಾಗುತ್ತದೆ. ಹೀಗೆ ಪುರುಷ ಪ್ರಧಾನ ವ್ಯವಸ್ಥೆ ತೋರುವ ಅಸಮಾನತೆಯನ್ನು ಲೇಖಕಿ ಖಂಡಿಸುತ್ತಾರೆ.

ವಾಸಿರೆಡ್ಡಿ ಸೀತಾದೇವಿ ಅವರ "ಕಥ ಪೂರ್ತಿಕಾಲೇದು" ಕಥೆಯಲ್ಲಿ ಗಿರಿಜಳಿಂದ ಶಾರೀರಿಕ ಸುಖವನ್ನು ಪಡೆಯಬೇಕೆಂದಿದ್ದ ಆಫಿಸರ್ ಟ್ರಾನ್ಸ್‌ಫರ್ ಆಗಿ ಹೋದ ಮೇಲೆ ಹೊಸದಾಗಿ ನೇಮಕಗೊಂಡ ಆಫಿಸರ್ ಗಿರಿಜಳೊಂದಿಗೆ ಸಲಿಗೆಯಿಂದ ವರ್ತಿಸುತ್ತ ಒಂದು ದಿನ ತನ್ನ ಕಾರಿನಲ್ಲಿ ಲಿಫ್ಟ್‌ಕೊಡುವ ಕಾರಣವನ್ನೊಡ್ಡಿ ನಂಬಿಸಿ ಕರೆದೊಯ್ದು ಅತ್ಯಾಚಾರವೆಸಗುತ್ತಾನೆ. ಶೀಲ ಕಳೆದುಕೊಂಡು ಗಿರಿಜ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಇವರ ಬಹುತೇಕ ಕಾದಂಬರಿಗಳು ಕೂಡ ಇದೇ ವಸ್ತುವನ್ನು ಪ್ರತಿನಿಧಿಸುತ್ತವೆ.

ಉದ್ಯೋಗ ಹೆಣ್ಣಿಗೆ ಹೊರ ಜಗತ್ತಿನಲ್ಲಿ ಬೆರೆಯುವ ಅನುಭವಗಳಿಗೆ ಅವಕಾಶಗಳನ್ನು ಕಲ್ಪಿಸುತ್ತದೆ. ಆರ್ಥಿಕ ಸ್ವಾವಲಂಬನೆಯ ದಾರಿಯನ್ನು ತೆರೆಯುತ್ತಾ ಆತ್ಮವಿಶ್ವಾಸವನ್ನು ಕುದುರಿಸುತ್ತದೆ.

ಈವರೆಗೂ ಮಹಿಳೆಯ ದೊಡ್ಡ ಸಮಸ್ಯೆಯಾಗಿ ಕಾಡುತ್ತಲೇ ಬಂದಿರುವ ಪುರುಷಾವಲಂಬನೆಯ ಎದುರು ಹಲವು ಪ್ರಶ್ನೆಗಳನ್ನು ಕೇಳಲು ಎದುರಿಸಲು ಸ್ಥೈರ್ಯವನ್ನೊದಗಿಸುತ್ತಿದೆ. ಹಾಗೆಂದು ಇದಿಷ್ಟರಿಂದಲೇ ವಿಮೋಚನೆ ಬಿಡುಗಡೆಗಳು ಒದಗಿ ಬಿಡುತ್ತವೆಂದೇನೂ ಸದ್ಯಕ್ಕೆ ಭ್ರಮಿಸುವಂತಿಲ್ಲ. ಹಿಂದಿನ ಎಲ್ಲ ಸಮಸ್ಯೆಗಳು ವಿವಿಧ ರೂಪುವೇಷಗಳನ್ನು ಧರಿಸಿ, ಕೆಲವೊಮ್ಮೆ ಇನ್ನಷ್ಟು ಆಕ್ರಮಣಕಾರಿಯಾಗಿ ಅವಳನ್ನು ಆವರಿಸುತ್ತಿವೆಂಬುದೂ ನಿಜವೇ. ಆದರೆ ಉದ್ಯೋಗಾವಕಾಶಗಳು ಇಂದು ಅವಳಿಗೆ ಮಾನಸಿಕ ಹಾಗೂ ನೈತಿಕ ಬೆಂಬಲಗಳನ್ನೊದಗಿಸುತ್ತದೆ ಎಂಬುದೂ ಮಹಿಳೆಯ ಪಾಲಿನ ಆಶಾಕಿರಣ.

## ಅಧ್ಯಾಯ : ಐದು

# ಕನ್ನಡ–ತೆಲುಗು ಸ್ತ್ರೀವಾದಿ ಕಾವ್ಯದಲ್ಲಿ ಲಿಂಗ ಸಮಾನತೆಯ ಪರಿಕಲ್ಪನೆ

## ಅಧ್ಯಾಯ : ಐದು

# ಕನ್ನಡ-ತೆಲುಗು ಸ್ತ್ರೀವಾದಿ ಕಾವ್ಯದಲ್ಲಿ ಲಿಂಗ ಸಮಾನತೆಯ ಪರಿಕಲ್ಪನೆ

ಸ್ತ್ರೀಯರು ಮತ್ತು ಪುರುಷರು ಹುಟ್ಟಿನಲ್ಲಿ ಸಮಾನರು ಮತ್ತು ಅವರನ್ನು ಹಾಗೆಯೇ ಕಾಣಬೇಕಾದದ್ದು ನ್ಯಾಯೋಚಿತವಾದ ಕ್ರಮ. ಇವರೀರ್ವರ ನಡುವೆ ಯಾವುದೇ ಲಿಂಗತಾರತಮ್ಯವಿರಕೂಡದು. ಸ್ತ್ರೀಯರನ್ನು ಪುರುಷರಿಗಿಂತ ಕೀಳಾಗಿ ಕಾಣುವುದು, ಅವರನ್ನು ದ್ವಿತೀಯ ಲಿಂಗದವರೆಂದು (Second sex) ಪರಿಗಣಿಸುವುದು ಸರಿಯಲ್ಲ. ಸ್ತ್ರೀಯರಿಗೂ ಪುರುಷರಿಗೂ ಸಮಾನವಾದ ಹಕ್ಕು, ಅವಕಾಶ, ಅಂತಸ್ತು ಹಾಗೂ ಸ್ಥಾನಮಾನಗಳನ್ನು ನೀಡುವುದು ನೈತಿಕ ಬದ್ಧತೆ ಕೂಡ. ಆದರೆ ಪುರುಷ ಪ್ರಧಾನ ಸಂಸ್ಕೃತಿಯಿಂದಾಗಿ ಲಿಂಗಭೇದ ಆಧಾರಿತ ಶ್ರಮ ವಿಭಜನೆಯ ಕಾರಣ ಮತ್ತು ಸಾಂಸ್ಕೃತಿಕ ಸಂಸ್ಕಾರಗಳಿಂದಾಗಿ ಸ್ತ್ರೀಯರ ಕಾರ್ಯಕ್ಷೇತ್ರವು ಬಹಳ ಸೀಮಿತವಾಗಿದೆ. ಸ್ತ್ರೀ ಎಂದೊಡನೆ ಅಬಲೆ, ಪರಾವಲಂಬಿ ಮತ್ತು ಸೂಕ್ಷ್ಮ ಜೀವಿ ಎಂಬ ಮುದ್ರೆ ಗುರುತುಗಳನ್ನು ನಿರ್ದಿಷ್ಟಗೊಳಿಸಲಾಗಿರುವುದು ಗಮನಾರ್ಹ. ಅಡುಗೆ ಮನೆ ಮತ್ತು ಮಕ್ಕಳು ಇವೆ ಅವರ ಮುಖ್ಯ ಕಾರ್ಯಕ್ಷೇತ್ರಗಳು. ಆರಿಂಗಣದಿಂದ ಹೊರ ಬರಬಾರದು ಎಂಬ ವೈಚಾರಿಕ ನಿರ್ಬಂಧವನ್ನು ರೂಪಿಸಲಾಗಿದೆ.

ಸ್ತ್ರೀ-ಪುರುಷ ಸಮಾನತೆಯ ಜೈವಿಕ ಮೂಲ ಸಿದ್ಧಾಂತವನ್ನು ಸ್ತ್ರೀವಾದಿಗಳು ತಿರಸ್ಕರಿಸುತ್ತಾರೆ. ಪುರುಷರ ಜೈವಿಕ ರಚನೆ 'ಪುರುಷತ್ವ'ವನ್ನು ಸೃಷ್ಟಿಸಿದರೆ ಸ್ತ್ರೀಯರ ಜೈವಿಕ ರಚನೆ 'ಸ್ತ್ರೀತ್ವ'ವನ್ನು ಸೃಷ್ಟಿಸುತ್ತದೆ ಎಂಬ ವಾದ ಹುರುಳಿಲ್ಲದ್ದು ಎಂದು ಹೇಳುತ್ತ ಪುರುಷತ್ವ ಮತ್ತು ಸ್ತ್ರೀತ್ವ ಎಂಬ ಪರಿಕಲ್ಪನೆಗಳು ಮಾನಸಿಕ ಸ್ಥಿತಿಗಳೇ ಹೊರತು ಸಾರ್ವತ್ರಿಕ ವಾಸ್ತವಗಳಲ್ಲ.

ನಮ್ಮ ದೌರ್ಬಲ್ಯಗಳು ಅಥವಾ ಸಾಮರ್ಥ್ಯಗಳು ಜೀವನದಲ್ಲಿ ದೊರೆಯುವ ಅಥವಾ ದೊರೆಯದಿರುವ ಅವಕಾಶಗಳಿಂದ ಪ್ರಭಾವಿತವಾಗಿರುವಂಥವು. ಪುರುಷ ಕೇಂದ್ರಿತ ಸಾಮಾಜಿಕ ಮೌಲ್ಯಗಳು ಅನೇಕ ಸ್ತ್ರೀಯರಲ್ಲಿ ಕೀಳರಿಮೆಯ ಪರಾಧೀನತೆಯ ಅಥವಾ ದುರ್ಬಲತೆಯ ಭಾವನೆಗಳನ್ನು ಮೂಡಿಸುತ್ತವೆ. ಸ್ತ್ರೀ-ಪುರುಷರ ಮೂಲ ಪ್ರವೃತ್ತಿಗಳು ಎಂದು ಗುರುತಿಸಲ್ಪಟ್ಟಿರುವ ಅನೇಕ ಲಕ್ಷಣಗಳು ನಮ್ಮ ಸಾಂಸ್ಕೃತಿಕ ಮೌಲ್ಯಾವಸ್ಥೆಯಿಂದ ಪ್ರಭಾವಿಸಲ್ಪಟ್ಟಿವೆಯೇ ಹೊರತು ಇವು ಸ್ತ್ರೀಯರಿಗೆ ಸಹಜವಾಗಿ ಬಂದಂಥ ಗುಣಗಳಲ್ಲ. ಸ್ತ್ರೀಯರಿಗೆ ಸಮಾನ ಅವಕಾಶಗಳನ್ನು ನಿರಾಕರಿಸಲು ಸ್ತ್ರೀಯ ಜೈವಿಕತೆಯನ್ನು ಮುಂದೊಡ್ಡಿರುವ ಪಿತೃಪ್ರಧಾನ ವ್ಯವಸ್ಥೆಯ ಸಮಾಜ ಇಂದಿಗೂ ಜೈವಿಕವಾದಕ್ಕೆ ಅನಗತ್ಯವಾದ ಮಾನ್ಯತೆಯನ್ನು ನೀಡುತ್ತ ಬಂದಿದೆ.

ಸ್ತ್ರೀಯರ ಜೈವಿಕ ದೌರ್ಬಲ್ಯ ಸಾಂಸ್ಕೃತಿಕ ಪೂರ್ವಗ್ರಹದ ಪ್ರತೀಕವೇ ಹೊರತು ಅದು ಆಕೆಯ ಜೈವಿಕತೆಗೆ ಸಂಬಂಧಿಸಿದ್ದಲ್ಲ ಎನ್ನುವುದು ಸ್ತ್ರೀವಾದಿಗಳ ಖಂಡಿತವಾದ ನಿಲುವು. ಸ್ತ್ರೀಯ ಜೈವಿಕತೆಯನ್ನು ಮುಂದಿಟ್ಟುಕೊಂಡು ಸ್ತ್ರೀಯರು ಮಾಡುವ ಕೆಲಸಗಳನ್ನು ಗೌಣವಾಗಿ ಪರಿಗಣಿಸುವ ಧೋರಣೆ ಬಹುಪಾಲು ಎಲ್ಲ ಸಮಾಜಗಳಲ್ಲೂ ಕಂಡುಬರುತ್ತದೆ. ಉತ್ಪಾದನಾ ಕ್ರಿಯೆಯಲ್ಲಿ ಗೋಚರವಾಗುವಂಥ ಜವಾಬ್ದಾರಿಗಳನ್ನು ಪುರುಷರು ನಿರ್ವಹಿಸುತ್ತಿದ್ದಾರೆ. ಆದುದ್ದರಿಂದಲೇ ಅವರಿಗೆ ಸಮಾಜ ಕಟ್ಟಿರುವ ಮೌಲ್ಯ ಹೆಚ್ಚಾಗಿದೆ. ಮನೆಯ ಒಳಗೆ ಇರುವ ಸ್ತ್ರೀಯೇ ಆಗಲಿ, ದೈಹಿಕ ಶ್ರಮವನ್ನು ಬಳಸಿ ಮನೆಯ ಹೊರಗೆ ದುಡಿಯುತ್ತಿರುವ ಸ್ತ್ರೀಯೇ ಆಗಲಿ ಪುರುಷನಿಗೆ ಸಮಾನಳಲ್ಲ ಎಂಬ ಆಧಾರಿತ ಹಾಗೂ ಅರ್ಥಹೀನವಾದ ವಾದಗಳಿಗೆ ಕನ್ನಡ–ತೆಲುಗು ಸ್ತ್ರೀವಾದಿ ಲೇಖಕಿಯರು ವಿರೋಧವನ್ನು ವ್ಯಕ್ತಪಡಿಸುತ್ತ ಗಂಡು–ಹೆಣ್ಣಿಗೆ ಸರಿಸಮಾನವಾಗಿ ಸಲ್ಲಬಹುದಾದ ಲಿಂಗ ಸಮಾನತೆಯ ತತ್ವವೊಂದನ್ನು ತಮ್ಮ ಕಾವ್ಯದಲ್ಲಿ ಎತ್ತಿ ಹಿಡಿಯಲಾಗಿದೆ. ಮೊದಲಿಗೆ ಕನ್ನಡ ಸ್ತ್ರೀವಾದಿ ಕಾವ್ಯವನ್ನೆ ವಿಶ್ಲೇಷಣೆಗೆ ಒಳಪಡಿಸುವುದಾದರೆ ಇವರು ಸಮಾಜದಲ್ಲಿ ರೂಢಿಗತವಾಗಿ ರೂಪುಗೊಂಡ ಮೌಲ್ಯವಸ್ಥೆಯನ್ನು ಪ್ರಶ್ನಿಸುವ ಮೂಲಕ ಲಿಂಗಸಮಾನತೆಯನ್ನು ಬಯಸುತ್ತಾರೆ.

ಪುರುಷ ಪ್ರಧಾನ ವ್ಯವಸ್ಥೆಯು ಹೆಣ್ಣನ್ನು ಲೈಂಗಿಕ ವಸ್ತು ಎಂಬ ಕಲ್ಪನೆಯಲ್ಲಿಯೇ ನೋಡುವುದುಂಟು. ಎಲ್ಲ ಸ್ತ್ರೀಯರನ್ನೂ ಈ ಕಲ್ಪನೆಯ ಆವರಣದೊಳಗಡೆಯೇ ತಂದುಕೊಳ್ಳುವುದು ವಿಕೃತ ಮನಸ್ಸಿನ ಪ್ರತೀಕವಾಗುತ್ತದೆ. ಹೆಣ್ಣನ್ನು ಇಂಥ ಈ ಭಾವನೆಯ ಹಿನ್ನೆಲೆಯಲ್ಲಿ ನೋಡದೆ ಸ್ನೇಹ, ನಿಷ್ಕಲ್ಮಷ ಪ್ರೀತಿ ಹಾಗೂ ಸೋದರತ್ವ ಭಾವದಿಂದ ಕಾಣುವುದರಿಂದ ಸ್ತ್ರೀ–ಪುರುಷರ ನಡುವಿನ ಅಂತರ ಕಡಿಮೆಯಾಗಿ ಪರಸ್ಪರ ಸಾಮರಸ್ಯ ಉಂಟಾಗುತ್ತದೆ. ಹಾಗಿಲ್ಲದೆ ವಿಕೃತ ಭಾವದಿಂದ ವರ್ತಿಸುವ ಪುರುಷರ ವಿರುದ್ಧ ಮಹಿಳೆ ಸಿಡಿದೇಳುವುದರಿಂದ ಸ್ತ್ರೀ–ಪುರುಷರಲ್ಲಿ ಸಂಘರ್ಷ ಅನಿವಾರ್ಯವಾಗುತ್ತದೆ ಎಂಬುದಾಗಿ ಲಲಿತಾ ನಾಯಕ್ ಅವರು "ಪ್ರೀತಿಸುವ ಬನ್ನಿ" ಎಂಬ ಕವನದಲ್ಲಿ ತಿಳಿಸಿದ್ದಾರೆ.

ಪುರುಷರೇ
ನೀವು ನಮ್ಮ
ಪ್ರೀತಿಯ ಅರ್ಥವ ಅರಿತವರಾದರೆ
ಸ್ನೇಹದ ಸೂಕ್ಷ್ಮತೆ ಬಲ್ಲವರಾದರೆ
ಸಹಜ ಸೋದರಿಕೆ ತೋರುವಿರಾದರೆ
ಬನ್ನಿ ನಾವು ನೀವು ಪ್ರೀತಿಸುವ
    ವಿಕೃತ ಭಾವವ ತೊಡೆದವರಾದರೆ
    ಕೀಳು ಕಾಮನೆಯ ಬಿಟ್ಟವರಾದರೆ

ಅಂಗದ ಗುಂಗನು ತೊರೆಯುವಿರಾದರೆ
ಬನ್ನಿ ನಾವು ನೀವು ಪ್ರೀತಿಸುವ

(ಲಲಿತಾ ನಾಯಕ್, ಬಿದಿರು ಮಳೆ ಕಂಟಿಯಲಿ, ಪು-೧೭೪)

ಈ ಕವನದ ಮುಂದಿನ ಸಾಲುಗಳಲ್ಲಿ ಸ್ತ್ರೀ ಶೋಷಣೆಯನ್ನು ಶಾಸ್ತ್ರ ಸಮ್ಮತವಾಗಿಸಿ, ಪುರುಷರ ಶೋಷಕ ಪ್ರವೃತ್ತಿಗೆ ಉತ್ತೇಜನ ನೀಡಿದ ಹಾಗೂ ಸ್ತ್ರೀ ಶೋಷಣೆಯನ್ನು ಶಾಶ್ವತಗೊಳಿಸಿದ ಮನುವನ್ನು ಮತ್ತು ಮನುವಾದಿಗಳನ್ನು ದರದರನೆ ಎಳೆದೊಯ್ದು ಧಗಧಗಿಸುವ ಚಿತೆಯಲ್ಲಿ ದೂಡುವುದಾಗಿ ಕವಯತ್ರಿ ಘೋಷಿಸುತ್ತಾಳೆ. ಹೆಣ್ಣು ಮತ್ತು ಗಂಡು ಇವರಲ್ಲಿ ಯಾರು ಶ್ರೇಷ್ಠರು ಎಂಬ ಪ್ರಶ್ನೆ ಮುಖ್ಯವಲ್ಲ. ಇವರಲ್ಲಿ ಸಮಾನತೆಯೆ ಮುಖ್ಯ ಎನ್ನುವಂತಹ ತತ್ವವನ್ನು ಎತ್ತಿ ಹಿಡಿಯುತ್ತಾರೆ.

ವಿಜಯ ಸುಬ್ಬರಾಜ್ ಅವರು "ಇನಿಯನಿಗೊಂದು ಕಿವಿ ಮಾತು" ಕವನದಲ್ಲಿ ಗಂಡು ಮೇಲು, ಹೆಣ್ಣು ಕೀಳು ಎಂಬ ಪಾರಂಪರಿಕ ಭಾವನೆಯನ್ನು ಖಂಡಿಸುತ್ತಾರೆ. ಸೃಷ್ಟಿಯಲ್ಲಿ ಗಂಡು ಹೆಣ್ಣುಗಳೆಂಬುವು ಎರಡು ವರ್ಗಗಳೇ ಹೊರತು ಒಂದು ಇನ್ನೊಂದನ್ನು ಅವಲಂಬಿಸಬೇಕಿಲ್ಲ. ಆದ್ದರಿಂದ ಹೆಣ್ಣು ಪುರುಷನ ಅವಲಂಬಿ ಎಂಬ ಪರಿಕಲ್ಪನೆಯೇ ಶೋಷಣೆಗೆ ದಾರಿ ಮಾಡಿಕೊಡುತ್ತದೆ ಎಂಬ ಅಭಿಪ್ರಾಯದ ಹಿನ್ನೆಲೆಯಲ್ಲಿ ಪಿತೃಪ್ರಧಾನ ಸಂಸ್ಕೃತಿ ನಿರ್ಮಿಸಿರುವ ಪ್ರತೀಕಗಳನ್ನು ಭಂಜಿಸುತ್ತಾರೆ. ಆ ಮೂಲಕ ಸ್ತ್ರೀ-ಪುರುಷ ಸಮಾನತೆಯನ್ನು ಪ್ರತಿಪಾದಿಸುತ್ತಾರೆ.

ನೀನು ಚಂದ್ರ-ನಾನು ಬೆಳಕು
ನೀವು ಹೂವು-ನಾನು ಗಂಧ
ನೀವು ವಸ್ತು-ನಾನು ನೆರಳು
ಎಂದು ಪರಾವಲಂಬಿಗಳಾಗೋದು ಬೇಡ
ಗಂಡ ಹೆಂಡತಿ-ಮೈತ್ರಿಗಳೆಂದು
ಪ್ರತಿಪಾದಿಸೋಣ

(ವಿಜಯ ಸುಬ್ಬರಾಜ್, ತ್ರಿಶಂಕು, ಪು-೩೮)

ಗಂಡು ಹೆಣ್ಣು ಪರಸ್ಪರ ಹೊಂದಾಣಿಕೆಯಿಂದ ಸಾಮರಸ್ಯದ ಬದುಕನ್ನು ಸಾಗಿಸಬೇಕು ಎಂಬ ನಿರೀಕ್ಷೆ ಸಹಜವಾದುದೆ. ಇದರಿಂದ ಸ್ತ್ರೀ-ಪುರುಷರ ಸಮಾನತೆಯೂ ಸಾಧ್ಯವಾಗುತ್ತದೆ. ಒಂದು ವೇಳೆ ಪುರುಷರು ತಮ್ಮ ಅಹಂಕಾರ ಮತ್ತು ಮೇಲರಿಮೆಗಳಿಗೆ ಧಕ್ಕೆಯಾಗುತ್ತದೆಂಬ ಕಾರಣದಿಂದ ಇಂಥ ಸಮಾನತೆಗೆ ಆಸ್ಪದ ಕೊಡದೆ ಇದ್ದರೆ ಸ್ತ್ರೀಯರು ಅಂಥ ಗುಲಾಮಗಿರಿಯಿಂದ ಹೊರ ಬಂದು ಸ್ವತಂತ್ರ ಮತ್ತು ಸ್ವಾವಲಂಬನೆಯ ಜೀವನ ಸಾಗಿಸುವ ದಿಟ್ಟತನ ಪ್ರದರ್ಶಿಸಬೇಕೆಂಬ ಆಶಯ ಈ ಕವನದಲ್ಲಿದೆ.

ಎಂ.ಎಸ್. ವೇದಾ ಅವರ 'ಸಂಗಾತಿ' ಕವನವು ಲಿಂಗ ಸಮಾನತೆಯನ್ನು ಪ್ರತಿಪಾದಿಸುತ್ತದೆ. ಸ್ತ್ರೀಯರು ಯಾವತ್ತೂ ಪುರುಷರ ಅವಲಂಬಿಗಳಾಗಿಯೇ ಉಳಿದು ಎರಡನೆಯ ದರ್ಜೆಯ ಸ್ಥಾನದಲ್ಲಿಯೇ ಇರಬೇಕೆಂಬ ಧೋರಣೆಯನ್ನು ಈ ಕವನದಲ್ಲಿ ಪ್ರಶ್ನಿಸಲಾಗಿದೆ.

ನಾನೇಕೆ ಬಳ್ಳಿ ನೀನೇಕೆ ಮರ
ನನ್ನ ಕಾಲ ಮೇಲಲ್ಲವೆ ನನ್ನ ನಿಲುವು
ನನ್ನ ಬಾಳಿಗೂ ಇಲ್ಲವೆ ನಿನ್ನಂತೆ ಛಲವು
ಆಸರೆಯ ಮಾತೆಲ್ಲಾ ಬೇಸರದ ನುಡಿಗಳೀಗ
ನಾನು ಬಳ್ಳಿಯೂ ಅಲ್ಲ ನೀನು ಮರವೂ ಅಲ್ಲ
ಭೂಮಿಯಲ್ಲಿ ಹುಟ್ಟಿದ ಎರಡು ಗಿಡಗಳು ನಾವು

(ವೇದ ಎಂ. ಎಸ್., ಬೀಳಲುಗಳು, ಪುಟ-೧೩)

ಸಮಾಜದಲ್ಲಿ ಗಂಡು ಹೆಣ್ಣಿನ ಬದುಕು ಸಮಾನಾಂತರ ನೆಲೆಯಲ್ಲಿ ಸಾಗಬೇಕೆ ಹೊರತು, ಒಬ್ಬರ ಆಸರೆಯಲ್ಲಿ ಇನ್ನೊಬ್ಬರು ಇರುವುದಲ್ಲ. ಹಾಗೆ ಇರುವುದಾದರೆ ಅದು ಮೇಲು-ಕೀಳು ಭಾವನೆಗೆ, ಅಸಮಾನತೆಗೆ, ಶೋಷಣೆಗೆ ಅನುವು ಮಾಡಿಕೊಡುತ್ತದೆ. ಇಂಥ ಅಸಮಾನತೆಯನ್ನು ತೊಡೆದು ಹಾಕುವ ಆಶಯ ಕವನದಲ್ಲಿ ತೀವ್ರವಾಗಿದೆ. ಕವನದಲ್ಲಿರುವ ಎರಡು ಗಿಡಗಳು, ಎರಡು ಹೂಗಳು, ಎರಡು ತೊರೆಗಳು ಮತ್ತು ಎರಡು ಹಕ್ಕಿಗಳು ಎಂಬ ಪ್ರತಿಮೆಗಳು ಸ್ತ್ರೀ-ಪುರುಷ ಸಮಾನತೆಯನ್ನು ಪ್ರತಿಪಾದಿಸುತ್ತವೆ.

ಪದ್ಮಶೇಖರ್ ಅವರು "ನಾನು ನಾನಷ್ಟೇ" ಎಂಬ ಕವನದಲ್ಲಿ ಮಹಿಳಾ ಶೋಷಣೆಯನ್ನು ಚಿತ್ರಿಸುತ್ತ ಪುರುಷರ ಶೋಷಕ ಪ್ರವೃತ್ತಿಯನ್ನು ಖಂಡಿಸುತ್ತಾರೆ. ಇನ್ನು ಮುಂದೆ ಪುರುಷಾಧಿಪತ್ಯವನ್ನು ಒಪ್ಪಿಕೊಳ್ಳುವುದಿಲ್ಲವೆಂದೂ, ಪುರುಷ ಪ್ರಧಾನ ವ್ಯವಸ್ಥೆಯ ವಿಧಿ-ನಿಯಮ, ನಿಷೇಧಗಳನ್ನು ಧಿಕ್ಕರಿಸಿ ಸ್ವತಂತ್ರವಾಗುವುದಾಗಿಯೂ ಘೋಷಿಸುತ್ತಾರೆ.

ಓ ಗಂಡಸೆ
ಶೋಧಿಸದಿರು ಒಳಗನ್ನು
ಪ್ರಶ್ನಿಸದಿರು ಪ್ರಾಮಾಣಿಕತೆಯನ್ನು
ನೀ ನಂದುಕೊಂಡಂತೆ ನಾನಿರಲು ಸಾಧ್ಯವೆ?
..........................................
..........................................
ಇಬ್ಬರಿಗೂ ಸಮಪಾಲು
ಸಮಬಾಳ್ವೆ

ಸಮಾನಧರ್ಮ ನೇಮ ನಿಯಮ
ಪಾಪಕರ್ಮ ಎಲ್ಲ

(ಪದ್ಮಾಶೇಖರ್, ಹಕ್ಕಿಯ ಹರಯ, ಪುಟ-೧೯)

ಪಾರಂಪರಿಕ ಮೌಲ್ಯಗಳಾದ ಪಾವಿತ್ರ್ಯ, ಪಾತಿವ್ರತ್ಯಗಳೆಂಬ ತಕ್ಕಡಿಯಲ್ಲಿ ಹೆಣ್ಣನ್ನು ತೂಗಿ ನೋಡುವುದನ್ನು ಕವನದಲ್ಲಿ ನಿರಾಕರಿಸಲಾಗಿದೆ. ಕೆಲವು ಪುರುಷರು ಸ್ತ್ರೀ-ಪುರುಷರ ಸಮಾನತೆಯನ್ನು, ಅಸಮಾನತೆಯನ್ನು ಏಕಕಾಲದಲ್ಲಿ ಒಪ್ಪಿಕೊಂಡಿರುತ್ತಾರೆ. ಅಸಮಾನತೆಯ ಸ್ವರೂಪವನ್ನು ಅರಿಯುವ ಅವಶ್ಯಕತೆ ಪುರುಷರಿಗೆ ಹೆಚ್ಚಿದೆ. ಏಕೆಂದರೆ ತಾರತಮ್ಯ, ಅಸಮಾನತೆಯನ್ನು ಸೃಷ್ಟಿಸಿ ಅವು ಸಹಜವೇನೋ ಎಂಬಂತೆ ಬೆಳೆಸಿದ್ದಾರೆ. ಅತ್ಯಂತ ಸಹಾನುಭೂತಿಯುಳ್ಳ ಗಂಡಸರೂ ಸ್ತ್ರೀಯರ ನಿಜ ಸ್ಥಿತಿಯನ್ನು ಅರಿಲಾರರು. ತಮ್ಮ ಪ್ರಧಾನತೆಯನ್ನು ಸಮರ್ಥಿಸಿಕೊಳ್ಳುವ ಗಂಡಸರನ್ನು ನಂಬಲು ಸಾಧ್ಯವಿಲ್ಲ. ಅಧೀನಪಡಿಸಿಕೊಳ್ಳಲು ನೀಡುವ ಹಿಂಸೆಗೆ ಸ್ತ್ರೀಯರು ಹೆದರಬೇಕಿಲ್ಲ. ಅವರು ವ್ಯಾಖ್ಯಾನಿಸುವ 'ಸ್ತ್ರೀ' ಗುಣಗಳಿಗೆ ಬಲಿಯಾಗಬೇಕಿಲ್ಲ ಎಂಬ ವಿಚಾರಗಳನ್ನು ವ್ಯಕ್ತಪಡಿಸಿದ್ದಾರೆ. ಪುರುಷ ಪ್ರಧಾನ ವ್ಯವಸ್ಥೆಯ ಎಲ್ಲ ಬಂಧನಗಳಿಂದ ಬಿಡುಗಡೆಗೊಂಡು ಪುರುಷರಿಗೆ ಸಮನಾದ ಸ್ಥಾನಮಾನಗಳನ್ನು ಹೊಂದುವುದಾಗಿಯೂ ಕವನ ಘೋಷಿಸಿದೆ.

ಕೆ. ಷರಿಫಾ ಅವರ 'ಮಾನವರಾಗಿ" ಕವಿತೆಯಲ್ಲಿ ಪುರುಷ ಪ್ರಧಾನ ಸಮಾಜದಲ್ಲಿ ರೂಢಿಗತವಾಗಿ ರೂಪುಗೊಂಡ ಪಕ್ಷಪಾತಿಯಾದ ಮೌಲ್ಯಾವಸ್ಥೆಯನ್ನು ಪ್ರಶ್ನಿಸುವ ಮೂಲಕ ಲಿಂಗ ಸಮಾನತೆಯನ್ನು ಕೇಳುವ ಆಶಯವನ್ನು ಕಾಣುತ್ತೇವೆ. ಪುರುಷರು ತಮ್ಮ ಮುಖವಾಡಗಳನ್ನು ಕಳಚಿ, ಅಹಂಕಾರವನ್ನು ತೊರೆದು ಸ್ತ್ರೀ-ಪುರುಷ ಸಮಾನತೆಯೆಡೆಗೆ ಹೆಜ್ಜೆಯನ್ನಿಡಬೇಕೆಂದು ಕರೆಕೊಡುತ್ತಾಳೆ.

ಸಾಕು ಮಾಡಿ ಪುಂಡಾಟಿಕೆ
ಮುಖವಾಡ ಕಳಚಿಟ್ಟು
ಬನ್ನಿ ಬದುಕಿನ ಹತ್ತಿರಕೆ
ಬದುಕು ನರಕವಾಗಿಸಿದ
ವಾಸ್ತವಗಳ ಬಲೆಯಿಂದ
ಹೊರತೆಗೆಯಲು ಜೀವಗಳ
ಒಂದು ಕ್ಷಣ ಮನುಜರಾಗಿ

(ಷರೀಫಾ ಕೆ., ಮುಮ್ತಾಜಳ ಮಹಲು, ಪುಟ-೧೬)

ಮೊದಲು ತಮ್ಮ ಇರುವಿಕೆಯ ಬಗ್ಗೆ ಅರಿವು ಮೂಡಿದರೆ ಮಾತ್ರ ತಾವು ಮುಟ್ಟಬೇಕಾದ ಸ್ಥಿತಿ ಸಾಗಬೇಕಾದ ಮಾರ್ಗವನ್ನು ಆರಿಸಿಕೊಳ್ಳಲು ಸಾಧ್ಯವಾಗುತ್ತದೆ. ಹೆಣ್ಣನ್ನು ಸಂಪ್ರದಾಯ, ಆಚರಣೆ ಮತ್ತು ಪಾತಿವ್ರತ್ಯಗಳ ಹೆಸರಿನಲ್ಲಿ ದೇವತೆ ಮಾತೃ ಸ್ವರೂಪಿಣಿ ಎಂದು ದೈವತ್ವಕ್ಕೇರಿಸುವುದನ್ನು

ಬಿಟ್ಟು ನಿಮ್ಮಂತೆ ಮನುಷ್ಯಳನ್ನಾಗಿ ನೋಡಿ ಎಂದು ಹೇಳುತ್ತದೆ. ಹೀಗೆ ಹತ್ತಿಕ್ಕುವ ಮುನ್ನ ಮನುಜರಾಗಿ ಎನ್ನುವಂತಹ ಲಿಂಗ ಸಮಾನತೆಯ ಪ್ರಶ್ನೆಯಿದೆ.

ಸಮಾನತೆಯ ಅರಿವು ಹೊಂದಿದ ಮಹಿಳೆ ಪುರಾಣೇತಿಹಾಸಗಳ ಸ್ತ್ರೀ ಮಾದರಿಗಳನ್ನು ಭಗ್ನಗೊಳಿಸುವುದರ ಜೊತೆಗೆ ಅಲ್ಲಿ ಶೋಷಣೆಗೊಳಗಾದ ಹೆಣ್ಣು ಪುರುಷ ಸಂಹಿತೆಯನ್ನು ಧಿಕ್ಕರಿಸಿ ನಡೆದುದನ್ನು ಮೆಚ್ಚತೊಡಗಿದಳು. ಇದಕ್ಕೆ ಕವಯತ್ರಿ ದ್ರೌಪದಿಯನ್ನು ಉದಾಹರಿಸುತ್ತಾಳೆ.

ಸುಧೀರ್ಘ ಪಯಣದಲಿ
ಇತಿಹಾಸದ ಪುಟಗಳಿಂದ
ಸಮಾಧಿ ಸ್ಥಿತಿಯಿಂದ
ಕೊಡವಿ ಎದ್ದು ಕೇಳಿದೆ
ಬನ್ನಿ! ಪಗಡೆಯಾಟಕೆ ಬನ್ನಿ
ಪಣಕ್ಕಿಡುವ ವಸ್ತು ನಾನಲ್ಲ
ಪಗಡೆಯಾಗುವ ಕೈಯಾಗುತ್ತೇನೆ
ಸುಖ ದುಃಖದಲಿ ಸಾಥಿಯಾಗುತ್ತೇನೆ
ಬದುಕಿನಲಿ ಸಂಗಾತಿಯಾಗುತ್ತೇನೆ

(ಷರೀಫಾ ಕೆ., ಮುಮ್ತಾಜಳ ಮಹಲು, ಪುಟ-೧೫)

ಪುರುಷ ಪ್ರಧಾನ ವ್ಯವಸ್ಥೆಯ ಸಮಾಜ ಅನಾದಿ ಕಾಲದಿಂದಲೂ ಮಹಿಳೆಯನ್ನು ಒಂದು ವಸ್ತುವೆಂಬಂತೆ ಪಣಕ್ಕಿಟ್ಟು ಸೋಲಲಾಗುತ್ತಿದೆ ಎಂಬುದನ್ನು ಹೇಳುತ್ತ ಇಂದಿನ ಎಚ್ಚೆತ್ತ ಮಹಿಳೆ ಪುರುಷರ ಈ ಮನೋಭಾವವನ್ನು ಖಂಡಿಸುತ್ತ ಇನ್ನು ಮುಂದೆ ಇಂತಹ ಶೋಷಣೆಯನ್ನು ಸಹಿಸಲಾರೆ, ಪುರುಷನ ಸುಖ ದುಃಖದಲಿ ಭಾಗಿಯಾಗುತ್ತೇನೆ, ಬದುಕಿನಲಿ ಸಂಗಾತಿಯಾಗುತ್ತೇನೆ ಎನ್ನುವಂತಹ ಲಿಂಗ ಸಮಾನತೆಯ ಧೋರಣೆಯೊಂದನ್ನು ಪ್ರತಿಪಾದಿಸಲಾಗಿದೆ.

ಮಾಲತಿ ಪಟ್ಟಣಶೆಟ್ಟಿ ಅವರ "ಹಂಬಲ" ಕವಿತೆಯು ಗಂಡಸಿನ ಶೋಷಣೆಯನ್ನು ನೇರವಾಗಿ ಪ್ರತಿಭಟಿಸದೆ, ಅದರ ಪರಿಣಾಮವನ್ನು ಮನಮುಟ್ಟುವಂತೆ ನಿರೂಪಿಸಿದ್ದಾರೆ. ಅಂತಹ ಶೋಷಣೆಯಲ್ಲಿ ಕರಗಿ-ಕೊರಗಿ ಹೋದರೂ, ಮತ್ತೆ ಆಶಾಭಾವನೆಯನ್ನು ವ್ಯಕ್ತಪಡಿಸುತ್ತಾರೆ.

ಮುದುಡಿಕೊಳ್ಳುತ್ತೇನೆ ಕಮಲಿನಿ
ಹುದುಗಿ ಹೋಗುತ್ತೇನೆ
ಕರಾಳ ಕಪ್ಪು ಕೆಸರಲ್ಲಿ
ಪಳೆಯುಳಿಕೆಯಾಗಿಸಿ ಮತ್ತೆ
ಹೂಳ ಬೇಡವೊ ನನ್ನ ಸ್ಮೃತಿ

(ಮಾಲತಿ ಪಟ್ಟಣಶೆಟ್ಟಿ, ತಂದೆಯ ಬದುಕು ಗುಲಾಬಿ, ಪುಟ-೧)

ಎನ್ನುವ ನುಡಿಗಳಲ್ಲಿ ನಮ್ರ ವಿನಂತಿ ಇದೆ. ಅಗಾಧವಾದ ಜೀವನ ಪ್ರೀತಿ ಇದೆ. ಬದುಕಿಗಾಗಿ ಅಂಗಲಾಚುವ ಇಲ್ಲಿಯ ಧ್ವನಿ ಕೇವಲ ಕೂಗಾಟದಲ್ಲಿ ಕರಗಿ ಹೋಗುವಂತಹದ್ದಾಗಿರದೆ, ಮನದ ಮೂಲೆಯಲ್ಲಿ ಗುಂಗೀ ಹುಳವಾಗಿ ಕೊರೆಯತೊಡಗುತ್ತದೆ. ಆಡಂಬರದಿಂದ ಮಿಂಚಿ ಮಾಯವಾಗದೆ, ಗುಪ್ತವಾಗಿ ಒಳಹೊಕ್ಕು ಬದುಕಿನ ಬೇರುಗಳನ್ನೇ ಸಡಿಲಿಸುತ್ತದೆ.

ಅದಕಾಗಿಯೆ ಎಂದೊ
ನಡೆಸಿದ್ದೇನೆ ಶತಶತ
ಮಾನದಿಂದಲೇ ಈ
ಪತಿಯ ಸಹಗಮನವನ್ನು

ಎನ್ನುವಲ್ಲಿ ಕೊನೆಯ ಹಂತದ ನಿರ್ಣಯವಿದೆ. ಸತಿ ಸಹಗಮನಕ್ಕೆ ಬದಲಾಗಿ ಪತಿ ಸಹಗಮನವೇ ಕೊನೆಯ ಉತ್ತರವಾಗಲಾರದು. ಇಲ್ಲಿಯವರೆಗೆ ಸತಿ ಸಹಗಮನ ನಡೆದಿದೆ; ಇನ್ನು ಮುಂದೆ ಪತಿ ಸಹಗಮನವಾಗಬೇಕೆಂಬ ವಾದ ಕೇವಲ ಸೇಡಿನ ಮಾತಾಗುತ್ತದೆ. ಎಲ್ಲ ಸಹಗಮನಗಳನ್ನು ಮೀರಿ ಇವತ್ತಿನ ಲಿಂಗ ಸಮಾನತೆಯ ಬದುಕು ಅರಳಬೇಕಾಗಿದೆ ಎಂಬ ಆಶಯವನ್ನು ವ್ಯಕ್ತಪಡಿಸುತ್ತ ಮುಂದಿನ ಕವನದಲ್ಲಿ ಹೀಗೆ ಹೇಳುತ್ತಾರೆ.

ಇರಬೇಕು ನಾನೀಗ
ನನ್ನ ಕನಸು ಕಲ್ಪನೆಗಾಗಿ
ಬುದ್ಧಿ ಭಾವನೆಗಾಗಿ
ಆತ್ಮ ಗೌರವಕ್ಕಾಗಿ
ನನಗಾಗಿ ನಾನಾಗಿ
ಇರಲೇಬೇಕು

(ಮಾಲತಿ ಪಟ್ಟಣಶೆಟ್ಟಿ, ತಂದೆಯ ಬದುಕು ಗುಲಾಬಿ, ಪುಟ-೧೮)

ಈ ನುಡಿಯಲ್ಲಿ ಬದುಕಿನ ಸೇಡು ಮಾಯವಾಗಿ ಜೀವನೋತ್ಸಾಹ ಚಿಗುರಿದೆ. 'ನನಗಾಗಿ ನಾನಾಗಿ' ಎನ್ನುವ ಮಾತು ಹೆಚ್ಚು ಧ್ವನಿಪೂರ್ಣವಾಗುತ್ತ, ಸೇಡು-ಸಿಟ್ಟುಗಳಿಗೆ ಬದಲಾಗಿ ಬದುಕುವ ಹೊಸ ಹಾದಿಯನ್ನು ತೋರಿಸುತ್ತದೆ.

ಬಾಳ ಜಾತ್ರೆಯಲೊಮ್ಮೆ
ಸಂಧಿಸಿದ ಮಿತ್ರ! ಸಣ್ಣದಲ್ಲವೊ ನಿನ್ನದೀ ಪಾತ್ರ!
ಕಣ್ಣ ಕುಂಚಿಗೆ ಬಣ್ಣ ತುಂಬಿದೆ
ಬಿಂಬಿಸಿದೆ ತಿಳಿವು
ಕೆತ್ತಿರುವ ಧೈರ್ಯ-ದುರ್ಗ ಈ

ಋಣಕಾಗಿ ಬರುವೆನೊ ಇನ್ನೊಂದು ಜನ್ಮವೆತ್ತಿ

(ಮಾಲತಿ ಪಟ್ಟಣಶೆಟ್ಟಿ, ತಂದೆಯ ಬದುಕು ಗುಲಾಬಿ, ಪುಟ-೨೦)

ಈ ಮುಂತಾದ ಸಾಲುಗಳಲ್ಲಿ ಜೀವನ ಪ್ರೀತಿ ಸೆಲೆಯೊಡೆದಿದೆ. ಪ್ರೀತಿಯ ಅನಂತತೆಯೆದುರು ಬಿಗುಮಾನವೆಲ್ಲ ಬಿದ್ದು ಹೋಗಿ ಸ್ತ್ರೀ-ಪುರುಷರ ಅನನ್ಯ ಪ್ರೀತಿ ನಳನಳಿಸಿದೆ. ನೋವು-ನಲಿವುಗಳನ್ನು ಜತೆಯಾಗಿಯೇ ಸ್ವೀಕರಿಸುವ ಮನಸ್ಸಿನಲ್ಲಿ ಸಮಾನತೆಯ ಹೊಸ ಬದುಕಿನ ಕಾಳಜಿಗಳಿವೆ.

ನನ್ನಲ್ಲಿ ನೀ ಸುರಿದೆಯೊ

ನಿನ್ನಲ್ಲಿ ನಾ ಹರಿದೆನೊ

ಹರಿವೆ ಯಾರಿಗಿದೆ ಪ್ರೀತಿ

ಸಮಾಗಮದಲ್ಲಿ

(ಮಾಲತಿ ಪಟ್ಟಣಶೆಟ್ಟಿ, ತಂದೆಯ ಬದುಕು ಗುಲಾಬಿ, ಪುಟ-೪೪)

ಈ ನುಡಿಗಳು ಲಿಂಗ ಸಮಾನತೆಯ ಬದುಕಿಗೆ ಬರೆದ ವ್ಯಾಖ್ಯಾನದಂತಿವೆ. ಮೇಲು-ಕೀಳುಗಳನ್ನಳಿಸಿ, ಹೆಚ್ಚು-ಕಡಿಮೆಯೆಂಬುದನ್ನು ಮರೆಸಿ ಸಮಾನತೆಯ ಬದುಕಿಗಾಗಿ ಹಂಬಲಿಸುವ ತೀವ್ರತೆಯಿದೆ. ನನ್ನಲ್ಲಿ-ನಿನ್ನಲ್ಲಿ ಸುರಿಯುವುದು, ಹರಿಯುವುದು ಇವೆಲ್ಲ ಸೃಷ್ಟಿ ಕ್ರಿಯೆಯೊಂದಿಗೆ ಸಾಕ್ಷಾತ್ಕಾರಗೊಳ್ಳುತ್ತಾ, ಪ್ರೀತಿಯ ಅನಂತತೆಯಲ್ಲಿ ಸಮಾಗಮದ ತಿರುಳನ್ನು ಹೇಳಿವೆ.

ಬಿ.ಟಿ. ಲಲಿತಾ ನಾಯಕ್ ಅವರು "ಬೇಡ ದಾಸಿಯ ಪಟ್ಟ" ಕವಿತೆಯಲ್ಲಿ ಹೆಣ್ಣನ್ನು ದೇವರು ಧರ್ಮದ ಹೆಸರಿನಲ್ಲಿ ದೇವದಾಸಿಯನ್ನಾಗಿಸಿ ಕಾಮದ ತೃಷೆ ತೀರಿಸಿಕೊಳ್ಳುವ ಪಟ್ಟಭದ್ರ ಹಿತಾಸಕ್ತಿಗಳ, ಪುರುಷಶಾಹಿ ನಿಲುವನ್ನು ಖಂಡಿಸಿದ್ದಾರೆ. ಮಹಿಳೆಯನ್ನೂ ಸಹ ಪುರುಷನಂತೆ ಮನುಷ್ಯಳಾಗಿ ನೋಡಬೇಕೆಂದು ಹೇಳುತ್ತಾಳೆ.

ಬೇಡ ದೇವಿಯ ಪಟ್ಟ ನಿನಗೆ

ಬೇಡ ದಾಸಿಯ ಪಟ್ಟ

ಸಾಕು, ಮನುಜರೊಂದಿಗೆ ಬಾಳು ಗೆಳತಿ

ಕೇವಲ ಮನುಷ್ಯಳಾಗಿ

(ಲಲಿತಾ ನಾಯಕ್, ಬಿದಿರು ಮಳೆ ಕಂಟಿಯಲಿ, ಪು-೯)

ಮಹಿಳೆಯರು ಮೂಢನಂಬಿಕೆ, ಕಟ್ಟುಪಾಡು, ಕಂದಾಚಾರಗಳಿಗೆ ಒಳಗಾಗದೆ ಪುರುಷನಿಗೆ ಸರಿಸಮನಾಗಿ ಬದುಕಬೇಕೆಂಬ ಆಶಯವನ್ನು ವ್ಯಕ್ತಪಡಿಸಿದ್ದಾರೆ. ಮನುಜರೊಂದಿಗೆ ಬಾಳು ಗೆಳತಿ, ಕೇವಲ ಮನುಷ್ಯಳಾಗಿ ಎನ್ನುವಂತಹ ಸಾಲುಗಳು ಲಿಂಗ ಸಮಾನತೆಯನ್ನು ಪ್ರತಿಪಾದಿಸುತ್ತವೆ.

ಬದುಕಿನ ಯಾವುದೋ ಸಂಧಿಯಲ್ಲಿ ಭೇಟಿಯಾಗಿ ಭಾವನೆಗಳ ಮಹಾಪೂರ ಹರಿಸಿ, ಬಾಳಲ್ಲಿ

ಬಿರುಗಾಳಿ ಎಬ್ಬಿಸಿ, ತಟ್ಟನೆ ಮರೆಯಾಗಿ ಎಷ್ಟೋ ವರ್ಷಗಳ ನಂತರ ಆಕಸ್ಮಿಕವಾಗಿ ಎದುರಾದ ತನ್ನ ಮಿತ್ರನನ್ನು ಸಂಬೋಧಿಸಿ ಶುರುವಾಗುವ ಈ ಕವನ

ಈಗ ಕೇಳದಿರು ಮಿತ್ರ
ನೀನಿರದ ದಿನ ರಾತ್ರಿ
ಹೇಗೆ ಕಳೆದವು ಎಂದು...

ನೊಂದ ಬಾಳಿನಲ್ಲಿ ಸಖ್ಯದ ಪ್ರೀತಿ, ಸೌಂದರ್ಯಗಳಿಂದ ಬಾಳನ್ನು ಪ್ರೀತಿಸುವಂತೆ ಮಾಡಿದ ಗೆಳೆಯನನ್ನು ಕೃತಜ್ಞತಾ ಭಾವನೆಯೊಂದಿಗೆ ನೆನೆಯುವ ಪರಿಯಿದು. ಗತ ವರ್ಷದ ಕೊಳೆಯನ್ನು ತೊಳೆದು ಆಶಾದಾಯಕ ದಿನಗಳನ್ನು ತರಲಿ ಎಂಬ ಶುಭ ಹಾರೈಕೆ ಇಲ್ಲಿದೆ.

ಈ ಕೊಳೆತ ಮನದ ಧುರ್ಬೀಜ ನೀನು ನೀನೇ
ಎಂಬರಿವು ಮೊಳೆತು, ಬೆಳೆದು
ಬೋಧಿವೃಕ್ಷವಾಯ್ತು
ಕತ್ತಲೆ ಕಳಚಿ ಮೇಲೆದ್ದೆ
ಕಣ್ಣಲ್ಲಿ ಬುದ್ದ ಸರೋವರವಿತ್ತು
ಮಣ್ಣಲ್ಲಿ ಬದುಕದ ಬಾಳಿತ್ತು

ಗಂಡು-ಹೆಣ್ಣು ನಡುವಿನ ಸಂಘರ್ಷಕ್ಕೊಂದು ನಿರ್ಣಾಯಕ ಅಂಶವನ್ನು ಈ ಪದ್ಯ ಇಲ್ಲಿ ತೋರುತ್ತಿದೆ. ದೀರ್ಘಕಾಲದ ತಪಸ್ಸಿನಂತಹ ಯಾತನೆಯ ಫಲ 'ಬೆಳಕಿಗೆ' ಹೊಸ 'ಅರಿವಿಗೆ' ದಾರಿ ತೆರೆದಿದೆ. ಕತ್ತಲೆ ಕಳಚಿದೆ. ಕಣ್ಣಲ್ಲಿ ಹೊಸ ಎಚ್ಚರದ 'ಜ್ಞಾನ' ಮೂಡಿದೆ. ಇಂಥ ಕತ್ತಲೆಯಲ್ಲಿ ನಿರ್ಲಕ್ಷಿಸಿದ ಬದುಕದ 'ಬಾಳಿನತ್ತ' ಲಕ್ಷ್ಯವಹಿಸುವ ಸಂಕಲ್ಪಕ್ಕೆ ಅನುವು ಮೂಡಿದೆ.

ಇಂದು ಸಂಧಿಸಿದ ಮಿತ್ರ
ಬಿಡು ಆ ದಿನ ರಾತ್ರಿಗಳ ಮೈತ್ರಿಯ
ಸತ್ತ ಕತೆ, ಹೊತ್ತಲ್ಲ ಅದಕೀಗ
ಬಾ ಆಡೋಣ ಬಾಳುವ ಮಾತುಕತೆ

(ಮಾಲತಿ ಪಟ್ಟಣಶೆಟ್ಟಿ, ಎಷ್ಟೊಂದು ನಾವೆಗಳು, ಪುಟ-೭೦)

ಬಾಳಿನ ಯಾವುದೋ ಒಂದು ಘಳಿಗೆಗೆ, ಒಂದು ಘಟ್ಟಕ್ಕೆ ಜೋತು ಬೀಳುವುದು ನಿರರ್ಥಕ, ಬದುಕು ಅದನ್ನು ಮೀರಿದ್ದು, ಸ್ತ್ರೀ-ಪುರುಷರಿಬ್ಬರು ಒಬ್ಬರನ್ನೊಬ್ಬರು ಅರಿತು ಸಮಾನತೆಯಿಂದ ಬದುಕಬೇಕೆಂಬುದನ್ನು ತಿಳಿಸುತ್ತದೆ.

ಹೇಮಾ ಪಟ್ಟಣಶೆಟ್ಟಿ ಅವರು 'ಹೊಸ ದೀಪ' ಕವನದಲ್ಲಿ ಲಿಂಗ ವ್ಯವಸ್ಥೆಯ ಪಾತ್ರವನ್ನು ಬದಲಾಯಿಸುವಲ್ಲಿ ಸ್ತ್ರೀ-ಪುರುಷರಿಬ್ಬರೂ ಕಂಕಣ ಬದ್ಧರಾಗಬೇಕು. ಅದರಲ್ಲಿಯೂ ಹೆಣ್ಣು ಹೊಸ ಎಚ್ಚರದೊಂದಿಗೆ ಈ ಹೊಸ ಜವಾಬ್ದಾರಿಯನ್ನು ನಿರ್ವಹಿಸಬೇಕಾಗುತ್ತದೆ. ಶತಮಾನಗಳಿಂದ ನಡೆದುಕೊಂಡು ಬಂದಿರುವ ಈ ವ್ಯವಸ್ಥೆಯನ್ನು ದಿನ ಬೆಳಗಾದರೆ ಬದಲಾಯಿಸಲು ಸಾಧ್ಯವಿಲ್ಲ. ಅದಕ್ಕೆ ಪುರುಷನೂ ಸಹಕರಿಸಬೇಕು ಎನ್ನುವ ವಿಚಾರಗಳನ್ನು ವ್ಯಕ್ತಪಡಿಸಿದ್ದಾರೆ.

ಸ್ವಾತಂತ್ರ್ಯದರಿವಿನಲಿ
ಉಸಿರುಂಟು ನಮಗೂನು
ಸಮತೆ ಸಮ್ಯಕ್ ಹಾದಿ
ಬೇಕೀಗ ಎಲ್ಲರಿಗೂ

ಪಿತೃಪ್ರಧಾನ ಸಮಾಜದಲ್ಲಿ ಪುರುಷನಿಗೆ ಮಾತ್ರ ಸ್ವಾತಂತ್ರ್ಯವಿರುವುದನ್ನು ಖಂಡಿಸುತ್ತ, ಸ್ತ್ರೀಯರಿಗೂ ಸಮಾನವಾದ ಸ್ಥಾನವಿದೆ ಎಂಬ ಅರಿವನ್ನು ಮೂಡಿಸುತ್ತ ಸ್ತ್ರೀ-ಪುರುಷ ಸಮಾನತೆಯ ತತ್ವವೊಂದನ್ನು ಎತ್ತಿ ಹಿಡಿದಿದ್ದಾರೆ.

ಹೆಣ್ಣು ತನ್ನ ಇಡೀ ಬದುಕನ್ನು ಕುಟುಂಬಕ್ಕಾಗಿ ಸವೆಸುವುದರಲ್ಲಿ ಸಾರ್ತಕತೆ ಪಡೆಯುವ ಕಾಲವೊಂದಿತ್ತು. ಈಗ ಅದರಲ್ಲಿ ಸ್ವ-ಸಂತೋಷ ಕಾಣದಾಗಿ, ಗೃಹದಾಸ್ಯ ಅನುಭವಿಸಿ, ಅದರಿಂದ ಹೊರಬರಲು ಹಾತೊರೆಯುವ ಇಂದಿನ ಸುಶಿಕ್ಷಿತ ಎಚ್ಚೆತ್ತ ಮಹಿಳೆ ಹೀಗೆ ಹೇಳುತ್ತಾಳೆ.

ಹೊಸ ಮೌಲ್ಯ ಕಟ್ಟೋಣ
ಮನು ಸ್ಮೃತಿಯ ಸುಟ್ಟು
ಹೊಸ ಬದುಕ ಬೆಳೆಯೋಣ
ಮತ್ಸರವ ಬಿಟ್ಟು

(ಹೇಮ ಪಟ್ಟಣಶೆಟ್ಟಿ, ಬಾಳೆ ಗರ್ಭದಲಿ, ಪುಟ-೧೩೭-೩೮)

ಪರಂಪರಾಗತವಾದ ಪ್ರಗತಿ ವಿರೋಧಿ, ಜೀವ ವಿರೋಧಿ ಮೌಲ್ಯಗಳನ್ನು ಪ್ರತಿಪಾದಿಸುತ ಬಂದಿರುವ ಮನುಸ್ಮೃತಿಯನ್ನು ನಾಶಮಾಡುವುದರ ಜೊತೆಗೆ ಇಂದು ಸ್ತ್ರೀ-ಪುರುಷರಿಬ್ಬರಿಗೂ ಸಲ್ಲುವ ಹೊಸ ಮೌಲ್ಯಗಳನ್ನು ಗುರುತಿಸಿ, ಸೃಷ್ಟಿಸಿ ಸ್ವೀಕರಿಸಬೇಕಾಗಿದೆ. ಮಹಿಳಾ ವಿಮೋಚನೆಯಲ್ಲಿಯೇ ಪುರುಷನ ಮುಕ್ತಿಯೂ ಸಾಧ್ಯವಾಗುತ್ತದೆ. ಆದ್ದರಿಂದ ಒಟ್ಟು ಮನುಷ್ಯ ಜೀವಿಯ ಬದುಕು (ಲಿಂಗ ಸಮಾನತೆಯು) ಸಹನೀಯವಾಗುತ್ತದೆ ಎಂಬ ಚಿಂತನೆಗಳನ್ನು ವ್ಯಕ್ತಪಡಿಸಿದ್ದಾರೆ.

ಪುರುಷ ನಿರ್ಮಿತ ಸಂಪ್ರದಾಯದ ಕಟ್ಟಳೆಗಳನ್ನು ಒಡೆದು ಸಮಾನತೆಯ ಬದುಕಿಗಾಗಿ ಹಂಬಲಿಸುವ ಹೆಣ್ಣೊಬ್ಬಳ ಮನಸ್ಸಿನ ನಿವೇದನೆಯನ್ನು ವಿಜಯ ಸುಬ್ಬರಾಜ್ ಅವರು 'ಸಖ ಬಾ ಸಂಚಾರಕೆ' ಕವನದಲ್ಲಿ ಸಮರ್ಥವಾಗಿ ಹಿಡಿದಿಟ್ಟಿದ್ದಾರೆ.

ನೀನೂ ನಾನು
ಇಬ್ಬರು ಸೇರಿ
ನೀಲಿಯ ಬಾನಿನ
ನಿರ್ಮಲ ನೆರಳಲಿ
ಕುಳಿತೊಂದಿಷ್ಟು
ಹಾಡೋಣ
ನೆನ್ನೆಯು ಬೇಡ
ನಾಳೆಯು ಬೇಡ
ಈ ಕ್ಷಣವಷ್ಟೇ
ನಮಗಿರಲಿ

(ವಿಜಯ ಸುಬ್ಬರಾಜ್, ಸಖ ಬಾ ಸಂಚಾರಕೆ, ಪುಟ-೩೨)

ಪ್ರೀತಿಯೆ ಪ್ರಪಂಚದ ಸೃಷ್ಟಿಗೆ ಮೂಲ ಪ್ರೇರಣೆ. ಪ್ರೀತಿಗಾಗಿದ್ದ ಹಂಬಲ ನಿವೇದನೆ ಈ ಕವಿತೆಯಲ್ಲಿದೆ. ಪ್ರೀತಿ ಇಲ್ಲದ ಬದುಕು ಅರ್ಥಹೀನವೆಂಬ ಭಾವದ ಅಭಿವ್ಯಕ್ತಿ ಲಿಂಗ ಸಮಾನತೆಯನ್ನು ಪ್ರತಿಪಾದಿಸುತ್ತದೆ.

ಪರಸ್ಪರ ಆಳವಾದ ಪ್ರೀತಿ-ಪ್ರೇಮವಿದ್ದ ಗಂಡು-ಹೆಣ್ಣು ಇಬ್ಬರಲ್ಲಿ ಒಬ್ಬರು ಒಮ್ಮೆಲೆ ಮೌನಿಯಾದಾಗ ಬದುಕಿನ ಸಾಂಗತ್ಯದಲ್ಲಿ ಸಾಮರಸ್ಯ ಇಲ್ಲದಂತಾಗುತ್ತದೆ. ಮಾತಿನ ಮೂಲಕ ಆತ್ಮ ನಿವೇದನೆ ಇಲ್ಲದೆ, ಬದುಕು ದುರ್ಬಲವಾಗುತ್ತದೆ ಇದು ಸಲ್ಲ. ಇದಕ್ಕಿಂತ ಮಿಗಿಲಾದ ಸಾಮರಸ್ಯದ ಸಮಾನತೆಯ ಬದುಕೊಂದಿದೆ ಎಂಬುದನ್ನು ಮಮತಾ ಜಿ ಸಾಗರ್ ಅವರ "ವೃದ್ಧಿ" ಕವನ ಪ್ರತಿಪಾದಿಸುತ್ತದೆ.

ಕಳಚಿಕೊಂಡ ಕ್ರಿಯೆಗಳಿಗೆ
ಮತ್ತೆ ಅಪ್ಪಿಕೊಳ್ಳೋಣ ಬಾರ
ಉಸಿರ ಬೆರೆಸಿ
ಅಂತರಾಳದ ಕತ್ತಲಲ್ಲಡಗಿದ
ಬೆಳಕ ಮಡಿಕೆಗಳ ಬಿಚ್ಚೋಣ ಬಾರ
ಹುದಿಗಿಟ್ಟ ಸಪ್ತ ಸೌಧಗಳನ್ನು ಅಗೆದಗೆದು
ಪುನಃ ಕಟ್ಟೋಣ ಬಾರ

(ಮಮತ ಜಿ. ಸಾಗರ, ಕಾಡನವಿಲಿನ ಹೆಜ್ಜೆ, ಪುಟ-೨೩)

ನೊಂದ ಬಾಳಿನಲ್ಲಿ ಸಖ್ಯದ ಪ್ರೀತಿ, ಸೌಂದರ್ಯಗಳಿಂದ ಬಾಳನ್ನು ಪ್ರೀತಿಸುವಂತೆ ಮಾಡಿದ ಗೆಳೆಯನನ್ನು ಕೃತಜ್ಞತಾ ಭಾವದೊಂದಿಗೆ ನೆನೆಯುತ್ತ ಗತ ವರ್ಷದಲ್ಲಿ ಪಡೆದ ಅನುಭವಗಳಿಂದ

ಪಾಠ ಕಲಿತು ಹೊಸ ಜಾಗೃತಿ, ಹೊಸ ಅರಿವನ್ನು ಮೂಡಿಸಿಕೊಳ್ಳುವುದರ ಮೂಲಕ ಸಮಾನತೆಯ ಸಮಾಜವನ್ನು ಕಟ್ಟುವ ಆಶಯವನ್ನು ವ್ಯಕ್ತಪಡಿಸಿದ್ದಾರೆ.

ಸವಿತಾ ನಾಗಭೂಷಣ ಅವರು 'ಸತಿ ಹೋಗುವುದಿಲ್ಲ' ಎಂಬ ಕವನದಲ್ಲಿ ಮಹಿಳೆಯರು ಮೌಢ್ಯದಿಂದ ಇಂಥ ದುಷ್ಟ ಪದ್ಧತಿಗೆ ಒಳಗಾಗದೆ ದಿಟ್ಟತನದಿಂದ ಬದುಕನ್ನು ಎದುರಿಸಬೇಕೆಂದು ಕರೆಕೊಟ್ಟಿದ್ದಾರೆ.

ನೀ ಬಿಟ್ಟು ಹೋದ ತುಂಡು ನೆಲವನ್ನು
ಉತ್ತು ಬಿತ್ತಿ ಫಸಲು ತೆಗೆಯುತ್ತೇನೆ
ಸತಿ ಹೋಗ ಬೇಡ
ನನ್ನ ಸತಿಯಾಗು ಬಾ ಗೆಳತಿ
ಅಂದ ಪ್ರೀತಿ ಶಿವನೊಡನೆ
ನನ್ನ ಮರು ಮದುವೆ ಮನೆ

(ಸವಿತಾ ನಾಗಭೂಷಣ, ದರುಷನ, ಪುಟ–೩೦)

ಗಂಡನನ್ನು ಕಳೆದುಕೊಂಡು ಸತಿ ಹೋಗುವುದನ್ನು ಹಾಗೂ ಶಾಶ್ವತ ವೈದವ್ಯ ಪಾಲನೆಯನ್ನು ಈ ಕವನದಲ್ಲಿ ನಿರಾಕರಿಸಲಾಗಿದೆ. ಜೊತೆಗೆ ವಿಧವಾ ವಿವಾಹಕ್ಕೆ ಪ್ರೋತ್ಸಾಹ ನೀಡಲಾಗಿದೆ. ಸಾಂಪ್ರದಾಯಿಕ ಮನೋಧರ್ಮದಿಂದ ಹೊರಬಂದು ಈ ರೀತಿಯ ವೈಚಾರಿಕತೆಯನ್ನು ರೂಢಿಸಿಕೊಳ್ಳಬೇಕೆಂದು ಕವಯತ್ರಿ ಕರೆ ನೀಡಿದ್ದಾಳೆ. ಹೆಣ್ಣು ಜನ್ಮಕ್ಕಾಗಿ ಕವಯತ್ರಿ ಅಥವಾ ನಿರೂಪಕಿಗೆ ಪಶ್ಚಾತಾಪವಿಲ್ಲ. ಏಕೆಂದರೆ ಸ್ತ್ರೀ ಜನ್ಮದ ಮೂಲಕವೂ ಸಾಧನೆ, ಸಾರ್ಥಕತೆಗಳನ್ನು ಸಾಧ್ಯವಾಗಿಸಿಕೊಳ್ಳುವ ಭರವಸೆಯಿದೆ.

ಹೆಣ್ಣಾಗಿ ಹುಟ್ಟಿ ಅಳಲಿಲ್ಲ ನಾನು
ಅಪ್ಪ ಅಂಗಿ ಚಡ್ಡಿ ಹಾಕಿ ಗಂಡಾಗಿ ಬೆಳೆಸಿದವನು

ಬೆಳೆದು ಬಂದ ಪರಿಸರ ಹೆಣ್ಣನ್ನು ಕೀಳರಿಮೆಯಿಂದ ಮುಕ್ತಗೊಳಿಸುವಂಥಾದ್ದು. ಒಂದು ಬಾಹ್ಯ ಪರಿಸರದಲ್ಲಿ ಪ್ರೋತ್ಸಾಹ ಮತ್ತೊಂದು ಅಂತರಂಗದ ಛಲ ಎರಡೂ ಬೆಸೆದುಕೊಂಡಾಗ ಹೆಣ್ಣು ಹೆಣ್ಣಾಗಿ ಕಣ್ಣೀರಲ್ಲಿ ಕರಗಿ ಅಸ್ತಿತ್ವವನ್ನೇ ಅಳಿಸಿಕೊಳ್ಳಬೇಕಾದ ಸಂದರ್ಭ ಬರುವುದೇ ಇಲ್ಲ. ಪಿತೃಪ್ರಧಾನ ವ್ಯವಸ್ಥೆಯ ಮನಸ್ಥಿತಿಗಳು ಬದಲಾದರೆ, ಮಹಿಳೆಯು ಸಹ ಪುರುಷನಿಗೆ ಸಮಾನವಾಗಿ ನಿಲ್ಲಬಲ್ಲಳು ಎನ್ನುವಂತಹ ವಿಚಾರವನ್ನು ಈ ಕವಿತೆಯಲ್ಲಿ ಕವಿಯತ್ರಿ ವ್ಯಕ್ತಪಡಿಸಿದ್ದಾರೆ.

ಕನ್ನಡದ ಸ್ತ್ರೀವಾದಿ ಕವಯತ್ರಿಯರಂತೆಯೇ ತೆಲುಗು ಸ್ತ್ರೀವಾದಿ ಕವಯತ್ರಿಯರು ಸಹ ಗಂಡು–ಹೆಣ್ಣಿಗೆ ಸರಿಸಮಾನವಾಗಿ ಸಲ್ಲುವಂತಹ ಲಿಂಗ ಸಮಾನತೆಯ ತತ್ವವನ್ನು ತಮ್ಮ ಕಾವ್ಯದ ಮೂಲಕ ಪ್ರತಿಪಾದಿಸುವುದನ್ನು ಇಲ್ಲಿ ಕಾಣಬಹುದು.

ಜಯಪ್ರಭ ಅವರು "ಪೈಟನಿ ತಗಲೆಯ್ಯಾಲಿ" ಕವಿತೆಯಲ್ಲಿ ಹೇಳುವಂತೆ ಪಿತೃಪ್ರಧಾನ ಭಾರತೀಯ ಸಂಸ್ಕೃತಿ ಲಿಂಗ ಅಸಮಾನತೆಯ ಪರವಾಗಿ ವಸ್ತ್ರಾಧಾರಣ ವಿಷಯದಲ್ಲಿಯು ಕೂಡ ಸ್ತ್ರೀ-ಪುರುಷರನ್ನು ಬೇರೆ ಬೇರೆ ಮಾಡಿ ತೋರಿಸಲಾಗುತ್ತಿದೆ. ಈ ಕವಿತೆಯಲ್ಲಿನ "ಪೈಟ" ಪುರುಷ ಮನೋಭಾವನೆಯ ಒಂದು ಪ್ರತೀಕ. ಪಿತೃಪ್ರಧಾನ ಸಮಾಜ ತನ್ನ ಸ್ವಾರ್ಥಕ್ಕೆ ಕಟ್ಟಿರುವ ಪಾತಿವ್ರತ್ಯ ಈ ದೇಶದಲ್ಲಿ ಸೆರಗು(ಪೈಟ) ಹೆಣ್ಣಿಗೆ ಪ್ರತಿಕ್ಷಣವೂ ಪಾತಿವ್ರತ್ಯತೆಯನ್ನು ನೆನಪಿಗೆ ತರುತ್ತದೆ. ತಾನು ಮಹಾ ಪತಿವ್ರತೆ ಎಂದು ಹಿಗ್ಗುವಂತೆ ಮಾಡುತ್ತದೆ. ತಾನೊಬ್ಬ ಮನುಷ್ಯಳೆಂಬುದನ್ನು ಮರೆಸಿ ಹೆಣ್ಣಾಗಿ ಹಿಪ್ನಟೈಜ್ ಮಾಡುತ್ತದೆ. ಸೆರಗು(ಪೈಟ) ಸ್ತ್ರೀ ಶರೀರವನ್ನು ಒದ್ದಿರುವ ಒಂದು ಸಾಧಾರಣ ವಸ್ತ್ರವಲ್ಲ. ಸಾವಿರಾರು ವರ್ಷಗಳ ಕಾಲ ಭಾರತೀಯ ಸಂಸ್ಕೃತಿಯಲ್ಲಿ ಪಿತೃಪ್ರಧಾನ ವ್ಯವಸ್ಥೆ ಹೆಣ್ಣಿಗೆ ಹೋರಿಸಿರುವ ಒಂದು ಅಪನಿಂದನೆ. ಸೆರಗು ಸ್ತ್ರೀಯರನ್ನು ಅಬಲಳನ್ನಾಗಿ ಮಾರ್ಪಡಿಸುವುದಲ್ಲದೆ, ಬದುಕಿರುವಾಗಲೆ ಶವವಾಗಿಸಿ ಹೊದಿಸಿರುವ ಬಿಳಿಯ ಬಟ್ಟೆ ಎಂದು ಕವಯತ್ರಿ ಹೇಳುತ್ತಾಳೆ. ಈ ಕಾಲದ ಮಹಿಳೆ ಒಬ್ಬ ವ್ಯಕ್ತಿಯಾಗಿ ಬದುಕಬೇಕೆಂದುಕೊಳ್ಳುತ್ತಾಳೆಯೇ ಹೊರತು ಜೀವಂತ ಶವವಾಗಿ ಬಿದ್ದಿರಬೇಕೆಂದು ಕೋರಿಕೊಳ್ಳುವುದಿಲ್ಲ. ಅದಕ್ಕೆ ಜಯಪ್ರಭ ಸ್ತ್ರೀ ಜಾತಿಯ ಪರವಾಗಿ

ನನ್ನನ್ನು ಅಬಲೆಯನ್ನಾಗಿ ಮಾಡಿದ  
ಪಿತೃಸ್ವಾಮ್ಯದ ಅದೃಶ್ಯಹಸ್ತ ದಾವಣಿ!  
ಶೋಷಣೆ ಸಂಸ್ಕೃತಿ  
ನನ್ನ ವ್ಯಕ್ತಿತ್ವವನ್ನು ಶವವಾಗಿಸಿ  
ಅದರ ಮೇಲೆ ಹೊದಿಸಿದ ಬಿಳಿಯ ಬಟ್ಟೆ ಈ ದಾವಣಿ  
ನಾನು ನಡೆಯುವ ಶವವಾಗಿ ಇರಬಾರದೆಂದರೆ  
ಮೊದಲು ಈ ದಾವಣಿಯನು ಸುಡಬೇಕು[೧]

(ಓಲ್ಗಾ, ನಿಲಿ ಮಘೂಲು, ಪುಟ-೨೧೬)

ಇಲ್ಲಿ ಪೈಟನಿ ತಗಲೆಯ್ಯಾಲಿ ಎಂದರೆ ಪುರುಷ ಮನೋಭಾವನೆಯನ್ನು ಸುಟ್ಟುಹಾಕಬೇಕೆಂದು ಭಾವಿಸಬೇಕು. ಆಗಲೆ ಸ್ತ್ರೀ ಕೂಡ ಪುರುಷನಿಗೆ ಸಮನಾಗಿ ಒಬ್ಬ ವ್ಯಕ್ತಿಯಾಗಿ ರೂಪುಗೊಳ್ಳಲು ಸಾಧ್ಯ ಎಂಬುದನ್ನು ಕವಯತ್ರಿ ಹೇಳುತ್ತಾಳೆ. ಸ್ತ್ರೀವಾದ ಪುರುಷರನ್ನು ದ್ವೇಷಿಸುವುದಿಲ್ಲ. ಮಹಿಳಾ ಆಧಿಪತ್ಯವನ್ನು ಕೂಡ ಅಪೇಕ್ಷಿಸುವುದಿಲ್ಲ. ಬದಲಿಗೆ ಪುರುಷನಿಗೆ ಸರಿ ಸಮಾನವಾದ ಸ್ಥಾನಮಾನವನ್ನು ಕೋರುತ್ತಾಳೆ.

ಪಿತೃಪ್ರಧಾನ ಸಮಾಜ ಸೃಷ್ಟಿಸಿರುವ ನೀತಿ ನಿಯಮಗಳಿಗೆ ಬದ್ಧರಾಗಿ ಸ್ತ್ರೀಯರು ತಮ್ಮ ವ್ಯಕ್ತಿತ್ವವನ್ನು, ಆಲೋಚನಾ ಶಕ್ತಿಯನ್ನು ಕಳೆದುಕೊಳ್ಳುವಂತೆ ಮಾಡುತ್ತಿರುವ ಅಡುಗೆಮನೆಯ

ಕೆಲಸವನ್ನು ಧಿಕ್ಕರಿಸಬೇಕೆಂದು ವಿಮಲ ಕರೆಯನ್ನು ಕೊಡುತ್ತಾಳೆ. ಸ್ತ್ರೀಯರು ವಿಸ್ತೃತವಾದ ಉತ್ಪಾದಕ ಶ್ರಮದಲ್ಲಿ ಪಾಲ್ಗೊಂಡಾಗಲೆ, ಮಹಿಳೆಯರಿಗೆ ನಿಜವಾದ ವಿಮುಕ್ತಿ ದೊರೆಯುತ್ತದೆಂಬ ಚಾರಿತ್ರಿಕ ಸತ್ಯವನ್ನು ವಿಮಲ ಹೀಗೆ ವ್ಯಕ್ತಪಡಿಸಿದ್ದಾಳೆ.

ಸೌಟು ತಿರುವುವಂತೆ ಮಾಡಿದ ಈ ಅಡುಗೆ ಮನೆಯನ್ನು
ಧ್ವಂಸ ಮಾಡೋಣ ಬನ್ನಿ
ಇನ್ನು ಪಾತ್ರೆಗಳ ಮೇಲೆ ಯಾರ ಹೆಸರೂ ಬೇಡ
ಬೇರೆ ಬೇರೆ ಸ್ವಂತ ಒಲೆಗಳನ್ನು
ಬುನಾದಿಯೊಂದಿಗೆ ಸಹ ಅಗೆದು ಬಿಡೋಣ ಬನ್ನಿ
ಮತ್ತೆ ನಮ್ಮ ಮಕ್ಕಳು ಈ ಒಂಟಿತನದ ಅಡುಗೆ ಮನೆಗೆ
ಹೆಜ್ಜೆಯಿಡುತ್ತಿದ್ದಾರೆ
ನಮ್ಮ ಮಕ್ಕಳಿಗಾಗಿ
ಒಂಟಿತನದ ಅಡುಗೆ ಮನೆಗಳನ್ನು ಧ್ವಂಸ ಮಾಡೋಣ ಬನ್ನಿ

(ಒಲ್ಗಾ, ನಿಲಿ ಮಘೂಲು, ಪುಟ-೧೦೫)

ಮಹಿಳೆಯ ಬೌದ್ಧಿಕ ಹಾಗೂ ಭೌತಿಕ ಚಲನೆಯನ್ನು ನಿಯಂತ್ರಿಸುವ ಅಡುಗೆಮನೆಯ ಚಾಕರಿಯನ್ನು ಧಿಕ್ಕರಿಸುತ್ತ, ಈ ಕೆಲಸವನ್ನು ಮಹಿಳೆಯರೆ ಮಾಡಬೇಕೆಂಬ ಪುರುಷ ಮನೋಭಾವನೆಯನ್ನು ಕವಿಯತ್ರಿ ವಿರೋಧಿಸಿದ್ದಾಳೆ. ಪುರುಷರು ಸಹ ಕೆಲಸದಲ್ಲಿ ಭಾಗಿಗಳಾಗಬೇಕೆಂದು ಹೇಳುತ್ತ, ಸ್ತ್ರೀ-ಪುರುಷರಿಗೆ ಸಮಾನವಾಗಿ ಸಲ್ಲುವ ನ್ಯಾಯಬದ್ಧವಾದ ಹಕ್ಕೊಂದನ್ನು ಕೇಳಲಾಗುತ್ತಿದೆ. ಕವನದ ಕೊನೆಯಲ್ಲಿ ಹೇಳುವಂತೆ ಮುಂದಿನ ಪೀಳಿಗೆಯ ಮಕ್ಕಳಿಗಾಗಿಯಾದರೂ, ಈ ಕೆಲಸದ ವಿರುದ್ಧ ಹೋರಾಡೋಣ ಬನ್ನಿ ಎನ್ನುವ ಸಾಲುಗಳು ಲಿಂಗ ಸಮಾನತೆಯನ್ನು ಕೋರುತ್ತವೆ.

ಪ್ರೀತಿಯೇ ಪ್ರಪಂಚದ ಸೃಷ್ಟಿಗೆ ಮೂಲ ಪ್ರೇರಣೆ. ಪ್ರೀತಿಗಾಗಿದ್ದ ಹಂಬಲದ ನಿವೇದನೆ ಸುಧ ಅವರ 'ಲೊಂಗು ಬಾಟು ಸಂಗಿತಾನ್ನಿ ಕಾನು' ಎಂಬ ಕವಿತೆಯಲ್ಲಿದೆ. ಪ್ರೀತಿ ಇಲ್ಲದ ಬದುಕು ಅರ್ಥಹೀನವೆಂಬ ಭಾವದ ಅಭಿವ್ಯಕ್ತಿ ಈ ಕವಿತೆಯಲ್ಲಿದೆ.

ಬಾ! ಈಗಲಾದರೂ ನ್ನನ್ನೊಂದಿಗೆ ಕೈ ಜೋಡಿಸು
ಆಗಸದಲ್ಲಿ ಅರ್ಧಭಾಗವನ್ನು ಹೋರುತ್ತಿದ್ದರು
ನನ್ನ ಶಾಂತ ಮನೋಭಾವವನ್ನು
ಕೈಲಾಗತನ ಎಂದು ಬಾವಿಸಬೇಡ
ಸರ್ವ ಜಗತ್ತನ್ನು ಎದೆಗೆ ಸೇರಿಸಿಕೊಳ್ಳುತ್ತಿರುವ

ನನ್ನ ಮಾತೃತ್ವವನ್ನು ಬಲಹೀನವಾಗಿ ಭಾವಿಸಬೇಡ
ಈಗಲಾದರೂ ಆಚರಣೆಯಲ್ಲಿ ನನ್ನ ಜೊತೆ ಕೈ ಜೋಡಿಸು
ಘೋಷಣೆಯನ್ನು ಆಚರಿಸು
ನಿನಗೆ ಹೋಗುವುದು ಅಧಿಕಾರವೇ
ಸಿಗುವುದು ಅಮೂಲ್ಯವಾದ ಸಾಹಚರ್ಯ[೩]

(ಓಲ್ಗಾ, ನಿಲಿ ಮಘೂಲು, ಪುಟ-೧೪೫)

ಪಿತೃಪ್ರಧಾನ ವ್ಯವಸ್ಥೆ ತನ್ನ ಆಧಿಪತ್ಯವನ್ನು ಪರಂಪರಾಗತವಾಗಿ ಪುರುಷರಿಗೆ ವರ್ಗಾವಣೆ ಮಾಡುತ್ತ ಬರುವುದನ್ನು ಖಂಡಿಸುತ್ತ ಲಿಂಗ ಸಮಾನತೆಯ ಸಹಚರತೆಯನ್ನು ಕವಯತ್ರಿ ಪ್ರತಿಪಾದಿಸಿದ್ದಾಳೆ. ಗತ ವರ್ಷದಲ್ಲಿ ಪಡೆದ ಅನುಭವಗಳಿಂದ ಪಾಠ ಕಲಿತು ಹೊಸ ಜಾಗೃತಿ, ಹೊಸ ಅರಿವನ್ನು ಮೂಡಿಸಿಕೊಳ್ಳುವ ಅಗತ್ಯದ ಬಗ್ಗೆ ಒತ್ತಿ ಹೇಳಲಾಗಿದೆ. ಸಮಾನತೆ ಮತ್ತು ಸ್ವಾತಂತ್ರ್ಯದ ಆದರ್ಶಗಳನ್ನು ಬದುಕಿನ ಮೌಲ್ಯಗಳನ್ನಾಗಿ ಸ್ವೀಕರಿಸಿ, ಬದುಕುವ ದಂಪತಿಗಳ ಆಲೋಚನೆ, ಆಶಯಗಳು ಒಂದೇಯಾಗಿರುತ್ತವೆ ಎಂಬುದನ್ನು ಓಲ್ಗಾ ಅವರು "ಮರೊರೆಂಡು ರಾತ್ರುಲು" ಕವಿತೆಯಲ್ಲಿ ವ್ಯಕ್ತಪಡಿಸಿದ್ದಾರೆ.

ನಾವು ಒಂದೇತರ ಆಲೋಚಿಸುತ್ತೇವೆ, ಅನುಭೂತಿಸುತ್ತೇವೆ
ಆಸೆಗಳು, ಆಶಯಗಳು, ಆವೇಶಗಳು
ನಮ್ಮಿಬ್ಬರ ಭಾಷೆ ಒಂದೆ
ನಮ್ಮ ಉಸಿರಿನ ಸಂಗೀತವು ಒಂದೆ
ನಮ್ಮ ಸಹಜೀವನ ಯಾನ ಎಷ್ಟು ಸುಗಮ
ಹೊದ್ದುಕೊಂಡ ಆದರ್ಶಗಳ ದುಪ್ಪಟಿ ಒಂದ[೪]

(ಓಲ್ಗಾ, ಓಲ್ಗಾ ಕವಿತಲು ಕೊನ್ನಿ, ಪುಟ-೭೦)

ನಿಷ್ಕಲ್ಮಷ ಪ್ರೀತಿ ಹಾಗೂ ಸೋದರತ್ವ ಭಾವದಿಂದ ಕಾಣುವುದರಿಂದ ಸ್ತ್ರೀ-ಪುರುಷರ ನಡುವಿನ ಅಂತರ ಕಡಿಮೆಯಾಗಿ ಪರಸ್ಪರ ಸಾಮರಸ್ಯದ ಬದುಕು ಉಂಟಾಗುತ್ತದೆ ಎಂಬ ಆಶಯವನ್ನು ಈ ಕವನ ವ್ಯಕ್ತಪಡಿಸಿದೆ.

ಲಿಂಗ ಅಸಮಾನತೆಗೂ ಮತ್ತು ಪುರುಷ ಪ್ರಧಾನ ವ್ಯವಸ್ಥೆಗೂ ನೇರವಾದ ಸಂಬಂಧವಿದೆ. ಪುರುಷರ ಅಧಿಕಾರವನ್ನು ಹೋಗಲಾಡಿಸದ ಹೊರತು, ಸ್ತ್ರೀ ಸಮಾನತೆ ಸಾಧ್ಯವಿಲ್ಲ ಎಂಬ ವಿಚಾರಗಳನ್ನು ಶಿಲಾ ಸುಭದ್ರದೇವಿ "ಮನುಗಡ ಸೂತ್ರಂ" ಕವಿತೆಯಲ್ಲಿ ಹೇಳಲಾಗಿದೆ.

ನನ್ನ ಮೇಲೆ ಎಷ್ಟು ಪ್ರಯೋಗಗಳು ಮಾಡಿದರು
ಕಣ್ಣೀರು ಸುರಿಸುವುದು ಬಿಟ್ಟು
ಏನೂ ಮಾಡಲಾರೆನೆಂಬ ನಿನ್ನ ಅಹಂಕಾರವಲ್ಲವೆ ಕಾರಣ

ನಿನ್ನ ಅಧಿಕಾರವನ್ನು ಉಳಿಸಿಕೊಳ್ಳುವುದಕ್ಕೆ
ನಿನ್ನ ನಿರಂಕುಶತ್ವವನ್ನು ಬೆಳೆಸಿಕೊಳ್ಳುವುದಕ್ಕೊ
.................................................................
ನನ್ನ ದೇಹವೆಲ್ಲ ಹೀಗೆ ನಜ್ಜುಗುಜ್ಜಾಗುತ್ತಿದೆ
ನೀನು ಮಾನವತ್ವ ರೂಪ ಪಡೆದ ಮನುಷ್ಯನಾಗಿ ಬದಲಾದರೆ
ನಾನು ಮಾನವಿಯಲ್ಲವೆ
ನಿನಗಾಗಿ ನನ್ನನ್ನು ಭದ್ರಪಡಿಸಿಕೊಳ್ಳುವುದು ತಿಳಿದುಕೊಳ್ಳದಷ್ಟು
ಕಾಲ ನಿನ್ನ ವಿನಾಶವನ್ನು ನೀನೆ ಕೊಂಡು ತಂದುಕೊಳ್ಳುತ್ತೀಯ[೫]

(ಶಿಲಾ ಸುಭದ್ರದೇವಿ, ಶಿಲಾ ಸುಭದ್ರದೇವಿ ಕವಿತ್ವಂ, ಪುಟ–೨೮೯)

ಸಮಾಜದಲ್ಲಿ ಗಂಡು ಹೆಣ್ಣಿನ ಬದುಕು ಸಮನಾಂತರ ನೆಲೆಯಲ್ಲಿ ಸಾಗಬೇಕೇ ಹೊರತು ಒಬ್ಬರ ಆಸರೆಯಲ್ಲಿ ಇನ್ನೊಬ್ಬರು ಇರುವುದಲ್ಲ. ಹಾಗೆ ಇರುವುದಾದರೆ ಅಸಮಾನತೆಗೆ, ಶೋಷಣೆಗೆ ಅನುವು ಮಾಡಿಕೊಡುತ್ತದೆ. ಪುರುಷ ತನ್ನ ಅಹಂಭಾವವನ್ನು ತೊರೆದು ಪ್ರೀತಿ, ಸ್ನೇಹದಿಂದ ಹೆಣ್ಣನ್ನು ಕಂಡಾಗಲೆ ಲಿಂಗ ಸಮಾನತೆ ಸಾಧ್ಯ.

ಲಿಂಗ ಸಮಾನತೆಗೆ ಲಿಂಗಾಧಾರಿತ ಸಾಮಾಜಿಕ ಪ್ರಕ್ರಿಯೆಯೆ ಕಾರಣವಾಗಿದೆ. ಪುರುಷ ಪ್ರಧಾನತೆ ಪುರುಷರಿಗೆ ಅತಿಯಾದ ಪ್ರಾಮುಖ್ಯತೆ ನೀಡಿ ಸ್ತ್ರೀಯರನ್ನು ಗೌಣವಾಗಿಸಿದೆ. ಸ್ತ್ರೀಯರಿಗೆ ಸಂಬಂಧಿಸಿದಂತೆ ತಪ್ಪು ಕಲ್ಪನೆಗಳನ್ನು ಸೃಷ್ಟಿಸಿ ಅವರ ಮೇಲೆ ನಿರ್ಬಂಧಗಳನ್ನು ಹೇರುತ್ತಾ ಲಿಂಗ ಅಸಮಾನತೆಯನ್ನು ಮುಂದುವರೆಸಿಕೊಂಡು ಹೋಗುತ್ತದೆ ಎಂಬುದನ್ನು ಹೇಳುತ್ತ ಜಯಪ್ರಭಾ ಅವರು ಆರ್ದತೆ ಮತ್ತು ಆಗ್ರಹವನ್ನು ಕೂಡ ಸಮಾನ ಪ್ರತಿಭೆಯಿಂದ ವ್ಯಕ್ತಪಡಿಸುವುದು ಇವರ ಪ್ರತ್ಯೇಕತೆ, ಸಾಂಪ್ರದಾಯದ ಮತ್ತಿನಿಂದ ಎಚ್ಚೆತ್ತುವಂತೆ ಮಾಡುವ ಚೈತನ್ಯ ಇವರ ಆಗ್ರಹದಲ್ಲಿದೆ

ನಿನ್ನ ಸ್ತ್ರೀತ್ವದೊಂದಿಗೆ ಆಡಿಕೊಂಡು
ತನ್ನ ವಿಲಾಸಗಳಿಗೆ
ನಿನ್ನನ್ನು ದಾಳವಾಗಿ ಬಳಸಿಕೊಂಡು
ಎಂಜಲು ಎಲೆಯಂತೆ
ನಿನ್ನ ಬದುಕನು ಬಲಿ ಕೊಟ್ಟರೆ
ಆ ನೀಚತನವನ್ನು ಸಹಿಸುತ್ತೀಯ ಏಕೆ?
ಸಹನೆ ಬೇಡ! ಶಾಂತಿ ಬೇಡ
ದಯಾ ದಾಕ್ಷಿಣ್ಯ ಬೇಡ

ಒಂದು ಸಾರಿ ಕಣ್ಣೆತ್ತಿ ನೋಡು
ಸಮಾನತೆಯ ಸಾಧನೆಗಾಗಿ[೬]

(ಜಯಪ್ರಭ, ಯುದ್ಧೋನ್ಮುಖಿಂಗಾ, ಪುಟ-೨೪)

ಪುರುಷನು ತನ್ನ ಸುಖ, ಸಂತೋಷ, ಏಳಿಗೆಗೆ ಸ್ತ್ರೀಯರನ್ನು ಬಳಸಿಕೊಂಡು ಅವಳನ್ನು ನಿಕೃಷ್ಟವಾಗಿ ನೋಡುವ ಪುರುಷ ಮನೋಭಾವನೆಯನ್ನು ಖಂಡಿಸುತ್ತ, ಮಹಿಳೆಗೆ ಪುರುಷರಿಂದ ದಯೆ, ದಾಕ್ಷಿಣ್ಯಗಳು ಬೇಕಾಗಿಲ್ಲ. ತಮ್ಮ ವ್ಯಕ್ತಿತ್ವವನ್ನು ತಾವು ನಿರ್ಮಿಸಿಕೊಳ್ಳಲು ಪುರುಷನಿಗೆ ಸರಿಸಮನಾದ ಸ್ಥಾನವನ್ನು ನೀಡಬೇಕೆಂಬ ಆಶಯವನ್ನು ವ್ಯಕ್ತಪಡಿಸಿದ್ದಾರೆ.

ಪಿತೃಪ್ರಧಾನ ವ್ಯವಸ್ಥೆಯು ಸಾವಿರಾರು ವರ್ಷಗಳಿಂದ ಹೆಣ್ಣಿನ ಸುತ್ತ ತ್ಯಾಗ, ಸಹನೆ, ಪಾತಿವ್ರತ್ಯದಂತಹ ಹುಸಿ ಮೌಲ್ಯಗಳ ಆವರಣವನ್ನು ನಿರ್ಮಿಸಿ, ಮಹಿಳಾ ಸಮುದಾಯವನ್ನು ನಿಯಂತ್ರಿಸುತ್ತ, ಶೋಷಣೆಗೀಡು ಮಾಡುತ್ತ ಬಂದಿದೆ. ಆದರೆ ಈಗ ಇಂದಿನ ಎಚ್ಚೆತ್ತ ಮಹಿಳೆ ಈ ಮೌಲ್ಯಗಳನ್ನು ಅತ್ಯಂತ ಪ್ರಬಲವಾಗಿ ಖಂಡಿಸುತ್ತ ಹೀಗೆ ಹೇಳುತ್ತಾಳೆ.

ಅಂದು
ಸತಿಯಾಗಿ ಚಿತೆಗೇರಿದ
ಬಲಿಪಶು
ನಾನೀಗ
ಸತಿಯಲ್ಲ
ಅಂತಃಪುರ ಕೈದಿಯಲ್ಲ
ಅಲಂಕಾರಿಕ ಪ್ರಾಯವಲ್ಲ
ಮುಗ್ಧಳಲ್ಲ; ವಿಧವೆಯಲ್ಲ
ಪತಿವ್ರತೆ ಮೊದಲೇ ಅಲ್ಲ
ಹರಿತವಾದ ನನ್ನ ಮನಸು
ಪ್ರಜ್ವಲಿಸುತ್ತಿರುವ ಸೂರ್ಯ[೭]

(ಜಯಪ್ರಭ, ಯುದ್ಧೋನ್ಮುಖಿಂಗಾ, ಪುಟ-೨೮)

ಪುರುಷ ನಿರ್ಮಿತ ಮೌಲ್ಯ, ಆದರ್ಶಗಳು ಮಹಿಳಾ ಬದುಕಿಗೆ ಹೇಗೆ ಮಾರಕವಾಗಿವೆ ಎಂಬುದನ್ನು ಅರ್ಥೈಸಿ, ಇವುಗಳನ್ನು ಪ್ರಬಲವಾಗಿ ಖಂಡಿಸುತ್ತಾಳೆ. ಇನ್ನು ಮುಂದೆ ನಾನು ವಿಧವೆಯಲ್ಲ, ಪತಿವ್ರತೆ ಮೊದಲೇ ಅಲ್ಲ ಎಂದು ಹೇಳುವ ಮೂಲಕ ಪುರುಷನಿಗೆ ಸಮಾನಳಾಗಿ ಬದುಕುವ ತನ್ನ ಅಸ್ತಿತ್ವವನ್ನು ತಾನೆ ನಿರ್ಮಿಸಿಕೊಳ್ಳುವ ಆಶಯವನ್ನು ವ್ಯಕ್ತಪಡಿಸಿದ್ದಾಳೆ. ಓಲ್ಗಾ ಅವರ "ಪಂಜಾದಿ ನಿರ್ಮಲ ವಾರಸು ರಾಲಿಸಿ" ಎಂಬ ಕವಿತೆಯು ಕೂಡ ಇದೇ ವಸ್ತುವನ್ನು ಒಳಗೊಂಡಿದೆ.

ಆದರೆ ನಾಳೆ
ನಾನು ಪತಿವ್ರತಾ ತಾಯಿಯಲ್ಲ
'ಪ್ರಬಂಧ ಕನ್ನೆ'ಯಲ್ಲ
ಅರೆಗಿಳಿಯಲ್ಲ
ಫ್ಯಾಶನ್ ಫೆರೇಡ್ ಬೊಂಬೆಯಲ್ಲ
ಹಸುಗೂಸನು ಕೊಲ್ಲುವ ಪಾಪಿಯಲ್ಲ
'ಪಂಚಾದಿ ನಿರ್ಮಲ' ವಾರುಸುದಾರಳು[೮]

(ಓಲ್ಗಾ, ಓಲ್ಗಾ ಕವಿತಲು ಕೊನ್ನಿ, ಪುಟ–೧೫)

ಸ್ತ್ರೀ ಶೋಷಣೆಗೆ ಬಹುದೊಡ್ಡ ಪರಂಪರೆಯಿದೆ. ಸಾವಿರಾರು ವರ್ಷಗಳಿಂದ ಮಹಿಳೆಯನ್ನು ಅರಮನೆಯ ವಿಲಾಸಿನಿಯಾಗಿ, ಕಾವ್ಯಕನ್ನಿಕೆಯಾಗಿ, ಪುರುಷರ ಅಷ್ಟ ಭೋಗಗಳ ವಸ್ತುವಾಗಿ ಪುರುಷ ಪ್ರಧಾನ ಸಮಾಜ ಶೋಷಣೆ ಮಾಡುತ್ತ ಸ್ತ್ರೀಗೆ ಸ್ವಾತಂತ್ರ್ಯ, ಸಮಾನತೆ, ಸ್ವಾವಲಂಬನೆಗಳನ್ನು ಕನಸುಗಳಾಗಿಸಿದೆ. ಇಂದಿನ ಎಚ್ಚೆತ್ತ ಮಹಿಳೆ ವ್ಯವಸ್ಥೆಯ ಮೌಲ್ಯಗಳನ್ನು ತಿರಸ್ಕರಿಸುತ್ತ, ಹೊಸ ಬದುಕಿನ ಕಡೆಗೆ ನಡೆಯುವ ನಿರ್ಧಾರವನ್ನು ಕೈಗೊಂಡಿದ್ದಾಳೆ.

ಲಿಂಗ ಅಸಮಾನತೆಗೆ ಲಿಂಗಾಧಾರಿತ ಸಾಮಾಜಿಕ ಪ್ರಕ್ರಿಯೆ ಕಾರಣವಾಗಿದೆ. ಪುರುಷ ಪ್ರಧಾನತೆ, ಪುರುಷರಿಗೆ ಅತಿಯಾದ ಪ್ರಾಮುಖ್ಯತೆ ನೀಡಿ, ಸ್ತ್ರೀಯರನ್ನು ಗೌಣವಾಗಿಸಿದೆ. ಸ್ತ್ರೀಯರಿಗೆ ಸಂಬಂಧಿಸಿದಂತೆ ತಪ್ಪು ಕಲ್ಪನೆಗಳನ್ನು ಸೃಷ್ಟಿಸಿ ಅವರ ಮೇಲೆ ನಿರ್ಬಂಧಗಳನ್ನು ಹೇರುತ್ತಾ, ಲಿಂಗ ಅಸಮಾನತೆಯನ್ನು ಮುಂದುವರೆಸಿಕೊಂಡು ಹೋಗುತ್ತದೆ. ಆದಕಾರಣ ಈ ಪುರುಷ ದುರಾಂಕಾರವನ್ನು ಸುಟ್ಟುಹಾಕಿ ಲಿಂಗ ಸಮನಾತೆಗೆ ನಾಂದಿಯಾಡುತ್ತೇನೆ ಎಂಬುದಾಗಿ ತುರ್ಲಪಾಟಿ ಲಕ್ಷ್ಮೀ ಅವರು ಕಣಿಕ" ಕವನದ ಮೂಲಕ ಹೇಳುತ್ತಾರೆ.

ಸಮಾಜದಲ್ಲಿನ
ಪುರುಷ ದುರಹಂಕಾರವನ್ನು
ಸುಡುವ ಗುರಿಯಿಂದ
ನಾನೊಂದು ಧಗಧಗ ಉರಿಯುವ ಜ್ವಾಲೆ
..........................................
ಆದರೂ ಗೆಳೆಯಾ!
ನಿನ್ನ ಸಹಚರ್ಯದಲ್ಲಿ, ಸಾಂತ್ವಾನದಲ್ಲಿ
ನಿನ್ನ ಅಭಿಮಾನದಲ್ಲಿ, ನಿನ್ನ ಅನುರಾಗದಲ್ಲಿ
ಬೆಳಕು ನೀಡುವ ದೀಪ್

(ತುರ್ಲಪಾಟಿ ಲಕ್ಷ್ಮಿ, ತಲೆತ್ತಿ, ಪುಟ–೩೯)

ಈಗಾಗಲೆ ಹೇಳಿರುವಂತೆ ಸ್ತ್ರೀವಾದ ಪುರುಷ ಪ್ರಧಾನ ವ್ಯವಸ್ಥೆಯ ವಿರೋಧಿಯೇ ಹೊರತು ಪುರುಷ ವಿರೋಧಿಯಲ್ಲ. ಈ ವ್ಯವಸ್ಥೆಯನ್ನು ಕೊನೆಗಾಣಿಸಲು ಸ್ತ್ರೀ-ಪುರುಷರಿಬ್ಬರು ಕಂಕಣ ಬದ್ಧರಾಗಬೇಕಾದ ಅನಿವಾರ್ಯತೆಯನ್ನು ಹೇಳುತ್ತ, ಗಂಡು-ಹೆಣ್ಣು ಪರಸ್ಪರ ಹೊಂದಾಣಿಕೆಯಿಂದ ಸಾಮರಸ್ಯದ ಬದುಕನ್ನು ಸಾಗಿಸಬೇಕು ಎಂಬ ಆಶಯವನ್ನು ಈ ಕವನದಲ್ಲಿ ವ್ಯಕ್ತಪಡಿಸಲಾಗಿದೆ.

ಲಿಂಗ ಅಸಮಾನತೆಯು ಹಾಸುಹೊಕ್ಕಾಗಿರುವ ಸಮಾಜದ ವಿವಿಧ ಸಂಸ್ಥೆಗಳ ಮೂಲ ರಚನೆ ಬದಲಾಗಬೇಕು. ಆಗ ಮಾತ್ರ ಲಿಂಗ ಸಮಾನತೆ ತರಬಹುದು ಎಂಬ ವಿಚಾರವನ್ನು ವ್ಯಕ್ತಪಡಿಸುತ್ತ ಸಹಜೀವನ ಅಂದರೆ ಹೇಗಿರುತ್ತದೆ ಎಂಬದನ್ನು ತುರ್ಲಪಾಟಿ ಲಕ್ಷ್ಮಿ "ಸಹಜೀವನಂ" ಕವಿತೆಯ ಮೂಲಕ ಅರ್ಥೈಸಿಕೊಟ್ಟಿದ್ದಾರೆ.

ಸಹಜೀವನ ಅಂದರೆ
ಗೊತ್ತೇನು ನಿನಗೆ?
ನೀನು ಮುಂದೆ, ನಾನು ಹಿಂದೆ ನಡೆಯುವುದಲ್ಲ
ನೀನು ಹೇಳಿದ್ದಕ್ಕೆಲ್ಲ ನಾನು ತಲೆದೂಗುವುದಲ್ಲ
ಜೀವನವನ್ನು ಮುಡಿಪಾಗಿಡುವುದಲ್ಲ
ಅಧಿಕಾರ ಚಲಾಯಿಸುವುದಲ್ಲವೇ ಅಲ್ಲ
ಇಬ್ಬರೂ
ಸಮಾನವಾಗಿದ್ದು, ಬೆರೆತು
ಚರ್ಚಿಸಿಕೊಳ್ಳುವುದು, ಅರ್ಥ ಮಾಡಿಕೊಳ್ಳುವುದು[೧೦]

(ತುರ್ಲಪಾಟಿ ಲಕ್ಷ್ಮಿ, ತಲೆತ್ತಿ, ಪುಟ-೪೭)

ಸಹಜೀವನವೆಂದರೆ ಪುರುಷಾಧಿಪತ್ಯವನ್ನು ಒಪ್ಪಿಕೊಂಡು ಅವರ ಅಧೀನರಾಗಿ, ಅಜ್ಞಾಧಾರಕರಾಗಿರುವುದೆಂದಲ್ಲ. ಸ್ತ್ರೀ-ಪುರುಷರಿಬ್ಬರೂ ಪರಸ್ಪರ ಹೊಂದಾಣಿಕೆಯಿಂದ ಸಾಮರಸ್ಯದ ಬದುಕನ್ನು ಕಟ್ಟಿಕೊಳ್ಳುವುದು. ಇದರಿಂದ ಲಿಂಗ ಸಮಾನತೆಯು ಸಾಧ್ಯವಾಗುತ್ತದೆ ಎಂಬ ಆಶಯವನ್ನು ಕವನ ವ್ಯಕ್ತಪಡಿಸುತ್ತದೆ.

ಲಿಂಗ ಸಮಾನತೆಯ ಸಮಾಜವನ್ನು ಕಟ್ಟುವಲ್ಲಿ ಸ್ತ್ರೀ-ಪುರುಷರಿಬ್ಬರೂ ಒಟ್ಟಾಗಿ ಸೇರಿ ದುಡಿಯಬೇಕು. ಎಲ್ಲಾ ಪ್ರಕಾರದ ಅನ್ಯಾಯಗಳನ್ನು ಹೋಗಲಾಡಿಸಲು ಇಬ್ಬರು ಸಮಾನರಾಗಿ ಹೋರಾಡಬೇಕೆಂದು ವಿಮಲ ಹೇಳುತ್ತಾರೆ.

ನಾನು
ಪದಗಳಿಂದ ಬೊಂಬೆ ಕಟ್ಟುತ್ತೇನೆ
ಅವನು

ಸ್ವರಗಳಿಂದ ಬೊಂಬೆ ಕಟ್ಟುತ್ತಾನೆ
ಅನಂತವಾದ ಪ್ರಕೃತಿಯನ್ನು
ಆನಂದಮಯ ಮಾನವರನ್ನು
ಆವಿಷ್ಕರಿಸುವುದಕ್ಕಾಗಿ
ನಿರಂತರ
ನಾವು ಪರಿಶ್ರಮಿಸುತ್ತೇವೆ[೧೧]

(ವಿಮಲ, ಪರ್‌ಸ್ಪೆಕ್ಟಿವ್ಸ್, ಪುಟ-೫೦)

ಪರಂಪರಾಗತವಾದ ಪ್ರಗತಿ ವಿರೋಧಿ, ಜೀವ ವಿರೋಧಿ ಮೌಲ್ಯಗಳನ್ನು ನಾಶ ಮಾಡುವುದರ ಜೊತೆಗೆ ಇಂದು ಸ್ತ್ರೀ-ಪುರುಷರಿಬ್ಬರೂ ಹೊಸ ಮೌಲ್ಯಗಳನ್ನು ಗುರುತಿಸಿ, ಸೃಷ್ಟಿಸಿ ಸ್ವೀಕರಿಸಬೇಕಾಗಿದೆ. ಮಹಿಳಾ ವಿಮೋಚನೆಯಲ್ಲಿಯೇ ಪುರುಷನ ಮುಕ್ತಿಯೂ ಸಾಧ್ಯವಾಗುತ್ತದೆ. ಆದ್ದರಿಂದ ಒಟ್ಟು ಮನುಷ್ಯ ಜೀವಿಯ ಬದುಕು ಸಹನೀಯವಾಗುತ್ತದೆ. ಇದಕ್ಕೆ ಗಂಡು-ಹೆಣ್ಣು ಇಬ್ಬರೂ ದುಡಿಯಬೇಕು ಎಂಬುದಾಗಿ ಕವಯತ್ರಿ ಈ ಕವನದಲ್ಲಿ ವ್ಯಕ್ತಪಡಿಸಿದ್ದಾರೆ.

ಶಿಲಾಲೊಲಿತ ಅವರು "ಬಾಟಸಾರಿ" ಕವನದಲ್ಲಿ ಸ್ತ್ರೀ-ಪುರುಷ ಸಮಾನ ಪಾತ್ರ ಮತ್ತು ಸಮಾನ ಅವಕಾಶಗಳ ಸ್ಥಾಪನೆಯನ್ನು ಬಯಸುತ್ತ, ಸಮಾನತೆಗೆ ಅಡ್ಡವಾಗಿ ನಿಂತಿರುವ ಲಿಂಗಾಧಾರಿತ ಧೋರಣೆ ಹಾಗೂ ಪಿತೃ ಪ್ರಧಾನ್ಯತೆಯ ವಿರುದ್ಧ ಬಂಡಾಯವನ್ನು ಸಾರುತ್ತಾರೆ. ಮಹಿಳೆಯರು ತಮ್ಮ ಅಸ್ತಿತ್ವವನ್ನು ತಾವೆ ಕಂಡುಕೊಳ್ಳಬೇಕು. ಶೋಷಕ ಶಕ್ತಿಗಳನ್ನು ಎದುರಿಸಲು ಖಡ್ಗವಾಗಬೇಕು ಎಂಬುದನ್ನು ಹೇಳುತ್ತಾಳೆ.

ಸ್ತ್ರೀ ಪುರುಷರ ಸಮಾನ ಸ್ಥಿತಿಗಾಗಿ
ಸಮ ಸಮಾಜ ಅಭಿವೃದ್ಧಿಗಾಗಿ
ವಿಕೃತ ಮನಸ್ಥಿತಿಗಳ ವಿಪರೀತ ಹಿಂಸೆಗಳ ದಮನಕ್ಕಾಗಿ
ತಾನೇ ಒಂದು ಖಡ್ಗವಾಗಿ, ವಿಕೃತ ನಮ್ಮ ಮುಂದಕ್ಕೆ ಬಂದಿದೆ
ಸ್ತ್ರೀಯರ ಆತ್ಮಗೌರವದ, ಆತ್ಮ ವಿಶ್ವಾಸಗಳ ವಿಜಯ ಭಾವುಟವನ್ನು
ಮಹಿಳಾ ಮಸೂದೆಯನ್ನು ಸಾಧಿಸಿಕೊಂಡ ಗೆಲುವನ್ನು
ತುಂಬು ಮನಸ್ಸಿನಿಂದ ಸ್ವಾಗತಿಸುತ್ತಿದೆ[೧೨]

(ಶಿಲಾಲೊಲಿತ, ಗಾಜುನದಿ, ಪುಟ-೮೭)

ಜಿಡ್ಡುಗಟ್ಟಿದ ಪರಂಪರೆಯನ್ನು ಅರಿವಿನ ಬಿಸಿಲಿಗೆ ಹರಡುವ ಮೂಲಕ ಹೊಸಗಾಳಿಗೆ ಮೈಯೊಡ್ಡಿ ಮುಕ್ತವಾದ ಬಯಲು ಬದುಕಿಗಾಗಿ ಹಂಬಲಿಸುವ ಹೆಣ್ಣಿನ ತುಡಿತವನ್ನು ಈ ಕವನದಲ್ಲಿ ಹಿಡಿದಿಡಲಾಗಿದೆ. ಪುರುಷ ಪ್ರಧಾನತೆಯ ಕ್ರೌರ್ಯ, ಪುರುಷರ ಸ್ವಾರ್ಥ, ಮಹಿಳೆಯರ

ದಾಸ್ಯ ಶೋಷಣೆ ಇತ್ಯಾದಿಗಳೆಲ್ಲ ಶಿಲಾಲೊಲಿತ ಅವರ ಕಾವ್ಯದಲ್ಲಿ ಪ್ರತಿಭಟನೆಗೆ ಒಳಗಾಗಿವೆ. ಮಹಿಳೆಯ ಬದುಕನ್ನು ಬದಲಾಯಿಸುವ ಆಶಯ ಇವರ ಕಾವ್ಯದಲ್ಲಿ ತೀವ್ರವಾಗಿದೆ.

ಕುಟುಂಬವು ಪುರುಷ ಪ್ರಧಾನ ವ್ಯವಸ್ಥೆಯ ಒಂದು ಅಂಗವಾಗಿ ಮಹಿಳೆಯರನ್ನು ಸಾಮಾಜಿಕವಾಗಿ, ಲೈಂಗಿಕವಾಗಿ, ಆರ್ಥಿಕವಾಗಿ ಹಾಗೂ ಮಾನಸಿಕವಾಗಿ ತುಳಿಯುತ್ತದೆ ಎಂದು ಹೇಳುವ ಮೂಲಕ ಕೊಂಡಪೋಡಿ ನಿರ್ಮಲ ಅವರು ಸ್ತ್ರೀ-ಪುರುಷರಿಗೆ ಸಮಾನವಾಗಿ ಅನ್ವಯಿಸುವ ತತ್ವವೊಂದನ್ನು ಎತ್ತಿ ಹಿಡಿಯುತ್ತಾರೆ.

ತಮ್ಮನೊಂದಿಗೆ ಸಮಾನವಾಗಿ ಪಲ್ಯ ಬಡಿಸೆಂದು ಕೇಳಿಕೊಂಡೆ
ಬೆಳೆಯುತ್ತಿದ್ದಷ್ಟೂ ಮನುಷ್ಯಳಂತೆ ನೋಡೆಂದು ಕೇಳಿಕೊಂಡೆ
ಹೊಟ್ಟೆಯಲ್ಲಿ ಕಾಯುತ್ತಿರುವ ಹೆಣ್ಣು ಮಗುವನ್ನು ಹೆರಲು ಬಿಡಿರೆಂದು ಕೇಳಿಕೊಂಡೆ
.......................................................................
ಪಳಪಳನೆ ಹೊಳೆಯುತ್ತಿರುವ ನದಿಗಳೆಲ್ಲ
ಕೈಗೆ ಸಿಗದ ಮುರಿದ ಪೆನ್ಸಿಲ್ಲು ಗೆರೆಗಳಂತೆ ಕಾಣಿಸುತ್ತಿವೆ[೧೩]
(ಕೊಂಡೆಪೊಡಿ ನಿರ್ಮಲ, ಕೊಂಡೆಪೊಡಿ ನಿರ್ಮಲ ಕವಿತ್ವಂ, ಪುಟ-೨೧೯)

ಕುಟುಂಬಗಳಲ್ಲಿ ನಡೆಯುವ ಹೆಣ್ಣಿನ ಶೋಷಣೆ, ಹಿಂಸೆ, ದಬ್ಬಾಳಿಕೆ ಹಾಗೂ ತಾರತಮ್ಯ ನೀತಿಗಳ ವಿರುದ್ಧ ಅನೇಕ ತೆಲುಗು ಸ್ತ್ರೀವಾದಿ ಲೇಖಕಿಯರು ಧ್ವನಿ ಎತ್ತಿದ್ದಾರೆ. ಅನೇಕ ವೇಳೆ ಕುಟುಂಬಗಳಲ್ಲಿನ ಹಿಂಸೆ, ಕಿರುಕುಳಗಳು ಅರಿವಿಗೆ ಬಾರದಂತಿರುತ್ತವೆ. ಹೀಗೆಯೇ ಸ್ತ್ರೀ-ಪುರುಷರಲ್ಲಿನ ತಾರತಮ್ಯವೂ ಅಶಿಕ್ಷಿತ ಸ್ತ್ರೀಯರಿಗೆ ಗೊತ್ತಾಗುವುದಿಲ್ಲ. ಉದಾಹರಣೆಗೆ ಕುಟುಂಬದಲ್ಲಿ ಗಂಡು-ಹೆಣ್ಣು ಮಕ್ಕಳಿಬ್ಬರೂ ಇದ್ದರೆ, ಗಂಡು ಮಗುವಿಗೆ ತೋರುವ ವಿಶೇಷ ಕಾಳಜಿ ಹೆಣ್ಣು ಮಗುವಿನ ವಿಚಾರದಲ್ಲಿ ತೋರುವುದಿಲ್ಲ. ಇಂತಹ ತಾರತಮ್ಯ ಭಾವ, ಪರೋಕ್ಷ ಶೋಷಣೆಗಳನ್ನು ನಾಶಮಾಡಿ ಕೌಟುಂಬಿಕ ನೆಲೆಯಲ್ಲಿ ಸ್ತ್ರೀ-ಪುರುಷ ಸಮಾನತೆಯನ್ನು ನೆಲೆಗೊಳಿಸಬೇಕೆಂಬ ಆಶಯವನ್ನು ಕೊಂಡೆಪೋಡಿ ನಿರ್ಮಲ ಅವರು "ವಿಡಿ ವಿಡಿ ಆಕಲು" ಕವಿತೆಯ ಮೂಲಕ ವ್ಯಕ್ತಪಡಿಸಿದ್ದಾರೆ.

ಹೆಣ್ಣನ್ನು ಹೆಣ್ಣಾಗಿ
ಗಂಡನ್ನು ಗಂಡಾಗಿ ಅಲ್ಲದೆ
ಮನುಷ್ಯನನ್ನು ಮನುಷ್ಯನಾಗಿ ನೋಡುವ ನೋಟಕ್ಕಾಗಿ
ಬಾಳ ಭೂಮಿಯಲ್ಲಿ ಕಳೆ ಸಸಿಗಳನ್ನು ಆಯುತ್ತಾ
ಬಾಳಿನ ಮರದಡಿ ಬೆಳಕು ಸಾಲುಗಳಿಗಾಗಿ
ಮುಂಜಾವಿನಲ್ಲಿ ಮೂಡುವ ಕಿರಣಗಳಿಗಾಗಿ ಅನ್ವೇಷಣೆ[೧೪]
(ಶಿಲಾಲೊಲಿತ, ಎಂತೆಂತ ದೂರಂ, ಪುಟ-೬೩)

ಲಿಂಗಾಧಾರಿತ ಭಿನ್ನತೆಯನ್ನೇ ಮೂಲವಾಗಿಸಿ ಹೆಣ್ಣಿಗೆ ದ್ವಿತೀಯ ದರ್ಜೆ ನೀಡಲಾಗಿದೆ. ಹುಟ್ಟಿನೊಂದಿಗೆ ಈ ಅನ್ಯಾಯಕ್ಕೆ ಈಡಾಗುವ ಹೆಣ್ಣು ಬೆಳೆಯುತ್ತ ಅಮಾನುಷ ದ್ವಂದ್ವ ನೀತಿಯಿಂದಾಗಿ ತನ್ನದಲ್ಲದ ಬದುಕನ್ನು ರೂಢಿಸಿಕೊಳ್ಳಬೇಕಾಗುತ್ತದೆ. ಸ್ತ್ರೀ ಸಂಬಂಧಿ ಮೌಲ್ಯಗಳಲ್ಲಿ ಅಸಂಬದ್ಧತೆ, ವೈರುಧ್ಯ, ಕ್ರೌರ್ಯಗಳೇ ತಾಂಡವವಾಡುತ್ತಿವೆ. ಹಾಗಾಗಿ ಹೆಣ್ಣನ್ನು ಹೆಣ್ಣಾಗಿ, ಗಂಡನ್ನು ಗಂಡಾಗಿ ನೋಡದೆ, ಇಬ್ಬರನ್ನು ಲಿಂಗ ಸಮಾನತೆಯ ನೆಲೆಯಲ್ಲಿ ಮನುಷ್ಯರನ್ನಾಗಿ ನೋಡಬೇಕೆಂಬುದನ್ನು ಶಿಲಾಲೋಲಿತ "ಮನಿಷಿ ಕೊಸಂ" ಕವಿತೆಯ ಮೂಲಕ ಅಭಿವ್ಯಕ್ತಿಸಿದ್ದಾರೆ.

ಶಿಲಾ ಸುಭದ್ರಾದೇವಿ ಅವರ ಕವನಗಳ ಮೂಲ ಆಶಯ ಲಿಂಗ ಸಮಾನತೆಯ ಮುಖವಾದದ್ದು. ಸಮಕಾಲೀನ ಪರಿಸರದೊಂದಿಗೆ ಜ್ವಲಂತವಾಗಿ ಸ್ಪಂದಿಸುವ ಅವುಗಳ ಹಿಂದೆ ಸಾಮಾಜಿಕ ಕಳಕಳಿಯಿದೆ. ರೋಗಗ್ರಸ್ಥವಾದ ಸಾಮಾಜಿಕ ವ್ಯವಸ್ಥೆಯ ವಿರುದ್ಧ ಸಿಡಿದೇಳುವ ಗಡಸುಗಾರಿಕೆ ಇದೆ. ಹೆಣ್ಣು-ಗಂಡು, ಬಡವ-ಬಲ್ಲಿದ, ಮೇಲು-ಕೀಳು ವಿಷಮತೆಯ ದ್ವಂದ್ವಗಳಲ್ಲಿ ನುಚ್ಚುನೂರಾದ ಪರಸ್ಪರ ಬಾಂಧ್ಯವ್ಯಕ್ಕೆ ಪರಿತಪಿಸುವ ಮನೋಭಾವಗಳ ಆರ್ತತೆಯಿದೆ.

ಮನುಷ್ಯ ಮನುಷ್ಯನ ಮಧ್ಯೆ
ಮಾನವತಾ ಸಂಬಂಧಗಳನ್ನು ನಂಬಿಕೊಂಡವರಲ್ಲವೇ
ಕೌಟುಂಬಿಕ ಜೀವನವನ್ನು ಪ್ರೀತಿಸುವವರಲ್ಲವೇ
ಕಣ್ಣಿಗೂ ಕಣ್ಣಿಗೂ ಮಧ್ಯ
ಸ್ವಾತಂತ್ರ್ಯಕ್ಕೂ ಬಂಧನಕ್ಕೂ ನಡುವೆ
ಕಾಣಿಸದಂತೆಯೇ ಆಚ್ಛಾದಿಸುತ್ತಿರುವ ಸಮಾಜದ ಛಾಯೆಯನ್ನು
ನಮ್ಮ ಸುತ್ತಲೂ ಆವರಿಸಿಕೊಂಡಿರುವ
ಓಜೋನ್ ಪೊರೆಯನ್ನು ಬಿಡಿಸಿಕೊಳ್ಳಬೇಕೆನ್ನುವುದಿಲ್ಲ[೧೫]

(ಶಿಲಾ ಸುಭದ್ರದೇವಿ, ಶಿಲಾ ಸುಭದ್ರದೇವಿ ಕವಿತ್ವಂ, ಪುಟ-೨೭೯)

ಸಮಾಜದ ಸಮಾನತೆಯ ತಳಹದಿಯ ಮೇಲೆ ಬದುಕಬೇಕಾದ ಇಂದಿನ ಆಧುನಿಕ ಯುಗದಲ್ಲಿಯೂ ಸ್ತ್ರೀ-ಪುರುಷರಿಬ್ಬರು ಮೇಲು ಕೀಳೆಂದು ಬದುಕುತ್ತಿರುವುದು ಒಂದು ವಿಪರ್ಯಾಸ. ಲಿಂಗ ಅಸಮಾನತೆಯಂತಿರುವ ಗ್ರಹಕ್ಕೆ ಲಿಂಗ ಸಮಾನತೆಯಂತಿರುವ ಓಜೋನ್ ಪದರವನ್ನು ಕಳಚಿಕೊಳ್ಳಲಾರೆವು ಎಂಬ ಆಶಯವನ್ನು ಈ ಕವಿತೆಯಲ್ಲಿ ವ್ಯಕ್ತಪಡಿಸಿದ್ದಾರೆ. ಕೇವಲ ಕೌಟುಂಬಿಕ ಹಿಂಸೆಯ ವಿರುದ್ಧ ಹೋರಾಡುವುದಕ್ಕಿಂತ ಸಾರ್ವಜನಿಕವಾಗಿರುವ ಪುರುಷ ಪ್ರಧಾನತೆ ಮತ್ತು ಹಿಂಸಾಚಾರಗಳ ವಿರುದ್ಧ ಸಾಮೂಹಿಕ ಹೋರಾಟ ಮಾಡುವುದಕ್ಕೆ ಒತ್ತು ನೀಡಬೇಕಾಗಿರುವ ಸಂಗತಿಗಳನ್ನು ತಮ್ಮ ಕವನಗಳ ಮುಖೇನ ಅಭಿವ್ಯಕ್ತಿಸಿ, ಲಿಂಗ ಸಮಾನತೆಯ ಸಮಾಜವನ್ನು ಕಟ್ಟುವ ಪ್ರೇರಣೆಯನ್ನು ನೀಡಲಾಗಿದೆ.

## ಅಧ್ಯಾಯ : ಆರು

# ಕನ್ನಡ-ತೆಲುಗು ಸ್ತ್ರೀವಾದಿ ಕಾವ್ಯದಲ್ಲಿ ಪುರಾಣ ಭಂಜಕತೆಯ ಸ್ವರೂಪ

## ಅಧ್ಯಾಯ : ಆರು

# ಕನ್ನಡ-ತೆಲುಗು ಸ್ತ್ರೀವಾದಿ ಕಾವ್ಯದಲ್ಲಿ ಪುರಾಣ ಭಂಜಕತೆಯ ಸ್ವರೂಪ

ಇಂಗ್ಲಿಶ್‌ನ Mythಗೆ ಸಂವಾದಿಯಾಗಿ ಪುರಾಣ ಎಂಬ ಪದವನ್ನು ಬಳಸಲಾಗುತ್ತದೆ. ಈ Myth ಎಂಬುವುದು ಗ್ರೀಕ್‌ನ Mythus ಎಂಬ ಪದದಿಂದ ಬಂದಿದ್ದು, ನೀತಿಕತೆ, ಮಾತು, ನೀತಿ ಎಂಬ ಅರ್ಥದಲ್ಲಿ ಬಳಕೆಯಾಗಿದೆ. (ಹೊನ್ನಯ್ಯ. ಸಿ. ಬಿ : ಕನ್ನಡ ಸಾಹಿತ್ಯ ಸಂಸ್ಕೃತಿ ಮೀಮಾಂಸೆ, ಪುಟ-೪೦೬)

ಪುರಾಣಗಳು ಮಾನವನ ಕಾಲ್ಪನಿಕ ಪ್ರಕ್ರಿಯೆಯ ವರ್ಣನೆಯ ಮಾದರಿಗಳಾಗಿರುತ್ತವೆ. ಈ ಪ್ರಕ್ರಿಯೆಯ ಹಿನ್ನೆಲೆಯಲ್ಲಿ ರೂಪುತಳೆದ ಇವುಗಳು ಸಾಮಾಜಿಕ ಹಾಗೂ ನೈಸರ್ಗಿಕ ವಾತಾವರಣದಲ್ಲಿ ಸಂಘರ್ಷವನ್ನು ಹತ್ತಿಕ್ಕುವ ಮೂಲಕ ಏಕಸೂತ್ರತೆಯನ್ನು ಪಾಲಿಸಲು ನೆರವಾಗುತ್ತವೆ. ಸಂಘರ್ಷಗಳ ಸ್ವರೂಪ ಬದಲಾದಂತೆ ಅದಕ್ಕನುಗುಣವಾಗಿ ಪುರಾಣಗಳು ಬದಲಾಗಬೇಕಾಗುತ್ತದೆ. ಆದ್ದರಿಂದ ಪ್ರತಿಯೊಂದು ಪುರಾಣವು ನಿರ್ದಿಷ್ಟ ಸಾಮಾಜಿಕ ಹಾಗೂ ಸಾಂಸ್ಕೃತಿಕ ಸಂದರ್ಭದಲ್ಲಿ ರೂಪುಗೊಂಡಿರುತ್ತದೆ. ಯಾವಾಗ ಸಂದರ್ಭಗಳು ಬದಲಾಗುತ್ತವೆಯೋ ಆಗ ನವ ಪುರಾಣಗಳು ಹುಟ್ಟಿಕೊಳ್ಳುತ್ತವೆ. ಹಳೆಯ ಪುರಾಣಗಳು ಪುನರ್ವ್ಯಾಖ್ಯಾನಗೊಂಡು ರೂಪಾಂತರಗೊಳ್ಳುತ್ತವೆ.

ಮನುಷ್ಯನ ಬದುಕು ಬದಲಾದಂತೆ ಕಾಲಕ್ಕನುಗುಣವಾಗಿ ಮೌಲ್ಯಗಳು ಬದಲಾಗುತ್ತವೆ. ಒಂದು ಕಾಲದ ಮೌಲ್ಯ ಇನ್ನೊಂದು ಕಾಲಕ್ಕೆ ಅನ್ವಯವಾಗದಿರಬಹುದು. ಗ್ರೀಕ್ ತತ್ವಜ್ಞಾನಿಗಳು ಪರಂಪರಾಗತ ಗ್ರೀಕ್ ಪುರಾಣಗಳಲ್ಲಿನ ಕ್ರೌರ್ಯ, ಒರಟುತನ ಹಾಗೂ ಬಾಲಿಷತನವನ್ನು ನಿರಾಕರಿಸಿದರು. ಹಾಗೆಯೇ ಈಜಿಪ್ಟ್ ಮತ್ತು ಬ್ಯಾಬಿಲೋನಿಯಾದಲ್ಲಿ ಪುರೋಹಿತ ವರ್ಗದವರು ಪರಸ್ಪರ ವೈರುಧ್ಯದ ನೆಲೆಯ ಪುರಾಣ ಕತೆಗಳನ್ನು ಜೋಡಿಸಿ ಸಮನ್ವಯ ಸಾಧಿಸಲೆತ್ನಿಸಿದರು. ಇದೇ ನೆಲೆಯಲ್ಲಿ ಕನ್ನಡ-ತೆಲುಗು ಭಾಷೆಯ ಸಾಹಿತಿಗಳು ತಮ್ಮ ಸಾಹಿತ್ಯದಲ್ಲಿ ಆಯಾ ಕಾಲದ ಮೌಲ್ಯಗಳಿಗನುಗುಣವಾಗಿ ಪುರಾಣ ಭಂಜನೆ ಹಾಗೂ ನವ ಪುರಾಣ ನಿರ್ಮಿಸಿದ್ದಾರೆ.

ಈಗಾಗಲೆ ಒಪ್ಪಿತವಾದ ಪೌರಾಣಿಕ ಚೌಕಟ್ಟನ್ನು ಮುರಿದು ಸಾಮಾನ್ಯ ಮಾನವರ ಸಾಧ್ಯತೆ ಹಾಗೂ ಸಂಭಾವ್ಯತೆಯ ನೆಲೆಯಲ್ಲಿ ಹಾಗೂ ತಾತ್ಕಾಲೀನ ಸಮಾಜದ ಆಶಯಗಳಿಗನುಗುಣವಾಗಿ ಮರು ಕಟ್ಟುವುದನ್ನು ಸ್ಥೂಲವಾಗಿ ಪುರಾಣ ಭಂಜನೆ ಎಂದು ಕರೆಯಬಹುದು. ಪುರಾಣ ಭಂಜನೆ ಎಂಬ ಪರಿಕಲ್ಪನೆಯೇ ಅಸಂಬದ್ಧವೆನಿಸುತ್ತದೆ. ಏಕೆಂದರೆ ಇಂದು ನಾವು ನೋಡುವ ಪುರಾಣಗಳು ಏಕವ್ಯಕ್ತಿ ಕೃತವಲ್ಲ. ಒಂದು ನಿರ್ದಿಷ್ಟ ಕಾಲಕ್ಕೂ ಅದರ ರಚನೆ ನಿಂತಿಲ್ಲ. ಮೂಲ

ಪುರಾಣದ ಕಲ್ಪನೆಗಳು ನಮಗೆ ತಿಳಿದಿಲ್ಲ. ವ್ಯಾಸ-ವಾಲ್ಮೀಕಿಯರ ರಚನೆಗಳೇ ಪುರಾಣದ ಅಂತಿಮ ಹಾಗೂ ಬಹು ಮುಖ್ಯ ಕೃತಿಗಳು ಎಂದು ಭಾವಿಸಿದಲ್ಲಿ ಮಾತ್ರ ಪುರಾಣ ಭಂಜನೆಯೆಂಬ ಶಬ್ದ ಪ್ರಸ್ತುತವಾಗುತ್ತದೆ.

ಮನುಷ್ಯ ಸಾಧ್ಯತೆ ಹಾಗೂ ಸಂಭಾವ್ಯತೆಯ ನೆಲೆಯಲ್ಲಿ ಕನ್ನಡ ಹಾಗೂ ತೆಲುಗು ಸಾಹಿತ್ಯಗಳೆರಡು ಆಧುನಿಕ ಪೂರ್ವದಲ್ಲಿಯೆ ಪೌರಾಣಿಕ ಪ್ರಸಂಗಗಳ ಹಾಗೂ ಪಾತ್ರಗಳ ಮರುಸೃಷ್ಟಿಯ ಕೆಲಸವನ್ನು ಮಾಡಿವೆ. ಆದರೆ ಇಪ್ಪತ್ತನೆಯ ಶತಮಾನದಲ್ಲಿ ಅದರಲ್ಲೂ ಎಪ್ಪತ್ತೈದರ ದಶಕದ ನಂತರ ದಿನಗಳಲ್ಲಿ ಸ್ತ್ರೀವಾದಿಗಳು ತಮ್ಮ ಸಾಹಿತ್ಯದಲ್ಲಿ ಅತ್ಯಂತ ಹೆಚ್ಚಿನದಾಗಿ ಈ ಕೆಲಸವನ್ನು ಮಾಡಿದ್ದಾರೆ ಎಂದರೆ ತಪ್ಪಾಗಲಾರದು. ಕಾರಣ ಈ ಶತಮಾನದ ವೈಜ್ಞಾನಿಕ ಹಾಗೂ ವೈಚಾರಿಕತೆಯ ಪ್ರಗತಿ, ಬದಲಾದ ಜೀವನಕ್ರಮ, ಮತ-ಧರ್ಮದ ಆಚರಣೆಯ ಸರಳತೆ, ಪಾಶ್ಚಾತ್ಯ ಚಿಂತನೆಗಳ ಪ್ರಭಾವ ಹಾಗೂ ಪ್ರೇರಣೆ...ಇನ್ನು ಮುಂತಾದ ಕಾರಣಗಳಿಂದ ಪುರಾಣ ಭಂಜನ ಪ್ರಕ್ರಿಯೆ ನಡೆದಿದೆ.

**ಪುರಾಣ ಸ್ತ್ರೀವಾದ :** ಪುರಾಣಗಳಲ್ಲಿ ಕಾಣುವ ಹೆಣ್ಣು ಸುತ್ತಲ ಬದುಕಿನಲ್ಲಿ ಕಾಣುವ ಹೆಣ್ಣೇ ಆಗಿರುತ್ತಾಳೆ. ಪ್ರತಿಯೊಂದು ಪುರುಷ ಪ್ರಧಾನ ಸಮಾಜವು ತನ್ನ ಹಿತಾಸಕ್ತಿಯ ರಕ್ಷಣೆಗಾಗಿ ತಾನೇ ರೂಪಿಸಿದ ಸ್ತ್ರೀ ಪ್ರತಿಮೆಗಳ ಮೂಲಕ ನಡವಳಿಕೆಯ ಮಾದರಿಗಳನ್ನು ಮುಂದಿಡುತ್ತದೆ. ಈ ರೀತಿ ನಿಗದಿಪಡಿಸಿದ ಸ್ತ್ರೀ ಪ್ರತಿಮೆಗಳ ಮುಂದುವರಿಕೆಯ ವಾಹಕವಾಗಿ, ಸಮರ್ಥ ಮಾಧ್ಯಮವಾಗಿಯೂ ಪುರಾಣಗಳು ಬಳಕೆಯಾಗುತ್ತಿವೆ.

'ಸ್ತ್ರೀವಾದವೆಂದರೆ ಮಹಿಳಾ ಬದುಕಿನ ಪರವಾಗಿ ನಿಂತು ಮಂಡಿಸುವ ವಾದ' ಎಂದಾದಲ್ಲಿ ಪುರಾಣ ಸ್ತ್ರೀವಾದವು ಪುರಾಣದ ಸ್ತ್ರೀಯರ ಮೂಲಕ ವರ್ತಮಾನದ ಸ್ತ್ರೀ ಬದುಕಿಗೆ ಪೂರಕವಾದ, ಮಾರಕವಾದ ಚಿಂತನೆಗಳನ್ನು ಗ್ರಹಿಸುತ್ತದೆ. ಪುರಾಣದ ಸ್ತ್ರೀ ಪಾತ್ರಗಳನ್ನು ಸ್ತ್ರೀನಿಷ್ಠ ನೆಲೆಯಲ್ಲಿ ನಿರ್ವಚಿಸಿದ ಕ್ರಮವನ್ನು ಪುರಾಣ ಸ್ತ್ರೀವಾದ ಎಂದು ಕರೆಯಬಹುದು. (ಲತಾ ಅಭಯ್ : ಕಲ್ಲು ಬೆಂಕಿಗಳಿಂದ ನಲಿವು ಬೆಳಕಿನಡೆಗೆ, ಪುಟ-೪೧)

ಪುರುಷ ಪ್ರಧಾನ ಸಮಾಜ ಸ್ತ್ರೀಯರಿಗೆ ಹೇರಲ್ಪಟ್ಟ ನೇತ್ಯಾತ್ಮಕ ಹಾಗೂ ಗುಣಾತ್ಮಕ ಗ್ರಹಿಕೆಗಳು ಮಹಿಳಾ ಕಥನ ಸಾಹಿತ್ಯ ಕೃತಿಗಳ ಪೌರಾಣಿಕ ಸ್ತ್ರೀ ಪಾತ್ರಗಳ ಮೂಲಕ ನಿರ್ವಚಿತವಾದ ಬಗೆಯನ್ನು ವೈಚಾರಿಕವಾಗಿ ವಿಶ್ಲೇಷಿಸುವ ಪುನರ್ ವ್ಯಾಖ್ಯಾನಿಸುವ ಚಿಂತನಾ ಕ್ರಮವೇ ಪುರಾಣ ಸ್ತ್ರೀವಾದವಾಗಿದೆ. ಪುರಾಣ ಸ್ತ್ರೀವಾದವೆಂದರೆ ಕೇವಲ ಮಹಿಳೆಯರ ಸಾಹಿತ್ಯದ ಪೌರಾಣಿಕ ಸ್ತ್ರೀ ಪಾತ್ರಗಳ ವಿಶ್ಲೇಷಣೆಯಷ್ಟೇ ಅಲ್ಲ ಬದಲಿಗೆ ಈ ಪಾತ್ರಗಳನ್ನು ಸ್ತ್ರೀವಾದಿ ದೃಷ್ಟಿಕೋನದ ವಿಶ್ಲೇಷಣೆಯ ಓದನ್ನು ಒಳಗೊಂಡಂತೆ ವಿಶಾಲಾರ್ಥದಲ್ಲಿ ಬಳಸಲ್ಪಡುತ್ತದೆ. ಮನಶಾಸ್ತ್ರಜ್ಞರಾದ ಸಿಗ್ಮಂಡ್ ಫ್ರಾಯ್ಡ್ ಮತ್ತು ಕಾರ್ಲ್ ಜಿ. ಯೂಂಗ್‌ರು ಪುರಾಣಕ್ಕೆ ನೀಡಿದ ವ್ಯಾಖ್ಯಾನವನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ಒಪ್ಪಲಸಾಧ್ಯ. ಏಕೆಂದರೆ ಜಗತ್ತಿನ ಪುರಾಣಗಳನ್ನೇ ಅವಲೋಕಿಸಿದಾಗ ಯಾವುದೇ ಪುರಾಣಗಳು ಸಮಷ್ಟಿಯ ಪ್ರತಿನಿಧೀಕರಣವನ್ನು ಸಮಾನವಾಗಿ ಹೊಂದಿಲ್ಲ. ಸ್ತ್ರೀಯರ

ಆಸೆ, ಆಕಾಂಕ್ಷೆಗಳು, ಮನದಾಳದ ಬಯಕೆಗಳು ಮೂಲವೆಂದು ನಾವು ನಂಬಲಾದ ಪುರಾಣಗಳಲ್ಲಿ ದಾಖಲಾಗಿಲ್ಲ. ಸಮಷ್ಟಿ ಪ್ರಜ್ಞೆಯು ಅಭಿವ್ಯಕ್ತಿಯ ಸಂದರ್ಭದಲ್ಲಿ ಸ್ವಚ್ಚಂದವಾಗಿ ಪ್ರವಹಿಸಿದ್ದರೂ ದಾಖಲಾತಿ ಸಮಯದಲ್ಲಿ ನಿರ್ಲಕ್ಷ್ಯಕ್ಕೊಳಗಾಗಿವೆ. ಪುರಾಣಗಳನ್ನು ಸುಪ್ತಮನದ ಅಪ್ರಜ್ಞಾಪೂರ್ವಕ ರಚನೆ ಎಂಬ ಹೇಳಿಕೆಯನ್ನು ಒಪ್ಪಲಸಾಧ್ಯ. ಏಕೆಂದರೆ ಸುಪ್ತ ಪ್ರಜ್ಞೆಯ ಅಪ್ರಜ್ಞಾಪೂರ್ವಕವಾದ ರಚನೆಗಳು ಇವುಗಳಾದಲ್ಲಿ ಪುರುಷನ ಶ್ರೇಷ್ಠತೆಯನ್ನೇ ಕಾಪಾಡುವ ಅಂಶಗಳು ಬಿಡುಗಡೆಗೊಳ್ಳಲಸಾಧ್ಯ.

ಪಿತೃಪ್ರಧಾನ ವ್ಯವಸ್ಥೆಯ ಪ್ರಧಾನ ಧಾರೆಯು ಕಟ್ಟಿ ರೂಪಿಸಿದ ಪುರಾಣಗಳು, ಅಲ್ಲಿಯ ಸ್ತ್ರೀಪಾತ್ರಗಳು ಅಸಮಾನತೆಯ ನೆಲೆಯಲ್ಲಿಯೇ ನಿರ್ವಚಿತವಾಗಿವೆ. ಹಾಗೆಯೇ ಸ್ತ್ರೀಯರ ಬದುಕಿನ ನಿಯಂತ್ರಕ ಶಕ್ತಿಗಳಾಗಿವೆ. ಆ ಮೂಲಕ ಸಾಮಾಜಿಕ ನಿಯಂತ್ರಣದ ಸಾಧನವಾಗಿವೆ. ಪುರುಷ ನಿರ್ಮಿತ ಈ ಪುರಾಣಗಳಲ್ಲಿ ಪುರುಷನ ಭೋಗದ ವಸ್ತುವಾಗಿ, ಅಲಂಕಾರಿಕ ವಸ್ತುವಾಗಿ, ದಾಸಿ, ಸೇವಕಳಾಗಿ ಮಹಿಳೆ ನಿರ್ವಚಿತಳಾಗಿದ್ದಾಳೆ. ಪಿತೃಸತ್ತೆಯ ಶ್ರೇಷ್ಠತೆ ಹಾಗೂ ನಿರಂತರತೆಯನ್ನು ಸಂರಕ್ಷಿಸುವ ಕಾವಲುಗಾರಳಾಗಿ ಈ ಮೌಲ್ಯಗಳನ್ನು ಮುಂದಿನ ಪೀಳಿಗೆಗೆ ಸಾಗಿಸುವ ವಾಹಕವಾಗಿ ದುಡಿಯುತ್ತಿದ್ದಾಳೆಯೇ ಹೊರತು, ಪುರಾಣಗಳಲ್ಲಿ ಬರುವ ಇವರಾರಿಗೂ ಸ್ವತಂತ್ರ ಅಸ್ತಿತ್ವವಿಲ್ಲ. (ಗೋಪಾಲ ಕೃಷ್ಣಯ್ಯ. ಕೆ. ಎಲ್ : ಪುರಾಣ, ಪುಟ, ೮೭) ಪುರುಷ ದೃಷ್ಟಿಕೋನದಲ್ಲಿ ಪ್ರಶಂಸೆ, ಹೆಮ್ಮೆ, ಅಭಿಮಾನ ಹಾಗೂ ಅನುಕರಣೆಗೆ ಅರ್ಹವಾದ ಆದರ್ಶ ಪಾತ್ರಗಳು ಸ್ತ್ರೀವಾದಿ ದೃಷ್ಟಿಕೋನದಲ್ಲಿ ಸಹಾನುಭೂತಿ, ಅನುಕಂಪಗಳನ್ನು ಗಳಿಸುತ್ತವೆ. ಹಾಗೆಯೇ ಸಹಾನುಭೂತಿಗೆ ಅರ್ಹವಾಗಿದ್ದ ಪಾತ್ರಗಳು ಪ್ರಶಂಸೆಗೆ ಅರ್ಹವಾಗಿವೆ. ಉದಾಹರಣೆಗೆ ಸೀತೆ, ಸಾವಿತ್ರಿ, ಮಂಡೋದರಿ ಮುಂತಾದವರು ಪಾತಿವ್ರತ್ಯದ ಪ್ರತೀಕಗಳಾಗಿ ಪುರುಷ ದೃಷ್ಟಿಕೋನದಲ್ಲಿ ಚಿತ್ರಿಸಲ್ಪಟ್ಟು ಪ್ರಶಂಸೆ ಪಡೆದಿದ್ದಾರೆ. ಆದರೆ ಕನ್ನಡ-ತೆಲುಗಿನ ಸ್ತ್ರೀವಾದಿ ಲೇಖಕಿಯರು ಈ ಪಾತ್ರಗಳು ಪಿತೃಪ್ರಧಾನ ವ್ಯವಸ್ಥೆಯಲ್ಲಿ ಮೌನವಾಗಿ ಅನುಭವಿಸಿದ ನೋವು, ವೇದನೆ ಹಾಗೂ ಶೋಷಣೆಗಳನ್ನು ಎತ್ತಿ ತೋರಿಸಿ ಅವರ ಬಗೆಗೆ ಸಹಾನುಭೂತಿ ವ್ಯಕ್ತಪಡಿಸಿದ್ದಾರೆ. ಹಾಗೆಯೇ ಅಹಲ್ಯೆ, ಅಮೃತಮತಿ, ಕುಂತಿ ಮುಂತಾದ ಪಾತ್ರಗಳನ್ನು ಪುರುಷ ದೃಷ್ಟಿಕೋನದಲ್ಲಿ ವಿಶ್ಲೇಷಿಸಿ ಪತಿತೆಯರೆಂದು ತುಚ್ಚೀಕರಿಸಿ ಆನಂತರ ಸಹಾನುಭೂತಿ ವ್ಯಕ್ತಪಡಿಸಲಾಗಿದೆ. ಆದರೆ ಇವರು ಹೊಸ ದೃಷ್ಟಿಕೋನದಿಂದ ಪರಿಶೀಲಿಸಿ ಈ ಪಾತ್ರಗಳು ಹಾಗೆ ಪತೀತರಾಗಲು ಇದ್ದರಬಹುದಾದ ಕಾರಣಗಳನ್ನು ಶೋಧಿಸಿದ್ದಾರೆ. ಈ ಶೋಧನೆಯಿಂದ ಆ ಪಾತ್ರಗಳ ಬಗೆಗೆ ಅಭಿಮಾನ ಮೂಡಿರುವುದುಂಟು. ಅಂದರೆ ಪುರುಷ ಪ್ರಧಾನ ವ್ಯವಸ್ಥೆಯ ಪಾರಂಪರಿಕ ಮೌಲ್ಯಗಳನ್ನು ಉಲ್ಲಂಘಿಸಿದ್ದು, ಸ್ತ್ರೀವಾದಿ ದೃಷ್ಟಿಕೋನದಲ್ಲಿ ಅಪರಾಧವಾಗಿಲ್ಲ. ಆದ್ದರಿಂದ ಇಂಥ ಪಾತ್ರಗಳ ಬಗೆಗೆ ಅಭಿಮಾನ ಪೂರ್ವಕವಾದ ಕವನಗಳು ಸೃಷ್ಟಿಯಾಗಿವೆ. ಅಂಥ ರಚನೆಗಳಲ್ಲಿ ಹಳೆಯ ಕಲ್ಪನೆಗಳನ್ನೆಲ್ಲ ಭಂಜಿಸಲಾಗಿದೆ.

ಕನ್ನಡ-ತೆಲುಗಿನ ಸ್ತ್ರೀವಾದಿ ಲೇಖಕಿಯರು ಯಾವ ನೆಲೆಯಲ್ಲಿ ನಿಂತು ಪುರಾಣ ಭಂಜನೆ ಮಾಡುತ್ತಾರೆ, ಇವುಗಳ ಸಾಮ್ಯ-ವೈಷಮ್ಯಗಳೇನು, ಇವುಗಳಿಗೆ ಕಾರಣವಾದ ಸಾಂಸ್ಕೃತಿಕ ಅಂಶಗಳು ಯಾವುವು ಎನ್ನುವಂತಹ ಕುತೂಹಲ ಈ ಅಧ್ಯಯನದ ಮುಂದಿದೆ.

ವಾಲ್ಮೀಕಿಯ ಸೃಷ್ಟಿಯಲ್ಲಿ ಸೀತೆ ಮುಗ್ಧ ಹೆಣ್ಣುಮಗಳು. ಅವಳನ್ನು ರಾಮ, ರಾವಣರು ಕಾಡಿದ ಬಗೆ ಪ್ರಭುತ್ವದ ದೌರ್ಜನ್ಯದ ಸಂಕೇತ. ಅಗ್ನಿ ಪರೀಕ್ಷೆಯ ಬಳಿಕವೂ ಸೀತೆ ರಾಮನಿಂದ ಪರಿತ್ಯಕ್ತೆಯಾಗಿ ಅನುಭವಿಸಬೇಕಾದ ಯಾತನೆ ಮತ್ತು ಅವಳು ದೃಢವಾಗಿ ಪರಿಪಕ್ವತೆ ಪಡೆದ ಬಗೆಯನ್ನು ಸುಕನ್ಯಾ ಮಾರುತಿ ಅವರು,

ವಾಲ್ಮೀಕಿ ನನ್ನ
ಗರ್ಭೀಕರಿಸಿಕೊಳ್ಳದಿದ್ದರೆ
ನಾನು ಏನಾಗಬಹುದಿತ್ತು?
ಅನೇಕ ಸಂವತ್ಸರಗಳು
ಕುದಿಕುದಿದು ಹದಗೊಂಡಿದೆ ಪಾಕ
ಹೊಯ್ಯಬೇಕಾಗಿದೆ ಎರಕ
ಯಾರ ಸುತೆಯಾಗಿ ಸತಿಯಾಗಿ
ಮಾತೆಯಾಗಿ ಅಲ್ಲ, ಬರಿ ಸೀತೆಯಾಗಿ

(ಸುಕನ್ಯಾ ಮಾರುತಿ, ನಾನೆಂಬ ಮಾಯೆ, ಪು–೨೨೨)

ಎನ್ನುತ್ತಾರೆ. ಸಾವಿರಾರು ವರ್ಷಗಳಿಂದ ಹೆಣ್ಣೊಬ್ಬಳ ಅಸ್ತಿತ್ವ ಆಕೆ ಕೌಟುಂಬಿಕವಾಗಿ ಹೊಂದಿರುವ ಸಂಬಂಧಗಳಿಂದ ನಿರ್ಣಯವಾಗುತ್ತಿದೆ. ಪುರಾಣಗಳಲ್ಲಿ ಹೆಣ್ಣಿನ ಪಾತ್ರದ ಅಸ್ತಿತ್ವವೆನ್ನುವುದು ಹೀಗೆಯೇ ಇದೆ. ಇಲ್ಲಿ ಪಾತಿವ್ರತ್ಯವೆನ್ನುವುದು ಪುರುಷನಿಂದ ನಿರ್ವಚನಗೊಂಡ ಮೌಲ್ಯಗಳ ತಳಹದಿಯಲ್ಲಿ ಕಟ್ಟಲ್ಪಡುತ್ತದೆ. ಅದನ್ನು ಒಡೆದು ನಿಂತವರು ಮಂಥರೆ, ಶೂರ್ಪನಖಿಯಾಗುತ್ತಾರೆ. ಸೀತೆಯಂತಹ ಪಾತ್ರಗಳ ರಚನೆಯೇ ಪುರುಷ ನಿರ್ಮಿತ ಮೌಲ್ಯಗಳ ಪ್ರತಿಪಾದನೆ. ಇದನ್ನು ಒಡೆದು ತನ್ನ ಅಸ್ಮಿತೆಯನ್ನು ಪ್ರತಿಪಾದಿಸುವ ನೆಲೆಯಲ್ಲಿ ಸೀತೆ, ಸೀತೆಯಾಗಿ ಎರಕವಾಗಬೇಕು ಎಂಬ ಆಶಯವಿದೆ.

ಐದು ಜನ ಗಂಡಂದಿರಿದ್ದರೂ ಆಂತರ್ಯದಲ್ಲಿ ಒಂಟಿಯಾಗಿದ್ದ ದ್ರೌಪದಿಯೂ ಲೇಖಕಿಯರಿಗೆ ಬಹಳ ಪ್ರಿಯವಾದವಳು. 'ಕಿಚ್ಚಿನಿಂದೆದ್ದು ಬಂದವಳು ನಾನು, ಏನು ಸುಡಬಹುದು ನನ್ನ' ಎಂದು ಪ್ರಶ್ನಿಸುತ್ತಲೆ ಹೊರಟ ಸುಕನ್ಯಾ ಮಾರುತಿ ಅವರು ಹೆಣ್ಣೊಬ್ಬಳ ತಪ್ತ ಮನಸ್ಸಿನ ಉರಿಯನ್ನು ದ್ರೌಪದಿಯ ಮೂಲಕ ಹೊರಗೆಡುವುತ್ತಾರೆ.

ಅಡಿಯಲ್ಲಿ ಅಡಿಯಿಟ್ಟು ನೆಡೆದವಳು
ಹೆಗಲಿಗೆ ಹೆಗಲುಕೊಟ್ಟು ದುಡಿದವಳು
ಕೀಚಕತ್ವದ ತಿರುಗಣಿ ಮಡುವಿನ
ನೀರಾದವಳು

ದುಶ್ಯಾಸನ ಉಲ್ಲಂಘಿಸಿದ ನನ್ನನ್ನೇ ಸುಡಬಯಸುವ
ಹಸಿಹಸಿ ಮನಸ್ಸುಗಳ
ಅಪ್ರಬುದ್ಧ ಯತ್ನಗಳು
ಸೋಜಿಗ ಹುಟ್ಟಿಸುತ್ತವೆ. ಧಗಧಗಿಸುವ ಬದುಕಿನ
ನಿಗಿನಿಗಿ ಕೆಂಡ ನುಂಗಿದವಳು
ಮತ್ತೇನು ಸುಡಬಹುದು ನನ್ನ

(ಸುಕನ್ಯಾ ಮಾರುತಿ, ನಾನೆಂಬ ಮಾಯೆ, ಪು-೨೨೪)

ದ್ರೌಪದಿ ಸೀತೆಗಿಂತ ಭಿನ್ನವಾದ ಪಾತ್ರವಾಗಿದೆ. ಐವರು ಗಂಡಂದಿರಿದ್ದಾಗಲೂ ಅವಳಲ್ಲಿ ಅನಾಥ ಭಾವವೇ ತುಂಬಿಕೊಂಡಿರುತ್ತದೆ. ಸೀತೆಯ ಒಬ್ಬ ಗಂಡ ಮತ್ತು ದ್ರೌಪದಿಯ ಐವರು ಗಂಡಂದಿರು ಇವರ ಮಧ್ಯೆ ಹೆಣ್ಣು ಅನುಸರಿಸಬೇಕಾದ ಆದರ್ಶಗಳಲ್ಲಿ ವ್ಯತ್ಯಾಸವೇನೂ ಇಲ್ಲ. ತನ್ನ ಐವರು ಗಂಡಂದಿರೂ ನಿಷ್ಪ್ರಯೋಜಕರು ಎನ್ನುವುದು ದ್ರೌಪದಿಯಲ್ಲಿರುವ ಸಿಟ್ಟಿಗೆ ಕಾರಣವಾಗುತ್ತದೆ. ಗಂಡಿನ ಸಾಮಿಪ್ಯಕ್ಕೊಳಪಟ್ಟು, ಹೆಜ್ಜೆಯಲ್ಲಿ ಹೆಜ್ಜೆಯಿಟ್ಟು ಬಂದು ಹೆಗಲಿಗೆ ಹೆಗಲುಕೊಟ್ಟು ಆಧುನಿಕ ಹೆಣ್ಣು ದುಡಿದು ತಂದು ಹಾಕಿದರೂ ತನ್ನ ಸುತ್ತಲಿನ ಕೀಚಕತ್ವವನ್ನು ಆಕೆ ಎದುರಿಸಬೇಕಾಗುತ್ತದೆ. ಅಥವಾ ಅನುಭವಿಸಬೇಕಾಗುತ್ತದೆ. ಸಾಮಾಜಿಕ ಕಟ್ಟುಪಾಡುಗಳನ್ನು ಉಲ್ಲಂಘಿಸಿದರೆ ಅದನ್ನೂ ಹತ್ತಿಕ್ಕಲಾಗುತ್ತದೆ. ಇವೆಲ್ಲವನ್ನೂ ನುಂಗಿ ಬದುಕುವ ಅಗ್ನಿಕನ್ಯೆಗಿಂತ ಬೇರೇನೂ ಅಲ್ಲ ಮತ್ತು ಇನ್ನೇನೂ ಆಗಲು ಸಾಧ್ಯವಿಲ್ಲ ಎಂಬ ಧ್ವನಿ ಇಲ್ಲಿದೆ.

ಸೀರೆ ಸುತ್ತಿಕೊಳ್ಳುವಾಗ ದ್ರೌಪದಿ
ಉಂಗುರ ಎತ್ತಿಕೊಳ್ಳುವಾಗ ಶಕುಂತಲೆ
ಒಲೆ ಹೊತ್ತಿಕೊಳ್ಳುವಾಗ ಸೀತೆ
ಯಾಕೆ, ಯಾಕೆ ನೆನಪಾಗಬೇಕು?

(ಸವಿತಾ ನಾಗಭೂಷಣ . ದರುಷನ, ಪುಟ-೩೮)

ಎಂಬ ಪ್ರಶ್ನೆಯೂ ಕಾಡಿದ್ದಿದೆ. ನಿತ್ಯದ ಕ್ರಿಯೆಗಳೆಲ್ಲವೂ ಪುರಾಣದ ಒಂದಲ್ಲ ಒಂದು ಪಾತ್ರಗಳೊಂದಿಗೆ ಸಂಬಂಧವನ್ನು ಕಲ್ಪಿಸುವ ಈ ಸಾಲುಗಳು ಇಂದು ಆ ಪಾತ್ರಗಳು ಮಹಿಳೆಯರನ್ನು ಕಾಡುವ ಬಗೆಯನ್ನು ತಿಳಿಸುತ್ತವೆ. ಅಸ್ತಿತ್ವದ ನೆಲೆಯಲ್ಲಿ ಪುರುಷ ಮೊದಲು ತನ್ನನ್ನು ಗುರುತಿಸಿಕೊಂಡು ನಂತರ ಹೆಣ್ಣನ್ನು ಗುರುತಿಸಿ ಅವಳನ್ನು ಅನ್ಯಳನ್ನಾಗಿಸಿದ. ತನಗಿಂತ ಭಿನ್ನವಾದ, ತಾನು ಯಾವುದು ಅಲ್ಲವೊ ಅದರ ಮೂಲಕವೇ ತನ್ನನ್ನು ರೂಪಿಸಿಕೊಳ್ಳಲು ಪ್ರಯತ್ನಸಿದ. ಸುಕನ್ಯಾ ಮಾರುತಿ ಅವರ 'ಅಹಲ್ಯೆ' ಕವನ ಇದಕ್ಕೆ ನಿದರ್ಶನ. ಈ ಪಾತ್ರವನ್ನು ಮನೋವೈಜ್ಞಾನಿಕ ನೆಲೆಯಲ್ಲಿ ಪರಿಶೀಲಿಸಿರುವುದನ್ನು ಕಾಣಬಹುದು.

ಸ್ವರ್ಗೀಯ ಸುಖಕೊಡಲು
ತುದಿಗಾಲಲ್ಲಿ ನಿಂತ ನನ್ನ
ಕಡೆಗಣಿಸಿದ್ದ ಬೈರಾಗಿ
ಇಂದ್ರನ ಮೋಸಕ್ಕೆ
ಕಾದ ಕಬ್ಬಿಣವಾದ ನಾನು
ಅವನಿಚ್ಛೆಯಂತೆ ಮಣಿದಿದ್ದೆ, ತಣಿದಿದ್ದೆ
ಕಣ್ಣಿಗೆ ಕಣ್ಣಾದ ನಾನು ಕ್ಷಣಮಾತ್ರ ಸುಖಿಸಿದ್ದೆ ಅಷ್ಟೇ
　　ರಾಮಸ್ಪರ್ಶಕ್ಕೆ
　　ಶಿಲೆ, ಸ್ಫೋಟವಾಗಿದೆ ಅಷ್ಟೇ
　　ಹೆಣ್ಣಾಗಲಿಲ್ಲ

(ಸುಕನ್ಯಾ ಮಾರುತಿ, "ನಾನೆಂಬ ಮಾಯೆ" ಪುಟ-೮೭)

ಎನ್ನುವಲ್ಲಿ ಅಹಲ್ಯೆ ಹೆಣ್ತನದಿಂದಲೇ ವಂಚಿತೆಯಾದ ನೋವು ಸ್ಪಷ್ಟವಾಗಿದೆ. ಅಹಲ್ಯೆ ಪತಿತೆಯಾಗಲು ಒಂದು ಕಡೆಯಿಂದ ಗೌತಮ, ಇನ್ನೊಂದು ಕಡೆಯಿಂದ ಇಂದ್ರ ಕಾರಣರಾಗುತ್ತಾರೆ. ಸ್ತ್ರೀಯ ತಪ್ಪುಗಳ ಹಿಂದೆ ಪುರುಷರೇ ಇರುತ್ತಾರೆ. ಆದರೆ ಸ್ತ್ರೀಯನ್ನು ಮಾತ್ರ ಅಪರಾಧಿ ಸ್ಥಾನದಲ್ಲಿ ನಿಲ್ಲಿಸಲಾಗುತ್ತದೆ. ಈ ಕ್ರಮ ಸರಿಯಲ್ಲವೆಂದು ಕವಯತ್ರಿ ಅಭಿಪ್ರಾಯಪಡುವುದಲ್ಲದೆ, ಅಹಲ್ಯೆಯ ಕೃತ್ಯವನ್ನು ಸಮರ್ಥಿಸಿದ್ದಾರೆ.

ಎಚ್.ಎಲ್. ಪುಷ್ಪ ಅವರ 'ಅಮೃತಮತಿಯ ಸ್ವಗತ' ಇದೇ ರೀತಿಯ ಇನ್ನೊಂದು ಕವನ ಯಶೋಧರನಲ್ಲಿದ್ದ ಕೊರತೆಗಳೇ ಅಮೃತಮತಿ ಪತಿತೆಯಾಗಲು ಕಾರಣ ಎಂಬ ಮನೋಧೋರಣೆ ಈ ಕವನದಲ್ಲಿದೆ.

ಇದು ಜೀವ
ಪ್ರೇಮ, ಕಾಮ, ಮೋಹ ಒಳಗೊಂಡದ್ದು
ನಿನ್ನೆದುರು ಸುಳಿಯದ ಹಕ್ಕಿ
ಅಷ್ಟಾವಕ್ರ ಹಸಿ, ಹಸಿ ಬದಗನಲಿ
ರೆಕ್ಕೆ ಬಿಚ್ಚಿ ಹಾರುವುದೇಕೆ?
　　ಸವಿಯಿದೆ ನೋಡು
　　ಒರಟು ಚಾಟಿಯ ಚುಂಬನದಲ್ಲಿ
　　ನವಿರಿದೆ ನೋಡು, ನಾದವಿದೆ ನೋಡು
　　ಒರಟು ಬೆರಳುಗಳ ಕಂಪನದಲ್ಲಿ
　　ಏನಿದು ಮಿಡಿತ ಮುಳ್ಳುಗಳ ಮುತ್ತಿನಲಿ

ಅದಕ್ಕೆ ನೋಡು ದೊರೆ
ನಿನ್ನ ಚಂದನ, ಗಂಧ ಸುವಾಸಿತ ತೆಕ್ಕೆ
ಬಿಟ್ಟು ಈ ಕಾಡ ಪೊದೆಯ ಕರೆಗೆ
ಹಾಡಾಗಿ ಹಾಡಿದ್ದು
ಹಸಿವಿದ್ದೂ ಒಡಲ ಮುಚ್ಚುವ
ಕಾತುರವಿದ್ದೂ ತಣ್ಣಗೆ ನಗುವ
ಈ ಹೂವುಗಳು
ಒಳಗೊಳಗೇ ಉಕ್ಕಿ ಜ್ವಲಿಸುವುದ ಕಂಡು
ಸಿಟ್ಟಿಗೆದ್ದಿದ್ದೇನೆ

(ಎಚ್. ಎಲ್. ಪುಷ್ಪ : ಅಮೃತ ಮತಿ ಸ್ವಗತ, ಪುಟ-೧)

ಇಲ್ಲಿಯ ಯಶೋಧರ ಮುಗ್ಧತೆಯ ಸಂಕೇತವಾಗಿದ್ದು ಅಷ್ಟಾವಂಕ ಕ್ರೌರ್ಯದ ಸಂಕೇತವಾಗಿದ್ದು, ಇಬ್ಬರೂ ಅಮೃತಮತಿಯ ಮೇಲೆ ಆಕ್ರಮಣಕಾರಿಗಳಾಗಿರುತ್ತಾರೆ. ತನ್ನ ಸುತ್ತ ಅಬ್ಬರದ ಅರಮನೆಯ ಆವರಣ ಆವರಿಸಿದ್ದರೆ ಲೈಂಗಿಕ ತೃಪ್ತಿ ಕಾಣದ, ಅದಕ್ಕಾಗಿ ಹಾತೊರೆಯುವ ತುಡಿತ ಈ ಸ್ವಗತದ ಪ್ರಧಾನ ಅಂಶವಾಗಿದೆ. ಕವನದಲ್ಲಿ ಯಶೋಧರನು ಅಮೃತಮತಿಯ ಬಯಕೆಯನ್ನು, ದೈಹಿಕ ಕಾಮನೆಗಳನ್ನು ತೃಪ್ತಿಗೊಳಿಸಲು ಅಸಮರ್ಥನಾಗಿದ್ದ ಎಂಬುದನ್ನು ಸೂಚ್ಯವಾಗಿ ಹೇಳಲಾಗಿದೆ. ಹಾಗೆಯೇ ಅವಳ ಹೆಣ್ತನಕ್ಕೆ ತಕ್ಕ ಗಂಡನಾಗಿದ್ದ ಬದಗನಿಗೆ ಒಲಿದದ್ದು ಸಹಜವೆಂಬಂತೆ ನಿರೂಪಿಸಲಾಗಿದೆ. ಕವಯತ್ರಿಯ ದೃಷ್ಟಿಯಲ್ಲಿ ಅಮೃತಮತಿ ಎಲ್ಲ ಬಯಕೆ, ಆಸೆ, ಆಕಾಂಕ್ಷೆಗಳನ್ನು ಅದುಮಿಟ್ಟುಕೊಂಡು ಮೌನವಾಗಿ ಕೊರಗುವ, ಶೋಷಣೆಯನ್ನು ಅನುಭವಿಸುವ ಅಬಲೆಯಲ್ಲ. ಆಕೆ ತನ್ನ ಲೈಂಗಿಕ ಸ್ವಾತಂತ್ರ್ಯವನ್ನು ಮೆರೆದ ದಿಟ್ಟ ಹೆಣ್ಣಿನ ಪ್ರತೀಕವಾಗಿದ್ದಾಳೆ.

ಎಚ್.ಎಲ್. ಪುಷ್ಪ ಅವರ ಇದೇ ಮಾದರಿಯ ಇನ್ನೊಂದು ಕವನ 'ಮಾಧವಿ ಸ್ವಗತ' ಮಹಾಭಾರತದ ಘಟನೆಗಳ ಪೂರ್ವದಲ್ಲಿ ನಡೆದಿರಬಹುದಾದ ಮಾಧವಿಯ ಕತೆ ಕರುಣಾಜನಕವಾದದ್ದು. ಭಾರತದ ಪ್ರಾಚೀನ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣನ್ನು ಒಂದು ವಸ್ತುವಿಗಿಂತ ಭಿನ್ನವಾಗಿ ಪರಿಗಣಿಸಲಾಗಿರಲಿಲ್ಲ ಎಂಬುದಕ್ಕೆ ಮಾಧವಿಯ ಬದುಕು ಸ್ಪಷ್ಟ ನಿದರ್ಶನವಾಗಿದೆ. ಚಂದ್ರವಂಶದ ರಾಜನಾದ ಯಯಾತಿಯ ಮಗಳಾಗಿ ಹುಟ್ಟಿ, ವಿಶ್ವಾಮಿತ್ರನ ಶಿಷ್ಯಗಾಲವನಿಗೆ ಗುರುದಕ್ಷಿಣೆಯಾಗಿ ನೀಡಲ್ಪಟ್ಟು ನಾಲ್ಕು ಮಂದಿ ರಾಜರಿಂದ ಬಳಸಲ್ಪಟ್ಟು, ನಾಲ್ಕು ಮಕ್ಕಳನ್ನು ಹೆತ್ತು ತಾಯ್ತನವನ್ನು ಕಳೆದುಕೊಂಡು ಯಂತ್ರವಾಗಿದ್ದ ನತದೃಷ್ಟೆ ಮಾಧವಿ. ಪ್ರಸ್ತುತ ಕವನದಲ್ಲಿ ಮಾಧವಿಯ ಕರುಣಾಜನಕ ಬದುಕನ್ನು ಪ್ರಸ್ತಾಪಿಸುತ್ತ, ಅಂದಿನ ಪುರುಷ ಪ್ರಧಾನ ವ್ಯವಸ್ಥೆಯ ಕ್ರೌರ್ಯ, ಪಾಶವಿತನ, ಅಮಾನವಿಯತೆಗಳನ್ನು ಅಸಹನೆಯಿಂದ ದಾಖಲಿಸಲಾಗಿದೆ. ಮಾಧವಿಯ ಕುರಿತು ಅಪಾರ ಸಹಾನುಭೂತಿಯನ್ನು ವ್ಯಕ್ತಪಡಿಸಲಾಗಿದೆ.

ಹರಿವ ನದಿ ನಾನು
ಮಿಂದು ಮಿಯುವರೆಷ್ಟು ಮಂದಿ?
ಅನುಕ್ಷಣವೂ ಗರ್ಭ ಭಾರ
ಈ ಕುದುರೆಗಳಿಗೆ ನನ್ನನ್ನೆ ಅಡವಿಟ್ಟು
ಅಯೋಧ್ಯೆ, ಕಾಶಿ, ಬೋಜನಗರ, ವಿಶ್ವಾಮಿತ್ರನ
ಒಂದೊಂದು ನಗರಕ್ಕೆ ಒಬ್ಬೊಬ್ಬ ಚಕ್ರವರ್ತಿ ಆಶ್ರಮ ಕೊಟ್ಟು
ಈ ಚಕ್ರವರ್ತಿಗಳ ತಾಯಿ, ದೊರೆ ದೊರೆಗೂ
ಸೆರಗ ಹಾಸುವ ಅಭಿಸಾರಿಕೆ

ಗಾಲವ ನಿನ್ನ ಗುರುದಕ್ಷಿಣೆಯ ಉರುಳು
ನನ್ನ ತಾಯ್ತನವ ಹೊಸಕಿ ಹಾಕಿ
'ಅಯ್ಯೋ' ಅಮ್ಮಾ ನನ್ನ ನೋವೆಲ್ಲಾ
ಖುರಪುಟದ ಸದ್ದಲ್ಲಿ ಅಡಗಿ
ಭಲೇ ದಾನವೀರ ಯಯಾತಿ
ಭಲೇ ಆದರ್ಶ ಶಿಷ್ಯ ಗಾಲವ
ಮೈ ಮನಗಳ ನಿಮಗಾಗಿ ಬಲಿ ಕೊಟ್ಟು
ನನಗ್ಯಾವ ಬಿರುದು? ಹೇಳಿ ನನಗ್ಯಾವ ಬಾವಲಿ?

(ಎಚ್. ಎಲ್. ಪುಷ್ಪ : ಅಮೃತ ಮತಿ ಸ್ವಗತ, ಪುಟ-೪೨)

ಸ್ತ್ರೀ-ಪುರುಷರ ಅಸಮಾನತೆಯು ಬಹುತೇಕ ಎಲ್ಲಾ ಪುರಾಣಗಳಲ್ಲಿ ಕಂಡುಬರುತ್ತದೆ. ಪುರುಷರು ತಮಗೆ ಬೇಕಾದಂತೆ ಪುರಾಣಗಳನ್ನು ಕಟ್ಟಿಕೊಂಡು ತಮ್ಮ ಮೂಗಿನ ನೇರಕ್ಕೆ ವಿವರಿಸಿದ್ದಾರೆ. ದೇಹಕೇಂದ್ರಿತಳಾಗಿ ಹೆಣ್ಣು ಕಾಮ, ಆನಂದ ಹಾಗೂ ಅಪಾಯಗಳ ಮೂಲವಾಗಿ ಬಿಂಬಿತಳಾಗಿದ್ದಾಳೆ. ಇದಕ್ಕೆ ಉದಾಹರಣೆ ಮಾಧವಿಯ ಪಾತ್ರ, ಯಯಾತಿ, ಗಾಲವ, ವಿಶ್ವಾಮಿತ್ರರಿಂದ ಶೋಷಣೆಗೆ ಗುರಿಯಾದರೂ, ಈ ಸಮಾಜ ಪುರುಷನ ಆಧಿಪತ್ಯವನ್ನು ಒಪ್ಪಿಕೊಂಡು ವೈಭವೀಕರಿಸುತ್ತದೆ. ಅದೇ ಶೋಷಣೆಗೆ ಗುರಿಯಾದ ಮಾಧವಿಗೆ ಯಾವುದೇ ನ್ಯಾಯವಾಗಲಿ, ನೈತಿಕ ಬೆಂಬಲವಾಗಲಿ ದೊರೆಯುವುದಿಲ್ಲ ಎನ್ನುವಂತಹ ವಿಚಾರವನ್ನು ಈ ಕವನ ಧ್ವನಿಸುತ್ತದೆ.

ರಾಮಾಯಣದ ಊರ್ಮಿಳೆಯ ಏಕಾಂತ ಹಲವು ಲೇಖಕಿಯರನ್ನು ಕಾಡಿದ್ದಿದೆ. ಸ್ವಂತಿಕೆ ಇಲ್ಲದ, ಕುಟುಂಬ ವ್ಯವಸ್ಥೆಯೊಳಗೆ ತನ್ನನ್ನೇ ಅರ್ಪಿಸಿಕೊಂಡು ಮದುವೆಯಾಗಿ ತಂದ ಹೆಣ್ಣನ್ನು ಮರೆಯುವ ಲಕ್ಷ್ಮಣನಂತಹ ಗಂಡಸರ ವಿರುದ್ಧದ ಪ್ರತಿರೋಧಿಸುವ ಧ್ವನಿ ಈ ಕವನದಲ್ಲಿದೆ. ಊರ್ಮಿಳೆ ಖಾಸಗಿ ಬದುಕೇ ಇಲ್ಲದ ಹೆಣ್ಣು ಮಗಳು. ಸೀತಾ ಸ್ವಯಂವರದಲ್ಲಿ ರಾಮನೊಂದಿಗೆ ಸೀತೆಯ ವಿವಾಹವಾದರೆ, ಲಕ್ಷ್ಮಣನೊಂದಿಗೆ ಊರ್ಮಿಳೆಗೆ ವಿವಾಹವಾಗುತ್ತದೆ. ರಾಮನ ವನವಾಸದ

ಸಂದರ್ಭದಲ್ಲಿ ಲಕ್ಷ್ಮಣನೂ ಕಾಡಿಗೆ ಹೊರಡುತ್ತಾನೆ. ರಾಮನಿಗೆ ಸೀತಾ ಮುಖ್ಯಳಾದಷ್ಟು ಲಕ್ಷ್ಮಣನಿಗೆ ಊರ್ಮಿಳೆ ಮುಖ್ಯಳಾಗುವುದಿಲ್ಲ. ಅಷ್ಟೇ ಅಲ್ಲ, ರಾಮ ಸೀತೆಯರಷ್ಟು ಮುಖ್ಯವಾಗುವುದಿಲ್ಲ. ಊರ್ಮಿಳೆಯನ್ನು ಒಂಟಿಯಾಗಿಸಿ ಅಣ್ಣನ ಸೇವೆಗೆ ತೆರಳಿದ ಲಕ್ಷ್ಮಣನಿಗೆ ಊರ್ಮಿಳೆಯ ಏಕಾಂತದ ಬಿಸಿ ತಟ್ಟುವುದಿಲ್ಲ. ಒಂಟಿಯಾದ ಊರ್ಮಿಳೆ ಹೊತ್ತಿ ಉರಿಯುವ ಭೂಮಿಯ ಹಾಗೆ ಧಗಧಗಿಸುತ್ತಾಳೆ. ಅವಳಲ್ಲಿ ವಯೋ ಸಹಜವಾದ ಆಸೆ ಕನಸುಗಳಿವೆ.

ಹಿರಿಯಕ್ಕನ ಹಕ್ಕ ಕೇಳಿಲ್ಲ
ಸ್ವಯಂವರದ ಸಂಭ್ರಮಕ್ಕಲ್ಲ
ಪಟ್ಟದ ಆಸೆಯಿರಲಿಲ್ಲ
ಬಿಳಿಬಿಳಿ ಹಂಸದಂತೆ ಪುಟಿಯುವ ಈ ಹೆಣ್ತನಕ್ಕೂ ಕೊಳ್ಳಿ
ಇಟ್ಟವರಾರೂ?

(ವಿನಯ, ಬಾಯಾರಿಕೆ, ಉರಿವ ಇಳೆ ಊರ್ಮಿಳೆ, ಪುಟ–೧೯)

ಈ ಊರ್ಮಿಳೆ ತಾನು ನಗುವುದು, ಅಳುವುದು, ಮುಗಿಯುವುದು ಹದಿನಾಲ್ಕಕ್ಕೆ ಎಂದು ನಿಡುಸುಯ್ದು ವಿಷಾದ ವ್ಯಕ್ತಪಡಿಸುತ್ತಾಳೆ. ಆಧುನಿಕ ಕಾಲದ ವಿಷಮ ವಿವಾಹದ ನೆನಪೊಂದು ಸುಳಿಯುತ್ತದೆ. ಇಷ್ಟವಿಲ್ಲದೆ ಮದುವೆಯ ಫಲ ಗಂಡು–ಹೆಣ್ಣು ಪರಸ್ಪರ ದೂರವಾಗುವುದು. ಆದರೆ ಅಲ್ಲಿ ಹೆಣ್ಣಿಗೇ ಶಿಕ್ಷೆ. ಸಾಂಸಾರಿಕ ಬದುಕಿಗೆ ಹೆಣ್ಣಿಗೆ ಸಂಸಾರ ಅನಿವಾರ್ಯವಾದಷ್ಟು ಗಂಡಿಗೆ ಅಲ್ಲ. ಮದುವೆಯಾಗಿ ವರ್ಷಕ್ಕೆ ಮೊದಲೇ ಉದ್ಯೋಗ ಅಥವಾ ಇನ್ನಿತರ ಕಾರಣಕ್ಕೆ ವಿದೇಶಕ್ಕೆ ಹೋಗುವ ಗಂಡ, ತನ್ನ ಹೆಂಡತಿಯನ್ನು ಸ್ವದೇಶದಲ್ಲೇ ಬಿಟ್ಟು ಹೋಗುವಾಗ ಆಕೆ ಅನುಭವಿಸಬಹುದಾದ ನೋವು ಊರ್ಮಿಳೆದ್ದು.

ಹದಿನಾಲ್ಕು ವರ್ಷ ವನವಾಸಕ್ಕೆ ಹೋಗಬೇಕಾಯ್ತು ನೀನು
ಅದಕೊಂದು ಕಾರಣವಾದರೂ ಇತ್ತು
ಆದರೆ ನನಗೆ ಏನಿತ್ತು

(ಶಾಂತಾ ನಾಡಗೇರ, ಉರಿ ಬದಲಾಗಿದೆಯೇ, ಊರ್ಮಿಳೆಯ ಸ್ವಗತ, ಪುಟ–೪೧)

ಸ್ತ್ರೀ–ಪುರುಷ ಅಸಮಾನತೆಯು ಬಹುತೇಕ ಎಲ್ಲಾ ಪುರಾಣಗಳಲ್ಲಿ ಕಂಡುಬರುತ್ತದೆ. ಪುರುಷರು ತಮಗೆ ಬೇಕಾದಂತೆ ಪುರಾಣಗಳನ್ನು ಕಟ್ಟಿಕೊಂಡು ತಮ್ಮ ಮೂಗಿನ ನೇರಕ್ಕೆ ವಿವರಿಸಿದ್ದಾರೆ. ದೇಹಕೇಂದ್ರಿತಳಾಗಿ ಹೆಣ್ಣು ಕಾಮ, ಆನಂದ ಹಾಗೂ ಅಪಾಯಗಳ ಮೂಲವಾಗಿ ಬಿಂಬಿತಳಾಗಿದ್ದಾಳೆ.

ಎಂ.ಎಸ್. ವೇದಾ ಅವರು 'ಕುಂತಿಗೆ' ಎಂಬ ಕವನದಲ್ಲಿ ಕುಂತಿಯ ಕೃತ್ಯವನ್ನು ಪ್ರಸ್ತಾಪಿಸಿ ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ.

ಇನ್ನೂ ಕನ್ಯಾ ಇರುವಾಕೆ
ತಡೇನಾರದೆ ಕೆಟ್ಟ ಕುತೂಹಲಕ್ಕೆ

ನೆತ್ತಿಮ್ಯಾಲ ನಿಂತು ಉರಿಯುವಾತನ್ನೆ
ಗುರುಬೋಧಿಸಿದ ಮಂತ್ರಾನ ವದರಿ
ಆಮಂತ್ರಿಸಿದ ಗಟ್ಟಿಗಿತ್ತಿ ನೀ

(ಎಂ. ಎಸ್. ವೇದಾ, ಬೀಳಲುಗಳು, ಪುಟ-೩೭)

ಈ ಕವನದಲ್ಲಿ ಪಾಂಡು ಗಂಡನಾಗಿಯೂ ಗಂಡು ಆಗದಿರುವಾಗ ತನ್ನ ಹೆಣ್ತನವನ್ನು ವ್ಯರ್ಥವಾಗಲು ಬಿಡದೆ ಪರಪುರುಷರಿಂದ ವೀರಪುತ್ರರನ್ನು ಪಡೆದಿದ್ದಕ್ಕೆ, ವಿಧವೆಯಾಗಿಯೂ ಮಕ್ಕಳ ಪಾಲನೆ-ಪೋಷಣೆಯಲ್ಲಿ ತೊಡಗಿಸಿಕೊಂಡು (ಮಾದ್ರಿಯಂತೆ ಸತಿಯಾಗದೆ) ಅವರನ್ನು ಮೂರು ಲೋಕದ ಗಂಡರನ್ನಾಗಿಸಿದ್ದಕ್ಕೆ ಕುಂತಿಯ ಬಗೆಗೆ ಬಹಳ ಮೆಚ್ಚುಗೆ ವ್ಯಕ್ತಪಡಿಸಲಾಗಿದೆ. ಇಂಥ ಧೈರ್ಯ, ಸಾಹಸಗಳನ್ನು ಮೆರೆದ ಕುಂತಿಗೆ ಪ್ರಸ್ತುತ ಕವನದ ಮೂಲಕ ಅಭಿನಂದನೆ ಸಲ್ಲಿಸಲಾಗಿದೆ.

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಪುರುಷನಿಗೆ ಲೈಂಗಿಕ ಸ್ವಾತಂತ್ರ್ಯವಿದ್ದರೆ ಸ್ತ್ರೀಗೆ ಮದುವೆ ಚೌಕಟ್ಟಿನೊಳಗೆ ಮಾತ್ರ ಲೈಂಗಿಕ ಅವಕಾಶಗಳಿವೆ. ಅದನ್ನು ಮೀರಿದರೆ ಅಪರಾಧಿಯೆನಿಸಿ ಶಿಕ್ಷೆಗೆ ಗುರಿಯಾಗುತ್ತಾಳೆ. ಈ ವ್ಯವಸ್ಥೆಯಲ್ಲಿ ಶೀಲವಂತಳಾಗಿ ಸೌಂದರ್ಯ ಪ್ರದರ್ಶಿಸಿಕೊಂಡು ಸ್ವಂತ ಅಸ್ತಿತ್ವವನ್ನು ತೋರಿಸಿಕೊಳ್ಳದೆ ಅಧೀನಳಾಗಿರಬೇಕೆಂದು ನಿರೀಕ್ಷಿಸಲಾಗುತ್ತದೆ. ಒಂದು ವೇಳೆ ಇಂತಹ ಮೌಲ್ಯಗಳನ್ನು ಉಲ್ಲಂಘಿಸಿದರೆ ಹೆಣ್ಣು ಅನುಭವಿಸುವ ಯಾತನೆ ಹೇಗಿರುತ್ತದೆ ಎಂಬುದನ್ನು ವಿಜಯ ದಬ್ಬೆಯವರ 'ಕುಂತಿಯ ಬೆಳಗು' ಕವನ ಪ್ರತಿಬಿಂಬಿಸುತ್ತದೆ.

ತಂದೆ ಯಾರೋ
ಸೂರ್ಯನೋ ಅವರಪ್ಪನೋ
ಬಿತ್ತಿ ಬೈಗಿನಲ್ಲಿ ಕರಗಿ ಹೋದ
ಆದರೆ ನಿತ್ಯದ ಬೆಳಕಲ್ಲಿ
ತೇಲಿ ಬಿಡಬೇಕಾದವಳು
ತೇಲಿಬಿಟ್ಟವಳು...ನಾನು
ಬಾಯಿಲ್ಲ ಕರ್ಣಾ ಬಾಯಿಲ್ಲ
ನಿನ್ನ ಮಗನೆನ್ನಲು ನಾಲಗೆ ನಡುಗುತ್ತಿದೆ
ಆದರೆ ಈ ಜೂಜಿನಲ್ಲಿ
ನನ್ನಂಥ ಕಾಯಿಗಳಿಗೆ ದಿಕ್ಕೆಲ್ಲಿದೆ?

(ವಿಜಯ ದಬ್ಬೆ, ಇತಿಗೀತಿಕೆ, ಪುಟ-೧೩)

ವಿವಾಹ ಪೂರ್ವದ ಲೈಂಗಿಕ ನಿಷೇಧವನ್ನು ಉಲ್ಲಂಘಿಸಿದ್ದಕ್ಕೆ ಕುಂತಿ ಜೀವನಪರ್ಯಂತ ಮಾನಸಿಕ ತೊಳಲಾಟಕ್ಕೆ ಒಳಗಾಗಬೇಕಾಯಿತು. ಹೀಗಾಗಲು ಪುರುಷ ಪ್ರಧಾನ ವ್ಯವಸ್ಥೆಯೇ

ಕಾರಣ ಎಂಬುದಾಗಿ ವಿಜಯ ದಬ್ಬೆಯವರು ಈ ಕವನದಲ್ಲಿ ವಿಷಾದದ ನೆಲೆಯಲ್ಲಿ ಆರೋಪಿಸುತ್ತಾರೆ. ಈ ವ್ಯವಸ್ಥೆಯಲ್ಲಿ ಮಹಿಳೆಗೆ ತಾನು ಹೆತ್ತ ಮಗುವನ್ನು ತನ್ನದೆಂದು ಹೇಳಿಕೊಳ್ಳುವ ಸ್ವಾತಂತ್ರ್ಯವೂ ಇಲ್ಲ ಎಂಬುದನ್ನು ಕುಂತಿಯ ನಿದರ್ಶನದೊಂದಿಗೆ ನಿರೂಪಿಸಿದ್ದಾರೆ.

ಬಿ.ಟಿ. ಲಲಿತಾ ನಾಯಕ್ ಅವರು ಪುರಾಣ ಕಾಲದಿಂದ ಇತ್ತೀಚಿನವರೆಗಿನ ಮಹಿಳಾ ಶೋಷಣೆಯ ಮೇಲೆ ಬೆಳಕು ಚೆಲ್ಲುತ್ತಲೇ ಪುರಾಣದ ಸ್ತ್ರೀ ಪಾತ್ರಗಳನ್ನು ಪ್ರಸ್ತುತ ಸಮಾಜದೊಂದಿಗೆ ಮುಖಾಮುಖಿಯಾಗಿಸಿ, ಹೊಸ ರೀತಿಯಲ್ಲಿ ಮುರಿದು ಕಟ್ಟುವ ಕೆಲಸವನ್ನು ಮಾಡಿದ್ದಾರೆ. ಶ್ರೇಣೀಕೃತ ಶೋಷಿತ ಸಮಾಜದಿಂದ ಹೆಣ್ಣಿನ ಬಿಡುಗಡೆಗಾಗಿ ಹಂಬಲಿಸುವ ಕವಯತ್ರಿ ಹೆಣ್ತನದ ಅಸ್ಮಿತೆ, ದುರಂತವನ್ನು ವಾಸ್ತವದೊಂದಿಗೆ ಚಿತ್ರಿಸಿದ್ದಾರೆ.

ಈಗಲೂ ಇಲ್ಲಿ ಅದೇ ಕಥೆ
ನಡೆದಿದೆ ಸೀತೆ
ಬದಲೇನಾದರೂ ಆಗಿದ್ದರೆ
'ಸೀ' ಬದಲು 'ಗಿ' ಎಂಬುದಷ್ಟೆ

ಪುರಾಣ ಕಾಲದಲ್ಲಿ ಸ್ತ್ರೀ ಹೇಗೆ ಶೋಷಣೆ, ಅಪಮಾನ, ಅವಮಾನಗಳಿಗೆ ಒಳಗಾಗಿದ್ದಾಳೋ ಆ ಕಥೆ ಈಗಲೂ ಮುಂದುವರೆದಿದೆ ಎಂಬುದನ್ನು ಪುರಾಣದ ಸ್ತ್ರೀ ಪಾತ್ರ 'ಸೀತೆ'ಯ ಮೂಲಕ ಹೇಳಿದ್ದಾರೆ. ಇಲ್ಲಿ ಕಾಮದ ನೆಲೆಯಲ್ಲಿ ಹೆಣ್ಣನ್ನು ಶೋಷಿಸುತ್ತಿರುವವರ ವಿರುದ್ಧ ಅಸಮಾಧಾನದ ದನಿ ಇದೆ. ಈ ರೀತಿಯ ದನಿಯಲ್ಲಿಯೇ ಚರಿತ್ರೆ ಮತ್ತು ಪರಂಪರೆಯ ಪುನರ್ ಶೋಧವನ್ನು ಕಾಣಬಹುದು. ಪುರಾಣದ ಕಾವ್ಯಗಳಲ್ಲಿ ಸ್ತ್ರೀಯರ ಮೂಲಕವೇ ಒಟ್ಟು ಸ್ತ್ರೀ ವರ್ಗದ ಅಸಹಾಯಕತೆಯನ್ನು ವ್ಯಕ್ತಪಡಿಸುವ ಸಂದರ್ಭದಲ್ಲಿ ಒಟ್ಟು ವ್ಯವಸ್ಥೆಯ ಬಗ್ಗೆ ಜಿಗುಪ್ಸೆಗೊಂಡು ಹತಾಶೆ ಹೊಂದಿರುವ ಕವಯತ್ರಿ

ಭೂಮಿ ಬಾಯ್ದೆರೆದು
ನುಂಗಿ ಬಿಡಬಾರದೇ ಎನ್ನ
ಇದೇ ಕೂಗು ಮತ್ತೆ ಮತ್ತೆ
ಅರಣ್ಯ ಧ್ವನಿತವಾಗುತಿದೆ ಸೀತೆ
ಬದಲಾಗಿಲ್ಲ ಏನೇನೂ ಇಲ್ಲಿಯ
ಈಗಿನ ಕಥೆ

(ಲಲಿತಾ ನಾಯಕ್. ಬಿ.ಟಿ. ಬಿದಿರು ಮಳೆ ಕಂಟಿಯಲಿ, ಪುಟ-೧೦೩)

ಎಂಬಲ್ಲಿ ಇತಿಹಾಸ ಮತ್ತು ಪುರಾಣಗಳ ವ್ಯಕ್ತಿ ಸಂಕೇತಗಳೊಂದಿಗೆ ಕಾಲತೀತವಾದ ಕಥೆಯನ್ನು ಹೇಳುತ್ತಲೇ, ಬಂಡಾಯದ ಅನಿವಾರ್ಯತೆಯನ್ನು ಬಿಂಬಿಸಿದ್ದಾರೆ. ಅಂದಿನ ಸೀತೆಯ ಸಂಕಟ ಮತ್ತು ಅಳಲು ಇಂದಿನ ಸ್ತ್ರೀಯರಿಗೂ ತಪ್ಪಿಲ್ಲ. ಸೀತೆಯ ಆ ಕೂಗು ಮತ್ತೆ ಮತ್ತೆ ಅನಾವರಣಗೊಳ್ಳುತ್ತಿದೆ. ಈ ಹಿನ್ನೆಲೆಯಲ್ಲಿ ಅಭಿವೃದ್ಧಿ, ಪ್ರಗತಿಶೀಲತೆ, ವೈಚಾರಿಕತೆಗಳೆಲ್ಲವೂ ಹುಸಿ

ಹೇಳಿಕೆಗಳಾಗಿವೆ ಎಂಬುದು ಕವಯತ್ರಿಯ ನಿಲುವು. ಇವರದೆ ಇನೊಂದು ಕವಿತೆ 'ಜೋಕೆ ಕಾಣವ್ವ ಚಾಮುಂಡಿ' ಎಂಬ ಕವಿತೆಯಲ್ಲಿ ಪೌರಾಣಿಕ ಘಟನೆಯನ್ನು ಸ್ಮರಿಸುತ್ತಾ, ಪುರುಷರ ಹುನ್ನಾರಗಳನ್ನು ಬಯಲುಗೊಳಿಸುತ್ತದೆ. ಪಟ್ಟಭದ್ರ ಶಕ್ತಿಗಳು ತಮ್ಮ ಬುದ್ಧಿಶಕ್ತಿಯನ್ನು ಬಳಸಿ ಒಂದು ಶೋಷಿತ ವರ್ಗದ ಮೂಲಕ ಇನ್ನೊಂದು ಶೋಷಿತ ವರ್ಗವನ್ನು ನಾಶಗೊಳಿಸುವ ಇಲ್ಲವೆ ತಮ್ಮ ಗುಲಾಮರನ್ನಾಗಿಸಿಕೊಳ್ಳುವ ಹುನ್ನಾರಗಳಲ್ಲಿ ಸಫಲವಾಗಿರುವುದನ್ನು ಈ ಕವನದಲ್ಲಿ ವಿವರಿಸಲಾಗಿದೆ.

ಚಾಮುಂಡಮ್ಮಾ ನೀ ಯಾಮಾರಿ ಬಿಟ್ಟೆಯಮ್ಮಾ
ಸಕಲ ಧನ ಸಂಪತ್ತು ದೇವಲೋಕದ ದೌಲತ್ತು
ರಂಭೆ ಗೊಂಬೆಯರ ಸಂಗ ಪಡೆಯಲಿಕ್ಕಾಗಿ
ಹಲವು ಹವಾಲಾಗಳ ಮೇಲೆ ಪರದೆ ಎಳೆವುದಕ್ಕಾಗಿ
ಹೊಗಳ್ಹೊಗಳಿ ನಿನ್ನ ಅಟ್ಟಕ್ಕೇರಿಸಿದರು ಅಕ್ಕ
ಪಾಲು ಕೇಳಿದ ಪಾಪಿಯ ತಲೆ ತೆಗೆಸಿದರಲ್ಲೆ
ಪಾತಕರು ವಂಚಕರು ಪಾರಾದರಲ್ಲೆ

(ಲಲಿತಾ ನಾಯಕ್ ಬಿ.ಟಿ., ಬಿದಿರು ಮಳೆ ಕಂಟಿಯಲಿ, ಪುಟ-೪೯)

ಮೇಲ್ವರ್ಗದ ಪುರುಷರಿಗೆ ಮಹಿಷಾಸುರನಂಥವರು ಕಂಟಕಪ್ರಾಯರಾಗಿದ್ದಾರೆ. ಸ್ತ್ರೀಯರ ಪಾಲಿಗೆ ಎಲ್ಲ ಪುರುಷರೂ ಶೋಷಕರಾಗಿರುತ್ತಾರೆ ಎಂಬುದು ಕವಯತ್ರಿಯ ನಿಲುವು. 'ಮಾನವರೆಲ್ಲರೂ ಪುರುಷರೇ ಆಗಿ ಮಾರಣ ಹೋಮಕ್ಕೆ ಸಿದ್ಧತೆ ನಡೆದಿದೆ' ಈ ಸಾಲಿನಿಂದ ಪುರುಷರ ದುಷ್ಟತನವನ್ನು ಪ್ರತಿಮಿಸಲಾಗಿದೆ. ಸ್ತ್ರೀ ಸಂಕುಲವನ್ನು ಪುರುಷಾಧಿಪತ್ಯದಿಂದ ಬಿಡುಗಡೆಗೊಳಿಸಲು ಚಾಮುಂಡಿಯಂಥವರೆ ಹುಟ್ಟಿಬರಬೇಕೆಂಬ ಆಶಯ ಈ ಕವನದಲ್ಲಿದೆ.

ಪುರುಷ ಪ್ರಧಾನ ವ್ಯವಸ್ಥೆಯ ವಿರುದ್ಧ ಪ್ರತಿಭಟನೆ ವ್ಯಕ್ತಪಡಿಸಿ ಪುರುಷ ದೌರ್ಜನ್ಯಕ್ಕೆ ತಕ್ಕ ಪ್ರತೀಕಾರ ಮತ್ತು ಸೇಡು ತೀರಿಸಿಕೊಂಡ ದಿಟ್ಟ ಮಹಿಳೆಯ ಪ್ರತೀಕ ದ್ರೌಪದಿ. ಆಕೆಯನ್ನು ಕುರಿತ ಕವಯತ್ರಿಯ ನಿರೂಪಣೆ ಹೀಗಿದೆ.

ತುಂಬಿದ ಕುರು ಸಭೆಯಲ್ಲಿ ಸೆಳೆದ
ಸೀರೆಗಾಗಿ ಬಿಚ್ಚಿದ ಮುಡಿಗಾಗಿ
ನ್ಯಾಯ ಕೇಳಿ ಯುದ್ಧದ ನಂತರವೇ
ಕಟ್ಟುತ್ತೇನೆಂದವಳು ಭಾರತ ಯುದ್ಧ
ದಲ್ಲಿ ರಣಕಾಳಿಯಾಗಿ ಮೆರೆದೆ
..........................................

ವಿಜಯದ ನಗೆ ನಗುತ್ತಾ ನಿಂತ
ಸಿರಿ ಮುಡಿಯ ಪಾಂಚಾಲಿ ನೀನು

(ವೇದಾ ಎಂ. ಎಸ್., ಬೀಳಲುಗಳು, ಪುಟ–೩೦)

ಕವಿತೆಯ ಕೊನೆಯಲ್ಲಿ 'ಹೆಣ್ಣು ಹುಲಿ' ಎಂದು ಕರೆಯುವಲ್ಲಿ ಎಂತಹ ಹೆಮ್ಮೆ, ಅಭಿಮಾನಗಳಿವೆ ಎಂಬುದನ್ನು ಅರಿಯಬಹುದು. ಪುರಾಣದ ರಾಮನ ಪಾವಿತ್ರೀಕರಣದ ಚೌಕಟ್ಟನ್ನು ಒಡೆಯುವ ಪ್ರಯತ್ನವನ್ನು ಮಾಡಿರುವ ಕವಿಯತ್ರಿ ಆ ಮೂಲಕ ಆಧುನಿಕ ಭಾರತದ ದುರಂತಾವಸ್ಥೆಯನ್ನು ಲಲಿತಾ ನಾಯಕ್ ಅವರು 'ರಾಮ ಅರ್ಜಿ ಹಾಕಿದ್ದಾನೆ' ಕವನದಲ್ಲಿ ಚಿತ್ರಿಸಿದ್ದಾರೆ. ಇಲ್ಲಿ ಪುರಾಣವನ್ನು ಬೇರೊಂದು ದೃಷ್ಟಕೋನದಲ್ಲಿ ನೋಡಲಾಗಿದೆ.

ರಾಮ ಅರ್ಜಿ ಹಾಕಿದ್ದಾನೆ
ನೆಲೆ ಇಲ್ಲ ಆತನಿಗೆ
ವಾಸಕ್ಕೆ ಮನೆ ಇಲ್ಲ ಕೊಡುವಿರಾ ಬಡ ಜನರೇ ಒಂದು ಇಟ್ಟಿಗೆಯನ್ನು
ದಯ ತೋರುವಿರಾ?
ಬೀದಿ ರಾಮನಿಗೊಂದು ಸೂರು ಕಟ್ಟಲೇ ಬೇಕು
ಸಹಿಯ ಹಾಕುವಿರಾ?
ಪರರ ಮನೆಯ ಮುರಿಯುತ್ತಾನೆ ಶ್ರೀರಾಮ
ತನಗಾಗಿ ಗುಡಿಯ ಕಟ್ಟುತ್ತಾನೆ

(ಲಲಿತಾ ನಾಯಕ್ ಬಿ. ಟಿ., ಬಿದಿರು ಮಳೆ ಕಂಟಿಯಲಿ, ಪುಟ–೩)

ಎನ್ನುವಲ್ಲಿ ಕೋಮುವಾದಿ ಧಾರ್ಮಿಕತೆಗೆ ಪ್ರತೀಕವಾಗಿ ರಾಮ ಮತ್ತು ಆತನ ಹೆಸರಿನಲ್ಲಿ ಸಂಗ್ರಹಿಸುವ ಇಟ್ಟಿಗೆ ಕಂಡುಬಂದಿದೆ. ಕವಯತ್ರಿ ಢಾಂಬಿಕ ಭಕ್ತರನ್ನು ಕುರಿತು ಪ್ರತಿಕ್ರಿಯಿಸಿದ ರೀತಿಯು ಸಹ ಆಗಬಹುದು.

ಪುರಾಣಗಳನ್ನು ಚಿಕಿತ್ಸಕ ದೃಷ್ಟಿಕೋನದಲ್ಲಿ ನೋಡುವ ಕವಯತ್ರಿ ಪರಂಪರೆಯಿಂದಲೂ ಪುರುಷನ ಅತ್ಯಾಚಾರ, ದೌರ್ಜನ್ಯ, ಶೋಷಣೆಗೊಳಗಾಗಿರುವ ಸ್ತ್ರೀಯರ ಚಿತ್ರಣವನ್ನು 'ಏಕೆ ಮಲಗಿರುವೆ' ಕವನದಲ್ಲಿ ಅನಾವರಣ ಮಾಡಿದ್ದಾರೆ. ಪುರಾಣಗಳಲ್ಲಿನ ಪುರುಷಶಾಹಿಯನ್ನು ಸ್ತ್ರೀ ನೆಲೆಯಲ್ಲಿ ಕಾಣುವ ಧೋರಣೆ ಇಲ್ಲಿ ಕಂಡುಬರುತ್ತದೆ. ಬಯಲು ಕಟ್ಟೆಯ ಮೇಲೆ ಮಲಗಿರುವ ಮಹಿಳೆಯ ಅಸಹಾಯಕ ಅಂಗಾಂಗಗಳಲ್ಲಿ ಕವಯತ್ರಿಗೆ ಪುರಾಣದ ಪುರುಷಾಧಿಪತ್ಯಗಳೇ ಕಾಣುತ್ತಿವೆ.

ಬಿಟ್ಟೋಡಿದನೇನೆ ಬಯಲಲ್ಲಿ
ಆ ನೀಚ 'ನಳ'ನಂತಹ 'ನಿನ್ನವ'?

ಅಥವ

‘ಶ್ರೀರಾಮ’ನಪ್ಪಣೆಯಂತೆ

ಪಣಕೊಡ್ಡಿ ನಿನ್ನ ಜೂಜಿನಲಿ ಸೋತನೋ?

ಆ ಧರ್ಮರಾಯ?

ಹರಿಶ್ಚಂದ್ರನಂತೆ ಮಾರಿಯೇ ಬಿಟ್ಟನೋ?

ನೆನಪು ಹಾರಿತೆಂದು ‘ದುಶ್ಯಂತ’

ಹೊರ ದೂಡಿದನೇನೆ?

ಶಾಪಗ್ರಸ್ತ ‘ಅಹಲ್ಯೆ’ಯಾಗಿಸಿದನೋ

ಆ ತೆವಲು ಸನ್ಯಾಸಿ

(ಲಲಿತಾ ನಾಯಕ್ ಬಿ. ಟಿ., ಬಿದಿರು ಮಳೆ ಕಂಟಿಯಲಿ, ಪುಟ–೮೭,೮೮)

ಕವನದಲ್ಲಿ ನಳ, ರಾಮ, ಧರ್ಮರಾಯ, ದುಶ್ಯಂತ, ಜಮದಗ್ನಿ ಮುಂತಾದವರು ಮಹಿಳೆಯ ಮೈಮನಗಳ ಮೇಲೆ ಮೂಡಿಸಿರುವ ಮಾಯದ ಗಾಯಗಳು ಅವಳನ್ನು ನೆಲಕ್ಕೊರಗಿಸಿವೆ. ಬಹುತೇಕ ಪುರುಷರೆಲ್ಲ ಧರ್ಮ ಸೂತ್ರಗಳ–ಸೂಕ್ಷ್ಮಗಳ ಕಾರಣಕ್ಕೆ ಹೆಣ್ಣನ್ನು ಬಲಿಕೊಟ್ಟವರೆ. ಅದರಲ್ಲಿಯೇ ತಮ್ಮ ಗೌರವ–ಘನತೆಗಳನ್ನು ಕಂಡವರೆ. ಲೋಕ ನಿಂದನೆಗಳ ನೆಪದಲ್ಲಿ ಧರ್ಮದ ಕವಚ ತೊಟ್ಟವರೆ. ಇವರೆಲ್ಲರನ್ನು ತುಂಬಾ ಸೂಕ್ಷ್ಮವಾಗಿ ಗಮನಿಸಿರುವ ಲಲಿತಾ ನಾಯಕ್ ಅವರು ಆಳುವ ವರ್ಗ ಸೃಷ್ಟಿಸಿದ ಪುರಾಣವನ್ನು ವ್ಯಂಗ್ಯ ಮಾಡುತ್ತಲೇ ಅಲ್ಲಿಯ ಪಾತ್ರಗಳನ್ನು ಭಂಜಿಸಲಾಗಿದೆ.

ಕನ್ನಡ ಸ್ತ್ರೀವಾದಿ ಕವಿತೆಯು ತನ್ನ ದೃಷ್ಟಿಕೋನವನ್ನು ಪುರಾಣ, ಇತಿಹಾಸ, ಪಾತ್ರಗಳ ಮೂಲಕ ನೋಡುತ್ತ, ಈ ಪಾತ್ರಗಳ ಮೂಲಕವೇ ಹಳೆಯ ವ್ಯವಸ್ಥೆಯನ್ನು ತಿರಸ್ಕರಿಸುತ್ತ ತನ್ನ ಪ್ರತಿಭಟನೆಯನ್ನು ಕವಿತ್ವೀಕರಿಸುವುದರೊಂದಿಗೆ ಮೊದಲಾಗಿದೆ. ಈ ಕಾರಣದಿಂದಲೇ ಕನ್ನಡದಲ್ಲಿ ಪುರಾಣ ಭಂಜಕ ಪ್ರಕ್ರಿಯೆ ಹೆಚ್ಚಿನದಾಗಿ ಕಂಡುಬರುತ್ತದೆ. ಇದಲ್ಲದೆ ಹೆಣ್ಣನ್ನು ಹತ್ತಿಕ್ಕುವಲ್ಲಿ ಈ ಪುರಾಣ ಪಾತ್ರಗಳು ಬಹುಮುಖ್ಯವಾದ ಪಾತ್ರವನ್ನು ವಹಿಸುತ್ತವೆ. ಇವುಗಳನ್ನು ಭಂಜಿಸುವ ಮೂಲಕ ಸ್ತ್ರೀಯರ ಬದುಕಿನಲ್ಲಿ ಬದಲಾವಣೆಯನ್ನು ತರಬಹುದು ಎಂಬ ಆಶಯ ಇದರ ಹಿಂದೆ ಇದೆ.

ತೆಲುಗು ಸ್ತ್ರೀವಾದಿ ಕವಯತ್ರಿಯರು ಕನ್ನಡದವರಿಗಿಂತ ಭಿನ್ನವಾದ ನೆಲೆಯಲ್ಲಿ ನಿಂತು ಯೋಚಿಸಿರುವುದನ್ನು ಕಾಣಬಹುದು. ಹೆಣ್ಣನ್ನು ಹತ್ತಿಕ್ಕುವ ಕೆಲಸ ಅವಳ ಶರೀರದಿಂದಲೇ ಮೊದಲಾಗಿದೆ ಎಂದು ಹೇಳುತ್ತ, ಈ ಶರೀರ ಮೀಮಾಂಸೆಯನ್ನು ಕುರಿತು ಮಾತನಾಡುತ್ತಲೆ ತೆಲುಗು ಸ್ತ್ರೀವಾದಿ ಕವಿತೆ ಮೊದಲಾಗಿದೆ. ಈ ಕಾರಣದಿಂದಲೇ ತೆಲುಗು ಸ್ತ್ರೀವಾದಿಗಳು ಪುರಾಣ

ಭಂಜಕತೆಯ ಕಡೆಗೆ ಹೆಚ್ಚಿನ ಗಮನವನ್ನು ಹರಿಸಿಲ್ಲ. ಕೇವಲ ಬೆರಳೆಣಿಕೆಯಷ್ಟು ಸ್ತ್ರೀವಾದಿ ಲೇಖಕಿಯರು ಪುರಾಣ ಭಂಜಕ ಪ್ರಕ್ರಿಯೆಯಲ್ಲಿ ತೊಡಗಿಸಿಕೊಂಡಿರುವುದು ಕಂಡುಬರುತ್ತದೆ.

ಪೌರಾಣಿಕ ಸ್ತ್ರೀ ಪಾತ್ರ ಭಂಜನೆಯ ಆಶಯವು ಸ್ಪಷ್ಟ ಸ್ತ್ರೀವಾದಿ ಆಶಯವನ್ನು ಬಿಂಬಿಸಿದ್ದು ಸಹಜವೇ. ವೈಭವೀಕರಣಕ್ಕೆ ಒಳಗಾಗಿರುವ ಕುಟುಂಬ ಕೇಂದ್ರಿತ ಪಾತ್ರವನ್ನು ಸ್ವ-ಇಚ್ಛೆಯಿಂದ ಪ್ರಶ್ನಿಸಿ, ವಿಮರ್ಶಿಸಿ ತಿರಸ್ಕರಿಸುವ ಸ್ತ್ರೀ ಪಾತ್ರಗಳನ್ನು ನಾವಿಲ್ಲಿ ನೋಡಬಹುದು. ಸಮಾಜದ ಗ್ರಹಿಕೆಗೂ, ವಾಸ್ತವದ ಬದುಕಿಗೂ ಅಂತರವಿದೆ. ವ್ಯಕ್ತಿಗಳು ಸಾಮಾಜಿಕ ಸಂಸ್ಥೆಗಳು ಹುಟ್ಟುಹಾಕಿದ ಮಿಥ್ಯಗಳನ್ನು ನಂಬಿ ಅನುಸರಿಸುತ್ತಾರೆ. ಸ್ತ್ರೀಯರು ಪಿತೃ ಸಂಸ್ಕೃತಿಯು ರೂಪಿಸಿದ ಪಾತ್ರ, ಗುಣ, ಕೆಲಸಗಳನ್ನು ಸಹಜವೆಂದು, ನಿಜವೆಂದು ಒಪ್ಪಿಕೊಂಡಿರುತ್ತಾರೆ. ಅವು ಅವರ ಆಯ್ಕೆಯಾಗಿರುವುದಿಲ್ಲ, ಹೇರಲ್ಪಟ್ಟಿರುತ್ತವೆ.

ಮಹಾಭಾರತ ಕಾವ್ಯದಲ್ಲಿ ದ್ರೌಪದಿಯ ಪಾತ್ರವನ್ನು ಚಿತ್ರಿಸುವಾಗ ವ್ಯಾಸನು ತೋರಿದ ಪುರುಷಾಧಿಪತ್ಯವನ್ನು ವಿಶ್ಲೇಷಿಸುತ್ತ ವ್ಯಂಗ್ಯಪೂರಿತವಾಗಿ ಬರೆದ ಕವಿತೆ ಜಯಪ್ರಭ ಅವರ "ಅಂದುಕೆಗಾವಾಳ್ಳು ಋಷುಲು"

ಒಂದೊಂದು ಪೊರೆ
ಬಿಡಿಸುತ್ತಿರುವಾಗ
ಖಚಿತವಾಗಿ ದ್ರೌಪದಿ ಮನಸ್ಸಿನಲ್ಲಿ ಏನು ನಡೆಯಿತೋ
ಮಹಾಭಾರತ ಹೇಳುವುದಿಲ್ಲ
ಯಾವ ಕೀಚಕನೋ ಜುಟ್ಟು ಹಿಡಿದು ಎಳೆದಾಗ
ನಿಗಿನಿಗಿ ಉರಿದ ಆಕೆಯ ನಿಲುವೆತ್ತರದ ಶರೀರ
ಐವರನ್ನು ಮದುವೆಯಾಗಿ
ಎಷ್ಟು ಮೋಸಗೊಂಡಿತೋ
ವ್ಯಾಸನಿಗೆ ಸರಿಯಾಗಿ ತಿಳಿಯಲಿಲ್ಲ[1]

(ಅಬ್ಬೂರಿ ಛಾಯಾದೇವಿ, ೨೦ವ, ಶತಾಬ್ದಂಲೊ ತೆಲುಗು ರಚಯಿತ್ರುಲ ರಚನಾಲು, ಪುಟ-೬೯)

ದುಶ್ಯಾಸನನು ತುಂಬಿದ ಸಭೆಯಲ್ಲಿ ದ್ರೌಪದಿಯ ವಸ್ತ್ರವನ್ನು ಸೆಳೆಯುವಾಗ ಅವಳ ಮನಸ್ಸಿನಲ್ಲಿ ಉಂಟಾದ ತಳಮಳವನ್ನಾಗಲಿ, ಕೀಚಕನ ಉಪಟಳದಿಂದ ದ್ರೌಪದಿ ಅನುಭವಿಸಿದ ಯಾತನೆಯನ್ನಾಗಲಿ ವ್ಯಾಸನು ಹೇಳಲಿಲ್ಲ. ಹೆಣ್ಣನ್ನು ಹಣ್ಣೆಂದು ಭಾವಿಸಿ ಹಂಚಿತಿನ್ನಿರೆಂದು ಹೇಳಿದಾಗಲೂ ದ್ರೌಪದಿಯ ಮನಸ್ಸಿನ ವೇದನೆಯನ್ನು ವ್ಯಾಸನು ತಿಳಿಯಲೇ ಇಲ್ಲ. ಯಾಕೆಂದರೆ ಅವನು ಋಷಿ ಪುರುಷ ದೌರ್ಜನ್ಯವನ್ನು ಮೌನವಾಗಿ ಸಹಿಸಿಕೊಂಡ ದ್ರೌಪದಿಯ ಅಬಲತೆ ನಿರೂಪಣೆಯಲ್ಲಿ ವಿಷಾದ ಹಾಗೂ ಸಹಾನುಭೂತಿಯನ್ನುಂಟು ಮಾಡಿದೆ.

ಪುರಾಣದ 'ಮಾಧವಿ' ಆದರ್ಶದ ಸಂಕೇತವಾಗದೆ ಶೋಷಣೆಯ ಸಂಕೇತವೂ ಆಗಿದ್ದಾಳೆ ಎಂಬುದನ್ನು ಓಲ್ಗಾ ಅವರು ಈ ಕವನದ ಮೂಲಕ ವ್ಯಕ್ತಪಡಿಸಿದ್ದಾರೆ. ಪಿತೃಪ್ರಧಾನ ಮೌಲ್ಯಗಳ ನಿರೀಕ್ಷೆಗೆ ಒಳಪಡಲಿಚ್ಚಿಸಿದೆ ಆಂತರಿಕ ಸ್ವಾಯತ್ತತೆಯನ್ನು ಮಾಧವಿ ಕಾಯ್ದುಕೊಳ್ಳುತ್ತಾಳೆ.

ಮಾಧವಿ! ಮಾಧವಿ!
ಭೂದಾನ, ಗೋದಾನ, ಸ್ತ್ರೀದಾನ
ಗರ್ಭದಾನ, ಗರ್ಭಕೋಶ ಚರಿತೆ ಮಾಧವಿ
ಮಹಾರಾಜರು, ಪರಮ ಋಷಿಗಳ
ಮೋಕ್ಷ ಸಾಧನೆಯ ಪರಿಕರವೇ
ª ÀÄzÀ !

(ಅಬ್ಬೂರಿ ಛಾಯಾದೇವಿ(ಸಂ) ಓಲ್ಗಾ ತರಂಗಾಲು, ಪುಟ-೧೮೭)

ದಾನವಾಗಿ ನಾಲ್ಕು ಪುರುಷರ ಕೈದಾಟಿ ಹೋದ ಮಾಧವಿಯ ಸ್ಥಿತಿ ಮಹಿಳೆಯ ಭೌತಿಕ ಅಸ್ತಿತ್ವವನ್ನು ನಿರಾಕರಿಸುವ ಚಾರಿತ್ರಿಕ ಪರಂಪರೆಯ ಕ್ರೌರ್ಯವನ್ನು ಪರಿಚಯಿಸುತ್ತದೆ. ಅಷ್ಟೇ ತೀವ್ರವಾಗಿ ಸ್ವಯಂವರ ಮಾಲೆಯನ್ನು ಎಸೆದು ತಪಕ್ಕೆಂದು ಕಾಡಿಗೆ ನಡೆದ ಮಾಧವಿಯ ನಿರ್ಧಾರದ ಧಾಷ್ಟ್ಯ, ಆತ್ಮ ವಿಶ್ವಾಸವೂ ಸ್ತ್ರೀಯ ಮೌಲ್ಯವಾಗಿ ಬಿಂಬಿತವಾಗುತ್ತದೆ. ಹೊಸ್ತಿಲ ದಾಟಿ ನಿರ್ಭಯದಿಂದ ಹೆಜ್ಜೆ ಇಡಬಲ್ಲ ಕಥಾ ನಾಯಕಿಯರೆಲ್ಲ ಪೌರಾಣಿಕ ಸಂಕೇತಗಳ ಸಂಕೋಲೆಯನ್ನು ಸಂಕಷ್ಟಗಳ ಅಗ್ನಿಗೊಡ್ಡಿ ಕಳಚಿಕೊಳ್ಳಲೆತ್ನಿಸುವವರೇ. ಹೆಣ್ಣನ್ನು ಕೇವಲ ಒಂದು ಪರಿಕರವಾಗಿ ನೋಡುವ ಪುರುಷ ಪ್ರಧಾನ ವ್ಯವಸ್ಥೆಯ ಮನಸ್ಥಿತಿಯನ್ನು ಕವಯತ್ರಿ ಖಂಡಿಸಿದ್ದಾರೆ.

ಕನ್ನಡದ ಸ್ತ್ರೀವಾದಿ ಲೇಖಕಿಯರಂತೆಯೇ ತೆಲುಗು ಸ್ತ್ರೀವಾದಿ ಲೇಖಕಿಯರು ಸಹ ಸಮಕಾಲೀನ ವ್ಯವಸ್ಥೆಯಲ್ಲಿನ ಸ್ತ್ರೀಶೋಷಣೆಯನ್ನು ವಿವರಿಸಲು ಹಾಗೂ ಸ್ತ್ರೀಯರಲ್ಲಿ ಜಾಗೃತಿ ಮೂಡಿಸಲು ಪುರಾಣ ಪ್ರತಿಮೆ, ಪ್ರತೀಕಗಳನ್ನು ಸಮರ್ಥವಾಗಿ ಬಳಸಿಕೊಂಡಿದ್ದಾರೆ. ಶಿಲಾ ಸುಭದ್ರಾದೇವಿ ಅವರ 'ಏಮರುಪಾಟು ತಗದು' ಎಂಬ ಕವಿತೆ ಇದಕ್ಕೆ ಉದಾಹರಣೆಯಾಗಿದೆ.

ಕುರುಕ್ಷೇತ್ರ ಯುದ್ಧದಲ್ಲಿ ಬಿರುಕುಬಿಟ್ಟ ಹೃದಯದಿಂದ ಜಾರಿದ
ಪ್ರತಿ ರಕ್ತ ಬಿಂದುವೂ ರೂಪವೆತ್ತಿದ ದುಶ್ಯಾಸನರಂತೆ ಬದಲಾಗಿ
ಭೂಮಿಯ ಮೇಲೆ ಪ್ರತಿ ಪ್ರದೇಶದಲ್ಲೂ
ವಸ್ತ್ರಾಪಹರಣಾಸಕ್ತರಾಗಿ
ಕೈ ಚಾಚುತ್ತಾ ಅಲೆಯುತ್ತಲೇ ಇದ್ದಾರೆ[೩]

(ಶಿಲಾಸುಭದ್ರಾ ದೇವಿ, ನಾ ಆಕಾಶಂ ನಾದೆ, ಪುಟ-೫೧)

ಕುರುಕ್ಷೇತ್ರ ಯುದ್ದದಲ್ಲಿ ಚಿತ್ರಗೊಂಡ ಹೃದಯದಿಂದ ಚಿಮ್ಮುವ ಪ್ರತಿ ರಕ್ತದ ಕಣಗಳು ದುಶ್ಯಾಸನರಾಗಿ ರೂಪ ಪಡೆದು ಭೂಮಿಯ ಪ್ರತಿ ಪ್ರಾಂತಗಳಲ್ಲಿ ಹುಟ್ಟಿ ವಸ್ತ್ರಾಪಹರಣ ಶಕ್ತಿಗಳಾಗಿ

ಕೈ ಚಾಚುತ್ತಿದ್ದಾರೆ. ಎನ್ನುವ ಮಾತುಗಳು ಇಂದಿನ ಸಮಾಜಕ್ಕೆ ಹಿಡಿದ ಕನ್ನಡಿಯಾಗಿವೆ. ಹೆಣ್ಣು ಕಂಡರೆ ಸಾಕು ಅತ್ಯಾಚಾರಗೈಯ್ಯುವ ವಿಕೃತ ಮನಸ್ಸಿನ ದುಶ್ಯಾಸನರು ಪ್ರತಿವಲಯದಲ್ಲಿ ಇರುವುದನ್ನು ಎತ್ತಿ ತೋರಿಸಲಾಗಿದೆ. ಪುರಾಣಗಳ ಕಾಲದಲ್ಲಿ ಹೆಣ್ಣಿನ ಬಗೆಗೆ ಇದ್ದ ಮನೋಭಾವಗಳೇನು ಇಂದು ಬದಲಾಗಿಲ್ಲ ಎನ್ನುವಂತಹ ವಿಚಾರಗಳನ್ನು ಈ ಕವಿತೆ ವ್ಯಕ್ತಪಡಿಸುತ್ತದೆ. ಇವರ ಕಲಲು 'ವೇಟಾಡಿನ ದೃಶ್ಯಾಲು' ಕವಿತೆಯು ಇದೆ ವಸ್ತುವನ್ನು ಒಳಗೊಂಡಿದೆ.

ಕಡಿಯುತ್ತಿದ್ದಷ್ಟೂ ಮೊಳೆಯುವ ದಶಕಂಠನ ತಲೆಯಂತೆ
ಯುಗಯುಗಗಳ ದಾರಿಯಲ್ಲಿ ಪಾಪಾಸುಕಳ್ಳಿ ಬೇಲಿಯಂತೆ
ತಲೆಮಾರುಗಳಿಂದ ಬೆಳೆಯುತ್ತಿರುವ ಮೃಗತ್ವದ ನಿಲುವನ್ನು ಬಿಚ್ಚಿಕೊಳ್ಳಲಾರದೆ
ನಿನ್ನನ್ನು ವಿವಸ್ತ್ರಳನ್ನಾಗಿ ಮಾಡಿ ನಡುಬೀದಿಯಲ್ಲಿ ನಡೆಸುತ್ತಿದ್ದರೆ
ನಾನು ನನ್ನ ಕನಸಿನಲ್ಲಿ ತುಂಬು ಸಭೆಯಲ್ಲಿ ದ್ರೌಪದಿಯಾಗುತ್ತೇನೆ[೪]
(ಶಿಲಾಸುಭದ್ರಾ ದೇವಿ, ಶಿಲಾಸುಭದ್ರ ದೇವಿ ಕವತ್ವಂ (ಸಮಗ್ರ), ಪುಟ-೨೧೫)

ಅನಾದಿ ಕಾಲದಿಂದಲೂ ರಾವಣ, ದುಶ್ಯಾಸನರಂತಹ ವಿಕೃತ ಮನಸ್ಸುಗಳು ಹುಟುತ್ತಲೆ ಇವೆ ಇಂದಿಗೂ ದ್ರೌಪದಿಯಂತೆ ಶೋಷಣೆಗೆ ಗುರಿಯಾಗುತ್ತಲೇ ಇದ್ದಾರೆ ಇಂದಿನ ಮಹಿಳೆಯರು ಎಂದು ಹೇಳುತ್ತ ಬದಲಾಗದಿರುವ ಸಾಮಾಜಿಕ ವ್ಯವಸ್ಥೆಯ ಬಗ್ಗೆ ವಿಷಾದವನ್ನು ವ್ಯಕ್ತಪಡಿಸಿದ್ದಾರೆ. ಆಧುನಿಕ ಸ್ತ್ರೀ ಎದುರಿಸುತ್ತಿರುವ ಹಲವು ಸಮಸ್ಯೆಗಳೇ ಪೌರಾಣಿಕ ಪಾತ್ರಗಳ ಮುಖ್ಯ ಸಮಸ್ಯೆಯಾಗಿದ್ದುದರಿಂದ ಸ್ತ್ರೀಯರನ್ನು ಅವು ತಟ್ಟಿದವು. ಆದ್ದರಿಂದ ಪೌರಣಿಕ ಸ್ತ್ರೀ ಪಾತ್ರಗಳ ಕುರಿತಾದ ಸಾಹಿತ್ಯ ಸೃಷ್ಟಿಯು ಸಮಕಾಲೀನವೆನಿಸುತ್ತದೆ.

ಪುರಾಣಗಳಿಗೆ ವೈಚಾರಿಕತೆಯ ಆಧಾರ, ವೈಜ್ಞಾನಿಕ ವಿವರಣೆ ಇಲ್ಲದಿದ್ದರೂ ಮಾನವರ ಮೇಲೆ ಅಗಾಧವಾದ ಪ್ರಭಾವವನ್ನು ಬೀರುತ್ತವೆ ಇಲ್ಲಿ ಹೆಣ್ಣಿಗೆ ದ್ವಂದ್ವ ಗುಣರೋಪಗಳನ್ನು ಮಾಡಲಾಗಿದೆ. ಒಂದು ಕಡೆ ಪೂಜನೀಯಳು, ನೋವು ನಿವಾರಕಿ, ಕಲಾ ಸೃಷ್ಟಿಕರ್ತೆ ಎಂದು ನೋಡಿದರೆ ಇನ್ನೊಂದು ಕಡೆ ಮಾಟಗಾತಿ, ರಾಕ್ಷಸಿ, ಪುರುಷನನ್ನು ಹಾಳು ಮಾಡುವವಳು ಎಂದು ಚಿತ್ರಿಸಲಾಗುತ್ತದೆ. ಅನ್ಯತೆಯೇ ಈ ದ್ವಂದ್ವಕ್ಕೆ ಕಾರಣ. ಅನ್ಯವು ಕೆಡಕೆಂದು ಅದನ್ನು ಒಳ್ಳೆಯದನ್ನಾಗಿ ಪರಿವರ್ತಿಸಿಕೊಳ್ಳುವವನು ತಾನು ಎಂದು ತಿಳಿಯುತ್ತಾನೆ. ಪುರುಷರ ಇಂತಹ ಅವೈಜ್ಞಾನಿಕ ಹಾಗೂ ಪಕ್ಷಪಾತಿಯ ನಿಲುವುಗಳನ್ನು ವೈಜ್ಞಾನಿಕತೆಯಿಂದ ಹೊರೆಹಚ್ಚಿ ನೋಡುವುದರಿಂದ ಸ್ತ್ರೀ ಬದುಕಿನಲ್ಲಿ ಬದಲಾವಣೆ ಸಾಧ್ಯ ಎಂಬುದನ್ನು ಶಿಲಾ ಸುಭದ್ರಾದೇವಿ 'ಕೊತ್ತಾವಿಷ್ಕಾರಂ' ಕವಿತೆಯಲ್ಲಿ ಪುರಾಣ ಪಾತ್ರಗಳ ಸನ್ನಿವೇಶವನ್ನು ಉದಾಹರಿಸುತ್ತ ಹೇಳಿದ್ದಾರೆ.

ಅಜ್ಞಾನ ಸಾಗರವನ್ನು ಆಲೋಚನಾ ತೆರೆಯ ಚಾಪನ್ನು ಎತ್ತಿ
ಧೈರ್ಯದೆಡೆ ಸಾಗಿಹೋಗು
ಆಗ ನೀನು

ಕಾಡಿನಲ್ಲಿ ರೋಧಿಸುವ ವಿಮುಕ್ತಳೋ
ಮಾರಾಟದ ಸರಕೋ ಪಂದ್ಯದ ವಸ್ತುವೋ
ಕಾರ್ಯೆಷುದಾಸಿಯೋ ಶಯನೇಷು ರಂಭೆಯೋ ಅಲ್ಲ
ಉರಿಯುವ ಕಣ್ಣ ಕೆಂಡವಾಗುತ್ತಿಯಾ[೫]

(ಶಿಲಾಸುಭದ್ರಾ ದೇವಿ, ಶಿಲಾಸುಭದ್ರ ದೇವಿ ಕವತ್ವಂ (ಸಮಗ್ರ), ಪುಟ-೨೧೮)

ಈ ಕವನದಲ್ಲಿ ಒಂದೊಂದು ಕಾಲದಲ್ಲಿಯೂ ಪುರುಷರಿಂದ ಅನ್ಯಾಯಕ್ಕೆ, ಮೋಸಕ್ಕೆ ಒಳಗಾದ ಸ್ತ್ರೀಯರನ್ನು ನೆನಪಿಸಿಕೊಳ್ಳಲಾಗಿದೆ. ದಮಯಂತಿಯನ್ನು ಒಂಟಿಯಾಗಿ ಅರಣ್ಯದಲ್ಲಿ ಬಿಟ್ಟು ಹೋದ ನಳ, ಸೀತೆಯನ್ನು ತೊರೆದ ಶ್ರೀರಾಮ, ದ್ರೌಪದಿಯನ್ನು ಜೂಜಿನಲ್ಲಿ ಪಣಕ್ಕಿಟ್ಟು ಸೋತ ಧರ್ಮರಾಯ, ಚಂದ್ರಮತಿಯನ್ನು ಮಾರಾಟ ಮಾಡಿದ ಹರಿಶ್ಚಂದ್ರ ಇವರೆಲ್ಲ ಇಂದು ಲೋಕ ಪೂಜ್ಯರಾಗಿದ್ದಾರೆ. ಆದರೆ ಕವಯತ್ರಿ ಇವರೆನ್ನೆಲ್ಲ ಅಪರಾಧಿಗಳನ್ನಾಗಿಸಿದ್ದಾರೆ. ಹೀಗೆ ಪೂಜೆಗೊಳ್ಳುತ್ತಿರುವ ಮಹಾಪುರುಷರನ್ನೂ, ದೈವಾಂಶ ಸಂಭೂತರನ್ನೂ ಸ್ತ್ರೀವಾದಿ ದೃಷ್ಟಿಯಿಂದ ಪರಿಶೀಲಿಸಿ ಅವರ ವ್ಯಕ್ತಿತ್ವ ಮತ್ತು ನಡವಳಿಕೆಗಳನ್ನು ಖಂಡಿಸಲಾಗಿದೆ. ಹೀಗೆ ಖಂಡಿಸುವ ಮೂಲಕ ತನ್ನನ್ನು ತಾನು ಆವಿಷ್ಕರಿಸಿಕೊಳ್ಳಬಹುದು ಎಂಬ ಚಿಂತನೆಯನ್ನು ಈ ಕವಿತೆಯಲ್ಲಿ ವ್ಯಕ್ತಪಡಿಸಿದ್ದಾರೆ.

ಕುರು ಸಭೆಯಲ್ಲಿ ಐದು ಜನ ಗಂಡಂದಿರಿದ್ದರೂ ದುಶ್ಯಾಸನನಿಂದ ವಸ್ತ್ರಾಪಹರಣಕ್ಕೆ ಗುರಿಯಾದ ದ್ರೌಪದಿಯ ಅಸಹಾಯಕ ಸ್ಥಿತಿಯು ಬರಿ ದ್ರೌಪದಿಯದಾಗದೆ ಇಂದಿನ ಅನೇಕ ಮಹಿಳೆಯರ ಸ್ಥಿತಿಗತಿಯು ಆಗಿದೆ ಎಂಬುದನ್ನು ತುರ್ಲಪಾಟಿ ರಾಜೇಶ್ವರಿ ಅವರು 'ಎರುಪೆಕ್ಕಿನ ಕನ್ನುಲತೊ ಟೈಗ್ರಸ್' ಕವಿತೆಯಲ್ಲಿ ವ್ಯಕ್ತಪಡಿಸಿದ್ದಾರೆ.

ಮೌನವು ಎಲ್ಲಾ ವೇಳೆಯಲ್ಲಿ ಕೂಡದು
ಕುರು ಸಭೆಯಲ್ಲಿ ಕುಲವಧುವಿಗೆ
ಅವಮಾನ ಜರುಗಿದಾಗ
ತಡೆಯಲಾಗದ ಅಸಹಾಯಕತೆಗೆ
ತ್ಯಾಗಧನನು-ಮಹಾವೀರನು-ಭೀಷ್ಮನು
ಸಲ್ಲಿಸಿದ ಭಾರಿ ಬೆಲೆ
ಶರಶಯ್ಯೆಯ ಭೋಗ![೬]

(ತುರ್ಲಪಾಟಿ ರಾಜೇಶ್ವರಿ, ಗಾಯಾಲು ಚೆಟ್ಟು, ಪುಟ-೩)

ಕುರು ಸಭೆಯಲ್ಲಿ ಹೆಣ್ಣಿಗೆ ಅವಮಾನ ಜರುಗುತ್ತಿದ್ದರೂ, ಅದನ್ನು ನೋಡಿ ಸುಮ್ಮನಿದ್ದ ಭೀಷ್ಮನಂತಹ ಮಹಾವೀರನು ಮುಂದೆ ಯುದ್ಧದಲ್ಲಿ ಸೋತು ಶರಶಯ್ಯಾದಲ್ಲಿ ಮಲಗುವ ಭಾರಿ ಪುಣ್ಯ ಲಭಿಸಿತು ಎಂದು ವ್ಯಂಗ್ಯಪೂರಿತ ನೆಲೆಯಲ್ಲಿ ಕೋಪವನ್ನು ವ್ಯಕ್ತಪಡಿಸಿದ್ದಾಳೆ. ಪ್ರಾಚೀನ

ಕಾಲದಿಂದಲೂ ಪುರುಷ ಪ್ರಧಾನ ವ್ಯವಸ್ಥೆಯು ಮಹಿಳೆಯರನ್ನು ಹೇಗೆ ಶೋಷಣೆ ಮಾಡಿದೆ, ಅವರಿಗೆ ಅನ್ಯಾಯ ಮಾಡಿದೆ ಎಂಬುದನ್ನು ಮೇಲಿನ ಕವನದ ಸಾಲಿನ ತುಣುಕುಗಳಿಂದ ವೇದ್ಯವಾಗುತ್ತದೆ. ಇವರದೆ ಇನ್ನೊಂದು ಕವಿತೆ 'ಭೂಮಾತ ಸಾಕ್ಷಿಗಾ–ಕಂಸಹಿಂಸ' ಎಂಬ ಕವನದಲ್ಲಿ ಮಹಿಳೆಯರ ದುಃಖ ಸಂಕಟಗಳು ಶಾಶ್ವತವೂ ನಿರಂತರವೂ ಆಗಿವೆ ಎಂಬುದನ್ನು ಸಮರ್ಥವಾಗಿ ಪುರಾಣ ಪ್ರತಿಮೆಗಳ ಮೂಲಕ ಅಭಿವ್ಯಕ್ತಿಸಿದ್ದಾರೆ.

ಬೀದಿ ಬೀದಿಯಲ್ಲಿ ಅಭಿನವ ಕಂಸರಂತೆ
ಕೇರಿ ಕೇರಿಯಲ್ಲಿ ಅಭಿನವ ದುಶ್ಯಾಸನರು
ತಿರುವು ತಿರುವಿನಲ್ಲಿ ಅಪರ ಸೈಂಧವರು
'ಇಂದಿರುವವರು ಅಂದಿಲ್ಲದಂತೆ' ದರ್ಶನವೀಯುತ್ತಲೇ ಇದ್ದಾರೆ
ಅಭಿನವ ಕಂಸನಾರಾದರೂ ಆಗಬಹುದು[೭]

(ತುರ್ಲಪಾಟಿ ರಾಜೇಶ್ವರಿ, ಗಾಯಾಲು ಚೆಟ್ಟು, ಪುಟ–೮೩)

ಸತಿಸಹಗಮನ, ಹೆಣ್ಣು ಶಿಶುಹತ್ಯೆ, ಅತ್ಯಾಚಾರದಂತಹ ಸಮಸ್ಯೆಗಳನ್ನು ಪುರಾಣ ಹಾಗೂ ಇತಿಹಾಸ ಪ್ರತಿಮೆಗಳ ಮೂಲಕ ವಿವರಿಸಿ ಅದಕ್ಕೆ ದುಶ್ಯಾಸನ, ಕಂಸ, ಸೈಂಧವರನ್ನು ಉದಾಹರಣೆ ಕೊಟ್ಟಿದ್ದಾರೆ. ಪುರಾಣದ ಈ ಪುರುಷ ಪ್ರತಿಮೆಗಳು ಇಂದು ಗಂಡ, ತಂದೆ, ಸೋದರ ಮಾವ ಯಾರಾದರೂ ಆಗಬಹುದು. ಪ್ರಾಚೀನ ಕಾಲದಲ್ಲಿ ಆರಂಭಗೊಂಡ ಸ್ತ್ರೀ ಶೋಷಣೆ ಮಧ್ಯಯುಗದಲ್ಲಿ ಪರಾಕಾಷ್ಠೆ ತಲುಪಿತು ಎಂಬುದಕ್ಕೆ ಇತಿಹಾಸ, ಪುರಾಣಗಳೇ ಸಾಕ್ಷಿಯಾಗಿವೆ. ಆಧುನಿಕ ಯುಗದಲ್ಲಿಯೂ ಸ್ತ್ರೀಯರ ಸ್ಥಿತಿ ಉತ್ತಮವಾಗಿಲ್ಲ ಎಂಬುದನ್ನು ಈ ಕವನ ಧ್ವನಿಸುತ್ತದೆ.

ನಮ್ಮ ಸಂಸ್ಕೃತಿಯಲ್ಲಿನ ಹಾಗೂ ಪುರಾಣಗಳಲ್ಲಿನ ಪಾತ್ರಗಳ ಕಲ್ಪನೆಯು ಮಾನವ ಸಮಾಜದ ಪ್ರತಿರೂಪ ಎಂಬುದರಲ್ಲಿ ಸಂಶಯವಿಲ್ಲ. ಹಾಗಾಗಿ ಅಲ್ಲಿಯೂ ಪುರುಷ ಪ್ರಧಾನ ಸಮಾಜದ ಲಕ್ಷಣಗಳು ಪ್ರತಿಬಿಂಬಿತವಾಗಿವೆ. ಮನುಷ್ಯರಲ್ಲಿರುವಂತೆಯೇ ಪುರಾಣ ಪಾತ್ರಗಳಲ್ಲಿಯೂ ಸ್ತ್ರೀ ಶೋಷಣೆ ಇದೆ. ಇಂದು ನಾವು ಕಾಣುವ ಶಿಲ್ಪ ಚಿತ್ರ ಮತ್ತು ಪೌರಾಣಿಕ ಸಾಹಿತ್ಯದಲ್ಲಿ ಸ್ತ್ರೀ ಶೋಷಣೆ ಸ್ಪಷ್ಟವಾಗಿ ಕಾಣುತ್ತದೆ. ರಾಮಾಯಣದಲ್ಲಿ ಸೀತೆಯ ಪಾತ್ರ ಇದಕ್ಕೆ ಸ್ಪಷ್ಟ ನಿದರ್ಶನವಾಗಿದೆ.

ಬಿಲ್ಲು ಮುರಿದವನು ಸೀತಾರಾಮನೆಂದು
ಸುಗುಣಾಭಿ ರಾಮನೆಂದು ಕೀರ್ತಿಸಿದ್ದನ್ನು ಕೇಳಿ
ಆನಂದಬಾಷ್ಪಗಳನ್ನು ಸುರಿಸಿದೆ
ಅಪನಿಂದನೆಯನು ಸಂಶಯಿಸದೆ ನೋಡಬೇಕೆಂದು ನೋಡದೆ
ಕಗ್ಗಾಡಿಗೆ ಬಿಟ್ಟು ಬಾ ಎಂದು ಆಜ್ಞಾಪಿಸಿದರೆ...ಅವನು
ಅವ್ಯಕ್ತನು, ನಿರ್ಭಯನು, ಕೀರ್ತಿಕಾಮನೆ ಹೊರತು
ಸೀತಾರಾಮನು ಅಲ್ಲವೆಂದು...ದುಃಖಾಶ್ರುಗಳನ್ನು ಸುರಿಸಿದೆ[೮]

(ಓಲ್ಗಾ, ನಿಲಿ ಮೇಘಾಲು, ಪುಟ, ೧೩೮)

ಸೀತೆಯ ಸ್ವಯಂವರದಲ್ಲಿ ಬಿಲ್ಲು ಮುರಿದವ ರಾಮನೆಂದು, ಸುಗುಣನೆಂದು ಕೀರ್ತಿಸುವುದನ್ನು ಕೇಳಿದ ಸೀತೆಯು ಆನಂದ ಭಾಷ್ಪವನ್ನು ಸುರಿಸುತ್ತಾಳೆ. ಅದೇ ರಾಮ ರಾವಣನ ಸೆರೆಯಿಂದ ಬಿಡಿಸಿಕೊಂಡು ಬಂದಾಗ ಅವಳ ಶೀಲವನ್ನು ಶಂಕಿಸಿ ಕಾಡಿಗೆ ಬಿಟ್ಟುಬರಲು ಆದೇಶಿಸಿದಾಗ ರಾಮನ ಮೇಲೆ ಸೀತೆಗೆ ಇದ್ದಂತಹ ಪೂಜನೀಯ ಭಾವನೆಗಳೆಲ್ಲ ಮಣ್ಣಾಗುತ್ತವೆ. ಇಲ್ಲಿ ಸೀತೆಯೇ ಹೇಳುವಂತೆ ರಾಮನು ಕೀರ್ತಿಕಾಮನೆ ಹೊರತು, ಸೀತಾರಾಮನಲ್ಲವೆಂದು ಪ್ರತಿಭಟನೆಯನ್ನು ವ್ಯಕ್ತಪಡಿಸಿದ್ದಾಳೆ. ಶತಶತಮಾನಗಳಿಂದ ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣೊಬ್ಬಳ ಬೇಕು ಬೇಡಗಳು ಪುರುಷನನ್ನೇ ಅವಲಂಭಿಸಿದ್ದ ಸ್ಥಿತಿಯು ಸೂಚಿತವಾಗುತ್ತದೆ. ಇದಲ್ಲದೆ ವಂಶಪ್ರತಿಷ್ಠೆಯ ಮನೋಭಾವನೆ ಹೇಗೆ ಹೆಣ್ಣೊಬ್ಬಳ ಬದುಕಿನಲ್ಲಿ ಕನಸುಗಳನ್ನು ತುಳಿದಿವೆ ಎಂಬುದಿಲ್ಲಿ ವ್ಯಕ್ತವಾಗಿದೆ.

ಹೆಣ್ಣಿಗೆ ರಕ್ಷಣೆ ಒದಗಿಸಬೇಕಾದುದು ಗಂಡಿನ ಕರ್ತವ್ಯ. ಇದು ಪಾರಂಪರಿಕ ನಿಯಮ. ಆದರೆ ಅದೇ ಪುರುಷ ಹೆಣ್ಣಿನ ಪಾಲಿಗೆ ರಕ್ಷಕನಾಗುವ ಬದಲಿಗೆ ಕಂಟಕ ಪ್ರಾಯನಾಗಿ ಪರಿವರ್ತನೆಯಾಗುವುದು ಒಂದು ದುರಂತವೇ ಸರಿ. ಇಂಥ ಸ್ಥಿತಿಯನ್ನು ಖಂಡಿಸಲು ರತ್ನಮಾಲ ಅವರು 'ಸ್ಮಶಾನ ಸೌಂದರ್ಯಂ' ಎಂಬ ಕವನದಲ್ಲಿ ಪುರಾಣ ಪ್ರತೀಕಗಳನ್ನು ಬಳಸಿಕೊಂಡಿದ್ದಾರೆ.

ಮೈಯೆಲ್ಲಾ ಕಣ್ಣುಗಳಿರಬೇಕಾಗಿದ್ದು  
ಅಹಲ್ಯೆಯರಿಗೆ, ವರೂಧಿನಿಯರಿಗೆ  
ಇಂದ್ರ, ಚಂದ್ರ, ಕೀಚಕರಿಗಲ್ಲ  
ಮೈಯೆಲ್ಲಾ ಕಣ್ಣಿರಬೇಕಾದದ್ದು ಹೆಂಗಸರಿಗೆ  
ಅಕ್ಕತಂಗಿ ಅನ್ನುತ್ತಲೇ ಹೆಂಗಸೆಂದರೆ ಅನುಭವಿಸುವುದೇ ಎಂದುಕೊಳ್ಳುವ ಕಡೆ  
ಮೈಯೆಲ್ಲಾ ಕಣ್ಣೇ ಅಲ್ಲ ಮುಳ್ಳುಗಳಿರಬೇಕು'  
(ಶಿಲಾಸುಭದ್ರಾ ದೇವಿ, ಭಾರ್ಗವಿ ರಾವು (ಸಂಪಾದನೆ) ಮುದ್ರ, ಪುಟ-೧೦೪)

ಮೈತುಂಬ ಕಣ್ಣುಗಳು ಇರಬೇಕಾದದ್ದು ಇಂದ್ರ, ಚಂದ್ರ, ಕೀಚಕರಿಗಲ್ಲ ಅಹಲ್ಯಾ, ವರೂಧಿನಿಯರಿಗೆ ಹೆಣ್ಣೆಂದರೆ ಸಾಕು ಅನುಭವಿಸಬೇಕೆಂದುಕೊಳ್ಳುವ ವಿಕೃತ ಮನಸ್ಸಿನ ಪುರುಷರಿಂದ ತಪ್ಪಿಸಿಕೊಳ್ಳಲು ಕಣ್ಣುಗಳಲ್ಲದೆ ಮುಳ್ಳುಗಳು ಸಹ ಇರಬೇಕು ಎಂಬುದು ಕವಯಿತ್ರಿಯ ನಿಲುವು. ನೂರಾರೂ ವರ್ಷಗಳಿಂದ ಪುರುಷರ ದೌರ್ಜನ್ಯಕ್ಕೆ ಒಳಗಾಗಿ ನಲುಗುತ್ತಿರುವ ಮಹಿಳೆಯರ ಸ್ಥಿತಿಯನ್ನು ಕವಯಿತ್ರಿ "ಸ್ಮಶಾನ ಸೌಂದರ್ಯಂ" ಎಂಬ ಕವನದಲ್ಲಿ ಅಭಿವ್ಯಕ್ತಿಸಿದ್ದಾರೆ. ಪುರುಷರ ಶೋಷಕ ಪ್ರವೃತ್ತಿಯ ವಿರುದ್ದದ ಆಕ್ರೋಶವೂ ಇಲ್ಲಿ ವ್ಯಕ್ತವಾಗಿದೆ.

ಆಧ್ಯಾತ್ಮಿಕ ಕ್ಷೇತ್ರದಲ್ಲಿ ಪುರುಷನ ಪಾತ್ರ ಪ್ರಧಾನವಾಗಿದ್ದು, ಸ್ತ್ರೀಪಾತ್ರಗಳು ತೀರ ಗೌಣವಾಗಿದೆ ಎಂಬುದಕ್ಕೆ ನಮ್ಮ ಪುರಾಣ ಮತ್ತು ಇತಿಹಾಸಗಳು ಸಾಕ್ಷಿಯಾಗಿವೆ. ಮಹಿಳೆಗೆ ಆಧ್ಯಾತ್ಮಿಕ ಸಾಧನೆ ಸಾಧ್ಯವಾಗದೇ ಇದ್ದಾಗ ಆಕೆ ಲೌಕಿಕ ಸುಖಗಳನ್ನು ಅನುಭವಿಸುವ ಅವಕಾಶವಿರಬೇಕಿತ್ತು. ಆದರೆ ಪುರುಷರು ತಮ್ಮ ಸಾಧನೆಗೆ ಸ್ತ್ರೀಯರನ್ನು ಸಂಗಾತಿಗಳನ್ನಾಗಿಸಿಕೊಳ್ಳುವುದರಿಂದ ಅವರು ಎಲ್ಲ

ತರಹದ ಲೌಕಿಕ ಸುಖ, ಆಸೆ, ಆಕಾಂಕ್ಷೆಗಳಿಂದ ವಿಮುಕಗೊಳ್ಳುವುದು ಅನಿವಾರ್ಯವಾಗುತ್ತದೆ. ಇದು ಸ್ತ್ರೀ ಶೋಷಣೆಯ ಇನ್ನೊಂದು ಮುಖವಾಗಿದೆ. ಇಂಥ ಶೋಷಣೆಗೆ ಪುರಾಣ ಕಾಲದಿಂದಲೂ ಅನೇಕ ಸ್ತ್ರೀಯರು ಒಳಗಾಗಿದ್ದರೆ. ಈ ರೀತಿಯ ಶೋಷಣೆಯನ್ನು ಪುಟ್ಟಪರ್ತಿಕನಕಮ್ಮ ವಿಷಾದದ ನೆಲೆಯಲ್ಲಿ ಈ ಕವನದಲ್ಲಿ ದಾಖಲಿಸಿದ್ದಾರೆ.

ಅವನು ಬ್ರಹ್ಮರ್ಷಿಯೆಂದು ಎಲ್ಲಿಲ್ಲದಾ ಭಕ್ತಿ
ಬಾಡಿದ ರಸತಂದ್ರ ಭಾವನೆಗಳ ಕುರಿತು
ಅವನನ್ನು ಕೀರ್ತಿಸಬೇಡ ಸಖಿ!
ಅವನೆತ್ತಿದ ಭವದಿಯ ಚರಿತ ನಾವಾದೆವಮ್ಮ?
.........................................................
ಆಸೆಯು ನಿರಾಸೆಯನ್ನು ಕೂಡಿದರೆ ಶೋಕ
ವಿಧುರವಾಗಿ ತೇವವಿಲ್ಲದ ನಿನ್ನ ತುಟಿಗಳಲ್ಲಿ
ಅಂದು ನೀಡಿದ ನಗು ಇಂದೂ ಕೂಡ
ಕಾಲವನ್ನು ಅಣಕಿಸುವಾಗ ಕರುಣೆತೋರು[೧೦]

(ಶಿಲಾಸುಭದ್ರಾ ದೇವಿ, ಭಾರ್ಗವಿ ರಾವು (ಸಂಪಾದನೆ) ಮುದ್ರ, ಪುಟ–೪೫,೪೬)

ಇಲ್ಲಿ ಋಷಿಯ ಸಂತತನಕ್ಕೆ ಸಾಧನೆಗೆ ಋಷಿಯ ಪತ್ನಿ ತನ್ನ ಲೌಕಿಕ ಬದುಕನ್ನು ತ್ಯಾಗ ಮಾಡಿರುವುದರ ಚಿತ್ರವಿದೆ. ತನಗೆ ಇಷ್ಟವಿಲ್ಲದ ಬದುಕಿಗೆ ತನ್ನನ್ನು ತೆತ್ತು ಕೊಂಡಿರುವಲ್ಲಿನ ನೋವು, ವೇದನೆ ಹಾಗೂ ಪುಟಿದೇಳುವ ತಾರುಣ್ಯ ಸಹಜ ಬಯಕೆಗಳನ್ನು ಹತ್ತಿಕ್ಕಿದಾಗಿನ ಹೆಣ್ಣಿನ ಯಾತನೆಯ ಸ್ಥಿತಿಯನ್ನು ಕವನ ಪರಿಣಾಮಕಾರಿಯಾಗಿ ಹಿಡಿದಿಟ್ಟಿದೆ. ಆಧ್ಯಾತ್ಮಿಕ ಕ್ಷೇತ್ರದಲ್ಲಿನ ಸ್ತ್ರೀ ಶೋಷಣೆಯನ್ನು ಚಿತ್ರಸುವ ಮೂಲಕ, ಸ್ತ್ರೀಯರಿಗೆ ವಿಧಿಸಿರುವ ಒತ್ತಾಯದ ಆಧ್ಯಾತ್ಮಿಕ ಬದುಕನ್ನು ಕವಯತ್ರಿ ಪ್ರಶ್ನಿಸಿದ್ದಾರೆ. ಪರಂಪರಾಗತವಾದ ಆಧ್ಯಾತ್ಮಿಕ ಜೀವನವನ್ನು ಸಹ ಕವಯತ್ರಿ ಸ್ತ್ರೀವಾದಿ ದೃಷ್ಟಿಕೋನದಿಂದ ವಿಮರ್ಶಿಸುತ್ತಾರೆ.

ಮಹಿಳೆಯರ ವಿಮೋಚನೆ ಇಲ್ಲವೆ ಸುಧಾರಣೆಯ ಪ್ರಾಥಮಿಕ ಹಂತವಾಗಿಯೇ ಸ್ತ್ರೀವಾದಿಗಳು ಪಿತೃಪ್ರಧಾನ ಸಂಸ್ಕೃತಿಯಲ್ಲಿನ ಸ್ತ್ರೀ ಶೋಷಣೆಯನ್ನು ಅನಾವರಣಗೊಳಿಸಿದ್ದಾರೆ. ಆ ಮೂಲಕ ಸ್ತ್ರೀಯರಲ್ಲಿ ಜಾಗೃತಿ ಮೂಡಿಸಲೆತ್ನಿಸಿದ್ದಾರೆ. ಈ ಸ್ತ್ರೀ ಶೋಷಣೆಯ ನಿದರ್ಶನಗಳನ್ನು ಪುರಾಣೇತಿಹಾಸಗಳಿಂದ ತೆಗೆದು ಓರೆಗೆ ಹಚ್ಚಿ ಪರಿಶೀಲಿಸಿದ್ದಾರೆ. ಅರಮನೆಗಳಲ್ಲಿ, ಭೋಗ ಜೀವನದ ನಡುವೆಯೂ ಅಲ್ಲಿನ ಸ್ತ್ರೀಯರು ಶೋಷಣೆಗೀಡಾಗಿರುವುದನ್ನು ಪ್ರಸ್ತಾಪಿಸುತ್ತ ಇಂದಿನ ಆಧುನಿಕ ಮಹಿಳೆಯ ಬದುಕು ಸಹ ಇವರಿಗಿಂತ ಭಿನ್ನವಾಗಿರದ ಪರಿಯನ್ನು ಕೊಂಡೆಪೊಡಿ ನಿರ್ಮಲ ಅವರು 'ಮೂಸಿದಾಟಿಂಚಂಡಿ' ಕವಿತೆಯಲ್ಲಿ ದಾಖಲಿಸಿದ್ದಾರೆ.

ಅಂತಃಪುರಗಳು ಹತ್ತಿಕೊಂಡು ಹೋದರೂ
ಅಪಮಾನಾಗ್ನಿಯಲಿ ಬಿದ್ದು ದಹನವಾಗುತ್ತಿರುವ ರಾಣಿ ಪದ್ಮಿನಿಯರು
ಚೆದುರಿ ಬಿದ್ದ ದ್ರೌಪದಿ ಕೇಶಗಳಾಗಿ
ಲಾಜಧಾನಿಯ ನೊಸಲಲ್ಲಿ ಜೋತಾಡುವವರು[೧೧]

(ಕೊಂಡೆಪೋಡಿ ನಿರ್ಮಲ, ಕೊಂಡೆಪೋಡಿ ನಿರ್ಮಲ ಕವಿತ್ವಂ(ಸಮಗ್ರ), ಪು-೧೨೪)

ಪುರಾಣಗಳಲ್ಲಿನ ದ್ರೌಪದಿ, ಪದ್ಮಿನಿಯರ ಬದುಕು ಪಿತೃಪ್ರಧಾನ ಸಂಸ್ಕೃತಿಯ ಸ್ವಾರ್ಥ, ಮೊಸಕ್ಕೆ ಗುರಿಯಾದಂತೆ ಇಂದು ಆಧುನಿಕ ಯುಗದಲ್ಲಿಯೂ ಮಹಿಳೆಯ ಬದುಕು ಈ ವ್ಯವಸ್ಥೆಯ ದೌರ್ಜನ್ಯ ಶೋಷಣೆಗೆ ಗುರಿಯಾಗಿದೆ. ಸಾಮಾಜಿಕ ವ್ಯವಸ್ಥೆಯಲ್ಲಿನ ಲಿಂಗತಾರತಮ್ಯ ನೀತಿ, ಅಸಮಾನತೆ, ಸ್ತ್ರೀಯರ ಪರಾವಲಂಬನೆ, ಸ್ವಾತಂತ್ರ್ಯ ರಹಿತ ಸ್ತ್ರೀಜೀವನದ ಬಗೆಗೆ ಕವಯಿತ್ರಿ ಅಸಮಾಧಾನ ಹೊಂದಿದ್ದಾರೆ. ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿನ ಅನೇಕ ಸನಾತನ ಮೌಲ್ಯಗಳು ಬಹುತೇಕ ಸ್ತ್ರೀ ವಿರೋಧಿಯಾಗಿದ್ದು, ಸ್ತ್ರೀ ಶೋಷಣೆಗೆ ದಾರಿ ಮಾಡಿಕೊಟ್ಟಿವೆ. ಆದ್ದರಿಂದ ಮಹಿಳೆಯರ ಬದುಕಿಗೆ ಮಾರಕವಾಗಿರುವ ಇಂಥ ಮೌಲ್ಯಗಳನ್ನು ನಾಶಗೊಳಿಸಬೇಕೆಂದು ಕವಯತ್ರಿ ಕರೆಕೊಟ್ಟಿದ್ದಾರೆ.

ಕನ್ನಡ, ತೆಲುಗಿನ ಸ್ತ್ರೀವಾದಿ ಕವಯತ್ರಿಯರು ಪುರಾಣ, ಮಹಾಕಾವ್ಯಗಳಲ್ಲಿನ ಸೀತೆ, ದ್ರೌಪದಿ, ಮಾಧವಿಯಂಥ ಶೋಷಿತ ಮಹಿಳೆಯಯರನ್ನು ಇಂದಿನ ಸಮಾಜದ ಮಹಿಳೆಯರ ಶೋಷಣೆಯ ಪ್ರತೀಕಗಳನ್ನಾಗಿ ತೆಗೆದುಕೊಂಡಿದ್ದಾರೆ. ಈ ಹಿನ್ನೆಯಲ್ಲಿ ಇಂಥಹ ಪೌರಣಿಕ ಸ್ತ್ರೀಪಾತ್ರಗಳನ್ನು ಮತ್ತು ಘಟನೆಗನ್ನು ಆಧುನಿಕ ಸ್ತ್ರೀವಾದಿ ದೃಷ್ಟಿಕೋನದಿಂದ ಪರಿಶೀಲಿಸಿ ಬಂಜಿಸುವ ಮೂಲಕ ಪ್ರಾಚೀನ ಭಾರತದ ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ ನಡೆಯುತ್ತಿದ್ದ ಮಹಿಳಾ ಶೋಷಣೆಯನ್ನು ಸಮಕಾಲೀನ ಸಮಾಜಕ್ಕೆ ತಿಳಿಸಿಕೊಡುವುದರ ಜೊತೆಗೆ ಇಂದಿನ ಮಹಿಳೆಯರಲ್ಲಿ ಜಾಗೃತಿ ಮೂಡಿಸುವ ಉದ್ದೇಶವನ್ನು ಹೊಂದಲಾಗಿದೆ. ಹಿಂದೆ ಅನ್ಯಾಯಕ್ಕೊಳಗಾಗಿರುವ ಪೌರಾಣಿಕ ಸ್ತ್ರೀಪಾತ್ರಗಳನ್ನು ಬಂಡಾಯಗಾರ್ತಿಯರನ್ನಾಗಿಸುವುದರ ಮೂಲಕ ಅವುಗಳಿಗೆ ನ್ಯಾಯ ಒದಗಿಸಿ ತಮಗೇ ನ್ಯಾಯ ಸಿಕ್ಕ ಅನುಭವ ಕವಯತ್ರಿಯರದ್ದು. ಇಲ್ಲಿ ಪುರಾಣದ ಮೌಲ್ಯಗಳನ್ನು ನಿರಾಕರಿಸುವ ಮೂಲಕ ಹೆಣ್ಣನ್ನು ಪಾರಂಪರಿಕ ಮೌಲ್ಯಗಳಿಂದ ಆಳುವ ಕಲ್ಪನೆಯನ್ನೇ ಧಿಕ್ಕರಿಸಿದ್ದಾರೆ.

# ಅಧ್ಯಾಯ : ಏಳು

# ಕನ್ನಡ–ತೆಲುಗು ಸ್ತ್ರೀವಾದಿ ಕಾವ್ಯದಲ್ಲಿ ಇತರೆ ಸಾಮಾಜಿಕ ಪ್ರಶ್ನೆಗಳು

ಸ್ತ್ರೀವಾದಿ ಚಿಂತನೆಗಳಿಗೆ ಬಹಳ ದೀರ್ಘ ಇತಿಹಾಸವಿದೆ. ಸ್ತ್ರೀವಾದಿ ಚಿಂತನೆಗಳು ಆಧುನಿಕ ಮಹಿಳಾ ವಿಮೋಚನಾ ಚಳವಳಿಯ ಜೊತೆಯಲ್ಲಿ ಇದ್ದಕ್ಕಿದ್ದಂತೆ ಉದ್ಭವಿಸಿದವಲ್ಲ. ಮಹಿಳೆಯರ ಆಲೋಚನೆಗಳ ಅಭಿವ್ಯಕ್ತಿಗಳು ಒಂದು ಅಂಚಿಗೆ ಒತ್ತರಿಸಲ್ಪಟ್ಟವು. ಇಲ್ಲವೆ ಗುಪ್ತವಾಗೆ ಉಳಿದು ಕಣ್ಮರೆಯಾದವು. ಕೆಲವೊಮ್ಮೆ ಸ್ತ್ರೀವಾದಿ ಬರಹಗಾರ್ತಿಯರ ಬರಹಗಳು ಅಲ್ಪಕಾಲದ ಮನ್ನಣೆಯನ್ನು ಗಳಿಸಿದ ನಂತರದ ದಿನಗಳಲ್ಲಿ ಚಿಂತನೆಯ ಪರಂಪರೆಯನ್ನು ಬೆಳೆಸಲು ಅಸಮರ್ಥವಾಗಿ ಒಂಟಿದನಿಯಾಗಿ ಉಳಿಯುತ್ತವೆ. ಆದರೆ ಬದಲಾದ ಸಾಂಸ್ಕೃತಿಕ ಸನ್ನಿವೇಶಗಳಿಂದ ಸ್ತ್ರೀವಾದಿ ಬರಹಗಳು ಅಥವಾ ವಾಗ್ವಾದಗಳು ಅವಗಣನೆಯ ಬಿರುಗಾಳಿಯನ್ನು ಎದುರಿಸುತ್ತಲೇ ಗಟ್ಟಿಯಾದ ಪರಂಪರೆಯನ್ನು ಯಶಸ್ವಿಯಾಗಿ ರೂಪಿಸಿಕೊಂಡಿದೆ.

ಸ್ತ್ರೀವಾದವು ಒಂದೇ ಸಮಸ್ಯೆಯ ಸುತ್ತ ಬೆಳೆದ ಏಕಾಕಾರದ ಏಕಸೂತ್ರದ ವಿಚಾರಧಾರೆಯಾಗಿರದೆ ಕಾಲ, ದೇಶ, ರಾಜಕೀಯ ಶಕ್ತಿ, ಭಾಷೆ, ವರ್ಗ, ಜಾತಿ, ಧರ್ಮ ಮುಂತಾದ ರೀತಿಗಳಲ್ಲಿ ಮಹಿಳೆಯರ ಬೇರೆ ಬೇರೆ ಪರಿಸ್ಥಿತಿಗಳಿಗೆ ತಕ್ಕಂತೆ ಬೇರೆ ಬೇರೆಯಾದ ಸಮಸ್ಯೆಗಳ ತಳಹದಿಯ ಮೇಲೆ ಬೆಳೆದಂಥ ಬಹುರೂಪದ ಚಿಂತನೆಗಳನ್ನು ಒಳಗೊಂಡಿದ್ದಾಗಿದೆ. ಜನರ ಪ್ರಜ್ಞಾಪೂರ್ವಕವಾದ ಚಳವಳಿಯನ್ನು ಗುರಿಯಾಗಿಟ್ಟುಕೊಂಡು ಮುನ್ನಡೆಯುವ ಆಧುನಿಕ ತಾತ್ವಿಕತೆಗಳ ನಡುವೆ ಸ್ತ್ರೀವಾದ ಮಹತ್ತರವಾದ ಸ್ಥಾನವನ್ನು ಪಡೆದಿದೆ; ಪಡೆಯುತ್ತಾ ಬಂದಿದೆ.

ಸ್ತ್ರೀವಾದಿ ಲೇಖಕಿಯರು ಸ್ತ್ರೀವಾದದ ಬಗ್ಗೆ ಅಲ್ಲದೆಯೂ ಕೂಡ ಬೇರೆ ಬೇರೆ ಸಾಮಾಜಿಕ ಪ್ರಶ್ನೆಗಳನ್ನು ಕೂಡ ತಮ್ಮ ಕವಿತೆಯ ಒಳಗಡೆ ತಂದು ವಿಶ್ಲೇಷಣೆ ಮಾಡುವ ಪ್ರಯತ್ನ ಮಾಡಿದ್ದಾರೆ. ಸ್ತ್ರೀವಾದವೇ ಮುಖ್ಯವಾದರೂ ಇದುವರೆಗಿನ ಅಧ್ಯಯನಗಳಲ್ಲಿ ಇದನ್ನು ಪ್ರತಿಬಿಂಬಿಸಲಾಗಿದೆ. ಅದರ ಜೊತೆಗೆ ಭಾಷೆ, ಜಾತಿ, ಧರ್ಮದಂತಹ ಪ್ರಶ್ನೆಗಳ ಬಗ್ಗೆಯೂ ಚಿಂತನೆ ಮಾಡಿದ್ದಾರೆ. ಏಕೆಂದರೆ ಮಹಿಳೆಯ ವಿಷಯ ಎನ್ನುವಂತಹದ್ದು ಆ ಬಗೆಯ ಒಂದು ಏಕಾಂತದ ವಿಷಯವಲ್ಲ. ಮಹಿಳೆ ಮಹಿಳೆಯ ಜೊತೆಗೆನೆ ಆಕೆ ಬೇರೆ ಬೇರೆ ವಿಷಯಗಳಿಗೆ ಸಂಬಂಧಪಟ್ಟವಳಾಗಿರುತ್ತಾಳೆ. ಈ ಸಮಾಜದ ಅಂಗವಾಗಿ ಇವಳು ಬೇರೆ ವಿಷಯಗಳಿಗೂ ಕೂಡ ಪ್ರತಿಕ್ರಿಯಿಸಬೇಕು. ಮತ್ತು ಅವರದೇ ಆದ ಅಭಿಪ್ರಾಯಗಳಿರುತ್ತವೆ. ಮಹಿಳೆ ಒಬ್ಬ ಮಹಿಳೆಯಾಗಿರುವುದರ ಜೊತೆಗೆ ಏಕಕಾಲಕ್ಕೆ ಒಂದು ಜಾತಿಯನ್ನು, ಧರ್ಮವನ್ನು ಪ್ರತಿನಿಧಿಸುತ್ತಾಳೆ. ಒಂದು ಆರ್ಥಿಕ

ವಲಯವನ್ನು ಪ್ರತಿನಿಧಿಸುತ್ತಾಳೆ. ಈ ಹಿನ್ನೆಲೆಯಲ್ಲಿ ಕನ್ನಡ-ತೆಲುಗಿನ ಸ್ತ್ರೀವಾದಿ ಕವಯತ್ರಿಯರು ಈ ವಿಷಯಗಳಿಗಿತ್ತಿದ ಹಾಗೂ ಈ ವಿಷಯಗಳನ್ನು ಹೇಗೆ ನೋಡುತ್ತಾರೆ ಎನ್ನುವುದನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

**೧. ಭಾಷೆಯ ಪ್ರಶ್ನೆ :**

ಕನ್ನಡಿಗರಲ್ಲಿ ಹೆಚ್ಚಾಗುತ್ತಿರುವ ಪರಭಾಷಾ ಪ್ರೀತಿ ಮತ್ತು ಸ್ವಭಾಷೆಯ ನಿರ್ಲಕ್ಷ್ಯ ಕುರಿತಂತೆ ಕವಯತ್ರಿ ಲಲಿತಾ ನಾಯಕ್ ಅವರು 'ಕನ್ನಡಮ್ಮನ ಕೊನೆಯ ಮಾತಿನ' ಮೂಲಕ ವಿಷಾದ ವ್ಯಕ್ತಪಡಿಸಿದ್ದಾರೆ. ಕನ್ನಡಿಗರೆ ಇದೋ ನಿಮಗೆ ವಿದಾಯ ಹೇಳುವೆ, ಬಿಕ್ಕಳಿಸದೆ, ತಳಮಳಿಸದೆ ಶುಭವನ್ನೇ ಹಾರೈಸುವೆ. ಹೋಗಿಬಿಡಿ ಆಚೆ, ನನ್ನ ಹೆತ್ತೊಡಲ ಸುಡಬೇಕೆ ನೀವೀಗ ಭಾಷಾ ಪೀಪಾಸುಗಳು ಎಂದು, ಕನ್ನಡ ಭಾಷೆಯ ಬಗ್ಗೆ ನಿರ್ಲಕ್ಷ್ಯ ಧೋರಣೆ ಹೊಂದಿರುವವರನ್ನು ವಿಷಾದದ ನೆಲೆಯಲ್ಲಿ ಹೇಳಿದ್ದಾರೆ.

ಆಂಗ್ಲ ತಾಯಿಯ ಅಪ್ಪಿಕೊಳ್ಳಿ
ಹಿಂದಿಯಮ್ಮನ ಒಪ್ಪಿಕೊಳ್ಳಿ
ತಮಿಳು ತೆಲುಗರ ಕೂಡಿಕೊಳ್ಳಿ
ಮುನಿಸಿಲ್ಲ ನನಗೆ

ಕನ್ನಡ ಭಾಷೆಯ ಬಗೆಗಿನ ನಿರ್ಲಕ್ಷ್ಯದ ಬಾವದಿಂದಾಗಿ ಅಸಹಾಯಕಳಾದ ಕನ್ನಡಮ್ಮ, ಕನ್ನಡಿಗರನ್ನು ಉದ್ದೇಶಿಸಿ ನಾನು ಸ್ವಾಭಿಮಾನಿಯಾಗಿ ಬದುಕಿದವಳು. ನಾನೀಗ ನಿಶ್ಶಕ್ತೆ, ಸತ್ವಹೀನೆ ಹಾಗಾಗಿ ಶಕ್ತಿಯುಳ್ಳವರ ಆಸರೆ ಹಿಡಿಯಿರಿ ಎಂದು ಹೇಳುವ ಮೂಲಕ ಕನ್ನಡ ಭಾಷೆಗೆ ಬಂದೊದಗಿದ ದುಸ್ಥಿತಿಯ ವಿಪರ್ಯಾಸವನ್ನು ಅನಾವರಣ ಮಾಡಿದ್ದಾರೆ. ಹೀಗೆ ಕನ್ನಡ ಭಾಷೆಯ ಪರಿಸ್ಥಿತಿ ಕುರಿತ ಕಳಕಳಿಯೊಂದಿಗೆ ತಮಿಳು, ತೆಲುಗು, ಹಿಂದಿ, ಆಂಗ್ಲಭಾಷೆಯ ಸಂದರ್ಭದಲ್ಲಿ ಕನ್ನಡದ ಅಸ್ತಿತ್ವದ ಸಮಸ್ಯೆಯನ್ನು ಚರ್ಚಿಸಿದ್ದಾರೆ. ಇದೇ ರೀತಿಯ ನಿರ್ಲಕ್ಷ್ಯದ ಮನೋಭಾವ, ಪರಭಾಷಾ ಪ್ರೀತಿ ಮುಂದುವರಿದರೆ ಕನ್ನಡ ಅವಸಾನವಾದಿತೆಂಬ ನಿಲುವನ್ನು

ಸಿಗಲಾರೆ ಖಂಡಿತ ಮರೆತು ಬಿಡಿ
ನನ್ನವಸಾನದ ವಿವರ ಸಿಕ್ಕರೂ ಸಿಕ್ಕೀತು
ಇತಿಹಾಸ ಪುಟಗಳಲಿ ಹುಡುಕಿಕೊಳ್ಳಿ

.............................................

ಪ್ರೀತಿ ಇದ್ದರೆ ಮಾತೆಯನ್ನೊಮ್ಮೆ
ನೋಡಿಕೊಳ್ಳಿ
ವಿದಾಯ ಹೇಳುವ ಮುನ್ನ
ಅಪ್ಪಿಕೊಳ್ಳಿ

(ಬಿ.ಟಿ. ಲಲಿತಾ ನಾಯಕ್, ಬಿದಿರು ಮಳೆ ಕಂಟಿಯಲಿ, ಪುಟ-೧೩)

ಎಂದು ಕನ್ನಡ ಭಾಷಾ ಪ್ರಜ್ಞೆ ಕುರಿತ ಜಾಗೃತಿಯ ಬಗ್ಗೆ ಎಚ್ಚರಿಸಿದ್ದಾರೆ. ಇದೇ ಸಂದರ್ಭದಲ್ಲಿ ಕನ್ನಡ ನಾಡಿನಲ್ಲಿ ಕನ್ನಡದ ದೈನೇಸಿ ಪರಿಸ್ಥಿತಿಯನ್ನು ರೂಪಕಾತ್ಮಕ ಚಿತ್ರಣದ ಮೂಲಕ ವಿವರಿಸುವ ಕವಯತ್ರಿ ಇಂಗ್ಲೀಶ್ ಭಾಷೆಯು ಕನ್ನಡವನ್ನು ವಂಚಿಸುತ್ತಿದೆ ಎಂಬ ಆಕ್ರೋಶವನ್ನು 'ಕೊರಗಬೇಡ ಕನ್ನಡಮ್ಮ' ಎಂಬ ಕವನದಲ್ಲಿ ವಿಡಂಬನಾ ನೆಲೆಯಲ್ಲಿ ವ್ಯಕ್ತಪಡಿಸಿದ್ದಾರೆ. ರಾಜ್ಯೋತ್ಸವ ದಿನದಂದು ಆಂಗ್ಲ ಗೆಳತಿಯೊಂದಿಗೆ ವಾಕಿಂಗ್ ಹೊರಟ ಕನ್ನಡಮ್ಮ ಕನ್ನಡ ನಾಡನ್ನೆಲ್ಲ ಸುತ್ತಿ ಬಂದು ವಿಧಾನಸೌಧದ ಮುಂದೆ ನಿಲ್ಲುತ್ತಾಳೆ. ಆಗ ಈ ನಾಡಿನ ಜನ ಆಂಗ್ಲ ಲೇಡಿಗೆ ಅಡ್ಡಬಿದ್ದು ಹಾರ ತುರಾಯಿಗಳಿಂದ ಗೌರವಿಸಿದರೆ ವಿನಃ ಕನ್ನಡಮ್ಮನನ್ನು ಆಧರಿಸಲಿಲ್ಲ. ತನ್ನ ಮಕ್ಕಳ ಉಪೇಕ್ಷೆಯಿಂದ ಬಳಲಿದ ಕನ್ನಡಮ್ಮ ಗಲ್ಲಿಯಲ್ಲಿ ನುಸುಳಿ ತಲೆಸುತ್ತು ಬಂದು ಕೆಳಗೆ ಬಿದ್ದು ಬಿಡುತ್ತಾಳೆ. ಆ ಸಂದರ್ಭದಲ್ಲಿ ಹಿಂದಿಯಮ್ಮ, ತಮಿಳಮ್ಮ, ಮಲೆಯಾಳಿಯಮ್ಮ ಹೀಗೆ ಎಲ್ಲರೂ ಆಂಗ್ಲ ಲೇಡಿಯನ್ನು ಕೂಗಿ ಕರೆದಾಗ ಲೇಡಿ ಬಂದು, ಕನ್ನಡಮ್ಮನ ಸ್ಥಿತಿಯನ್ನು ಕಂಡು,

ಮನೆಯದೆಲ್ಲಾ ಉಸ್ತುವಾರಿ
ನನಗೆ ಇರಲಿ ಖಣ್ಣಡಮ್ಮಾ!
ರಿಯಲಿ ನಿನಗೆ ರೆಸ್ಟು ಬೇಕು
ಮಂಚಬಿಟ್ಟು 'ಏಳಬೇಡ ಮಲಗು' ಎಂದಳು

(ಲಲಿತಾ ನಾಯಕ್ ಬಿ.ಟಿ., ಬಿದಿರು ಮಳೆ ಕಂಟಿಯಲಿ, ಪುಟ-೨)

ನಿನಗೆ ವಿಶ್ರಾಂತಿ ಬೇಕಾಗಿದೆ. ಹಾಗಾಗಿ ಏಳದೆ ಮಲಗಿಬಿಡು ವರ್ಷಕ್ಕೊಮ್ಮೆ ನಿನ್ನ ಹಬ್ಬ ಬಂದೇ ಬರುವುದಲ್ಲಾ ಆಗ ಸಂತೈಸುವೆ, ಕೊರಗಬೇಡ ನಾಡ ಸುತ್ತಿ ಬರುತ್ತೇನೆ ಎಂದು ಲೇಡಿ ದಿಮಾಕಿನಿಂದ ಹೊರಡುತ್ತಾಳೆ. ಇದು ಮಾನಗೆಟ್ಟ ಅಭಿಮಾನ ಶೂನ್ಯ ಕನ್ನಡಿಗರನ್ನು, ಮಂತ್ರಿಗಳನ್ನು, ಅಧಿಕಾರಿಗಳನ್ನು ರಾಜ್ಯೋತ್ಸವ ಶೋಷಕರನ್ನು ತಲೆ ತಗ್ಗಿಸುವಂತೆ ಅವಹೇಳನ ಮಾಡಲಾಗಿದೆ. ಕನ್ನಡ ಭಾಷೆಯ ಮೇಲೆ ಅನ್ಯ ಭಾಷಿಗರ ಆಕ್ರಮಣ ಕುರಿತು ಪ್ರತಿಕ್ರಿಯಿಸಿರುವ ಕವಯತ್ರಿ

ಪರಭಾಷಿಗ ಬಾಂಧವರೆ
...............................
ಪುರಾತನದ ನನ್ನಿ ಕೊತ್ತಳ
ಬಲು ಬಂದೋಬಸ್ತು
ಎಷ್ಟು ತಿಪ್ಪರಲಾಗ ಹಾಕಿದರೂ
ಇದರ ಒಂದು ಕಲ್ಲನ್ನೂ
ನಿನ್ನಿಂದ ಕೆಡವಲಾಗದು, ಭೇದಿಸಲಾಗದು

(ಲಲಿತಾ ನಾಯಕ್ ಬಿ.ಟಿ., ಬಿದಿರು ಮಳೆ ಕಂಟಿಯಲಿ, ಪುಟ-೧೫೧)

ಎಂದು ಪರಭಾಷಾ ಪ್ರಾಬಲ್ಯದ ಸಂದರ್ಭದಲ್ಲಿ ಪ್ರಾಚೀನ ಇತಿಹಾಸವನ್ನು ಹೊಂದಿರುವ ಕನ್ನಡ ಭಾಷೆಯ ಗಟ್ಟಿತನದ ಬೇರನ್ನು ಅಲುಗಾಡಿಸಲು ಸಾಧ್ಯವಿಲ್ಲ. ಈ ಭಾಷೆ ತನ್ನದೇ ಆದ ಅಸ್ತಿತ್ವವನ್ನು ಉಳಿಸಿಕೊಂಡಿರುವುದರಿಂದ ಭದ್ರವಾದ ಈ ಕೋಟೆಯೊಳಗೆ ಯಾರೂ ಭೇದಿಸಿ ಬರಲಾಗದು ಎಂಬ ಮಾತನ್ನು ಹೇಳಿದ್ದಾರೆ. ಕನ್ನಡದ ನೆಲದಲ್ಲಿ ಇಂಗ್ಲೀಶ್ ಭಾಷೆಯ ಪ್ರಭಾವಕ್ಕೆ ಮಣಿದು ತನ್ನತನ ಕಳೆದುಕೊಂಡು ಅಭಿಮಾನ ಶೂನ್ಯವಾಗುವ ಮಂದಿಯತ್ತ ಗಮನಹರಿಸಿರುವ ಲೇಖಕಿ

ಹೆತ್ತಮ್ಮನಿಗೂ ಮಿಗಿಲು ಈ ಮಾಯಿ!
ಅಮ್ಮ ನೆಲಕಚ್ಚಿದರೂ ನಮಗಿಲ್ಲ ಕಾಳಜಿ
.....................................................
ನೀನೆ ಅಲ್ಲವೆ "ಮಮ್ಮಿ"
A to Z ಕಲಿಸಿ ಉದ್ದರಿಸು
ಪಶ್ಚಿಮದತ್ತ ತಿರುಗಿ ನಿಲ್ಲುತ್ತೇವೆ

(ಲಲಿತಾ ನಾಯಕ್ ಬಿ.ಟಿ., ಅಪೀಲು, ಸವಾಸೇರು, ಪು-೨೬)

ಎಂದು ಹೇಳುವ ಮೂಲಕ ಇಂಗ್ಲೀಶ್ ಭಾಷೆಯ ಬಗ್ಗೆ ಉದ್ಧಾರಕ ಶಕ್ತಿಯ ಆರಾಧನೆಯ ಭಾವವನ್ನು ಹೊಂದಿರುವ ಜನರ ಕುರಿತು ವಿಡಂಬನೆಯೊಂದಿಗೆ ವಿಷಾದ ಭಾವವನ್ನು ವ್ಯಕ್ತಪಡಿಸಿದ್ದಾರೆ. ಇಲ್ಲಿ ಆಂಗ್ಲ ಭಾಷೆಗೆ, ತಾಯ್ನುಡಿಗಿಂತಲೂ ಮಿಗಿಲಾದ ಭಾಷಾ ಪ್ರೇಮವನ್ನು ವ್ಯಕ್ತಪಡಿಸುವವರ ಬಗ್ಗೆ ವಿಷಾದವಿದೆ. ಸವಿತಾ ನಾಗಭೂಷಣ ಅವರು ಕನ್ನಡ ಭಾಷೆಯ ಬಗೆಗಿನ ಅಭಿಮಾನ, ಐಕ್ಯತೆ, ಅವಸಾನ, ಕನ್ನಡಿಗನ ಆತ್ಮಾಭಿಮಾನ ಕುರಿತಂತೆ ಹೆಮ್ಮೆ, ಅಭಿಮಾನ, ವಿಷಾದ, ಜಾಗೃತಿಯ ಹಿನ್ನೆಲೆಯಲ್ಲಿ ಕವಿತೆಗಳನ್ನು ರಚಿಸಿದವರಲ್ಲಿ ಒಬ್ಬರಾಗಿದ್ದಾರೆ. 'ಕನ್ನಡವ ನುಡಿ' ಎಂಬ ಕವಿತೆಯಲ್ಲಿ ಕನ್ನಡ ಭಾಷೆಯನ್ನು ಬಳಸಿ ಉಳಿಸಿ ಬೆಳೆಸಬೇಕಾದ ಅನಿವಾರ್ಯತೆಯ ಬಗ್ಗೆ ಹೇಳಿದ್ದಾರೆ.

ಅಪ್ಪ ಅಮ್ಮ ಅನ್ನು
ಕನ್ನಡ ಉಳಿಯುವುದು
ಕಳ್ಳು ಬಳ್ಳಿ ತಾನೆ
ನಂಟನು ಬೆಸೆಯುವುದು
..............................
..............................
ತಾಳು ಬಾಳು ಅನ್ನು
ಕನ್ನಡ ಉಳಿಯುವುದು

ಹಮ್ಮನು ಬಿಟ್ಟರೆ ತಾನೆ
ಒಮ್ಮತ ಮೂಡುವುದು

(ಸವಿತಾ ನಾಗಭೂಷಣ, ದರುಶನ, ಪುಟ–೧೩)

ಕನ್ನಡಿಗರಲ್ಲಿ ಹೆಚ್ಚುತ್ತಿರುವ ಪರಭಾಷಾ ಪ್ರೀತಿ ಮತ್ತು ಸ್ವಭಾಷೆಯ ನಿರ್ಲಕ್ಷ್ಯತೆಯನ್ನು ಖಂಡಿಸುತ್ತ, ಅಪ್ಪ, ಅಮ್ಮ, ಹಳ್ಳ, ಕೊಳ್ಳ, ಗಿಡ, ಮರ, ತಾಳು, ಬಾಳು ಅಂತಹ ದೇಸಿ ಪದ ಸಂಪತ್ತನ್ನು ಬಳಸುವ ಮೂಲಕ ಕನ್ನಡ ಭಾಷೆ ಉಳಿಯುತ್ತದೆ. ಕನ್ನಡ ಭಾಷೆಯ ಅನನ್ಯತೆಯು ಸಾಧ್ಯವಾಗುತ್ತದೆ. ಕನ್ನಡ ಭಾಷೆಯ ಸಾಂಸ್ಕೃತಿಕ ಜಗತ್ತೊಂದು ಗಟ್ಟಿಗೊಳ್ಳಲು ಸಾಧ್ಯ ಎನ್ನುವಂತಹ ವಿಚಾರಗಳನ್ನು ಈ ಕವನದಲ್ಲಿ ವ್ಯಕ್ತಪಡಿಸಿದ್ದಾರೆ.

ಸುಕನ್ಯಾ ಮಾರುತಿ ಅವರು 'ನಾವು' ಕವನದಲ್ಲಿ ಭಾಷಿಕ ನೆಲೆಯೊಳಗೆ ಪ್ರಧಾನವಾಗಿ ಕನ್ನಡ ಮತ್ತು ಇಂಗ್ಲೀಶ್ ಭಾಷೆಯನ್ನು ಮುಖಾಮುಖಿಯಾಗಿಸಿ ಕರ್ನಾಟಕದಲ್ಲಿ ಕನ್ನಡದ ಪ್ರಾಮುಖ್ಯತೆ ಹಾಗೂ ಶ್ರೇಷ್ಠತೆಯನ್ನು ಎತ್ತಿ ಹಿಡಿದಿದ್ದಾರೆ. ಆಂಗ್ಲರು ಚಳವಳಿಗೆ ತಲೆಬಾಗಿ ತೆರಳಿದರೂ ಅವರ ಸಾಂಸ್ಕೃತಿಕ ಹತ್ಯಾರಗಳು ಇಲ್ಲೆ ಖಾಯಂ ಆಗಿ ಉಳಿದುದನ್ನು ಕವಯತ್ರಿ ಹೀಗೆ ಪ್ರತಿಕ್ರಿಯಿಸಿದ್ದಾರೆ.

ತಾಯ್ನುಡಿಯ ಅಡವಿಟ್ಟು
ಪರದೇಶಿಯಾಗಿ
ಹೊರದೇಶ ಭಾಷೆ ಕಡತಂದವರು
ನಾವು ಕೊಡುತಲೆಯ
ಪರಶುರಾಮರು

(ಸುಕನ್ಯಾ ಮಾರುತಿ, ನಾನೆಂಬ ಮಾಯೆ, ಪುಟ–೬೫)

ಕನ್ನಡದ ನೆಲದಲ್ಲಿ ಇಂಗ್ಲೀಶ್ ಭಾಷೆಯ ಪ್ರಭಾವಕೆ ಮಣಿದು ತನ್ನತನ ಕಳೆದುಕೊಂಡು ಅಭಿಮಾನ ಶೂನ್ಯವಾದ ಪರಿಯನ್ನು ಹೇಳುತ್ತ ಕನ್ನಡ ನೆಲದಲ್ಲಿಯೇ ಕನ್ನಡ ಭಾಷೆಯು ಮರೆಯಾಗುತ್ತಿರುವ ಆತಂಕ ಒಂದಾದರೆ ಪರಭಾಷೆಯ ವ್ಯಾಮೋಹಕ್ಕೆ ಒಳಗಾಗಿ ಕನ್ನಡತನವನ್ನು ಸಂಸ್ಕೃತಿಯನ್ನು ತುಚ್ಛವಾಗಿ ನೋಡುವ ಆತಂಕದ ಬಗ್ಗೆ ಕವಯತ್ರಿ ವಿಷಾದವನ್ನು ವ್ಯಕ್ತಪಡಿಸಿದ್ದಾರೆ.

ಕನ್ನಡದ ಸ್ತ್ರೀವಾದಿ ಲೇಖಕಿಯರಂತಯೇ ತೆಲುಗು ಸ್ತ್ರಾವಾದಿ ಲೇಖಕಿಯರು ಸಹ ತೆಲುಗು ಭಾಷೆಗೆ ಬಂದೊದಗಿರುವ ದುಸ್ಥಿತಿ, ವಿಪರ್ಯಾಸವನ್ನು ಕವಿತ್ವೀಕರಿಸಿದ್ದಲ್ಲದೇ, ತೆಲುಗು ಭಾಷೆಯ ಅಸ್ತಿತ್ವದ ಸಮಸ್ಯೆಯನ್ನು ಕುರಿತು ಚರ್ಚಿಸಿದ್ದಾರೆ. ಸಂಯುಕ್ತ ರಾಷ್ಟ್ರಗಳಿಗೋಸ್ಕರ ಅಭಿವೃದ್ಧಿಯ ನೆಪವೊಡ್ಡಿ ನಮ್ಮ ನಾಡಿನಲ್ಲಿ ಇಂಗ್ಲೀಶ್ ಭಾಷೆಯನ್ನು ಒತ್ತಾಯ ಪೂರ್ವಕವಾಗಿ ಕಲಿಸುವ ಮೂಲಕ ಇಲ್ಲಿನ ಜನರನ್ನು ಪಂಜರದ ಗಿಳಿಗಳನ್ನಾಗಿ ಬೆಳೆಸಲಾಗುತ್ತಿದೆ ಎಂಬುದನ್ನು ವಿವರ್ಣಮಾಲ'ಎಂಬ ಕವಿತೆಯಲ್ಲಿ ವಿಷಾದವನ್ನು ವ್ಯಕ್ತಪಡಿಸಿದ್ದಾರೆ.

ಮಾರಾಟಕ್ಕೂ ಖರೀದಿಗೂ ಸೀಮಿತವಾದ
ಕ್ರೂರ ಭಾಷೆ ಸಂಯುಕ್ತ ರಾಷ್ಟ್ರಗಳಿಗೋಸ್ಕರ
ಮಾನವ ಗಿಳಿಗಳನ್ನು ಉತ್ಪಾದನೆ ಮಾಡುತ್ತಿದ್ದಾರೆ

ಇಂಗ್ಲೀಶ್ ಭಾಷೆಯ ಬಗ್ಗೆ ಉದ್ಧಾರಕ ಶಕ್ತಿಯ ಹಾಗೂ ಆರಾಧನೆಯ ಭಾವವನ್ನು ಹೊಂದಿರುವ ಜನರ ಮನೋಭಾವನೆಯನ್ನು ಖಂಡಿಸಿದ್ದಾರೆ. ದೇಶದ ಮಾನವ ಸಂಪನ್ಮೂಲವು ಇಂಗ್ಲೀಶ್ ಎಂಬ ಪಂಜರದಲ್ಲಿ ಬಂಧಿಯಾಗಿರುವ, ಬಂಧಿಸಿರುವ ವಿಪರ್ಯಾಸವನ್ನು ಈ ಕವನ ಧ್ವನಿಸುತ್ತದೆ. ತೆಲುಗು ಮಾತೃಭಾಷಾ ಚಳವಳಿಗಳನ್ನು ಇಂಗ್ಲೀಶ್ ಭಾಷೆಯು ಹತ್ತಿಕ್ಕಿದ ಬಗೆಯನ್ನು ಹೀಗೆ ಹೇಳುತ್ತಾರೆ.

ಇಪ್ಪತ್ತಾರು ಅಕ್ಷರಗಳಿಂದ ಅಹಂಕಾರದ ಮುಸುಕು ಹಾಕಿಕೊಂಡಿರುವ
ಈ ಶಬ್ದ ಶಕಲಗಳು
ಎಷ್ಟು ಸಾರಿ ನನ್ನ ಮಾತೃಭಾಷೆಯ ಚಳವಳಿಗಳನ್ನು
ಸಾಯುವಂತೆ ಹೊಡೆಯಲಿಲ್ಲ!
ಅನುಭವವನ್ನು ಜ್ಞಾನವನ್ನು ಆತ್ಮಗೌರವನ್ನು
ಜೊಳ್ಳಿನಂತೆ ಒಂದಿಷ್ಟು ಎ.ಬಿ.ಸಿ.ಡಿ.ಗಳ ಮುಂದೆ
ಸುಟ್ಟು ಹಾಕಲಿಲ್ಲವೆ![೧]

(ಕೊಂಡೆಪೋಡಿ ನಿರ್ಮಲ, ಕೊಂಡೆಪೋಡಿ ನಿರ್ಮಲ ಕವಿತ್ವಂ (ಸಮಗ್ರ), ಪುಟ-೨೨೬-೨೨೮)

ಇಪ್ಪತ್ತಾರು ಅಕ್ಷರಗಳೊಂದಿಗೆ ಅಹಂಕಾರದ ಮುಸುಕು ಹಾಕಿಕೊಂಡಿರುವ ಇಂಗ್ಲೀಶ್ ಭಾಷೆಯು ತೆಲುಗು ಮಾತೃಭಾಷೆಯ ಚಳವಳಿಗಳಿಗೆ ಪದೇ ಪದೇ ಪೆಟ್ಟು ಕೊಟ್ಟಿರುವ ಬಗೆಯನ್ನು ಹೇಳುತ್ತ, ಇಂಗ್ಲೀಶ್ ಜ್ಞಾನ ಪರಂಪರೆಯು ತೆಲುಗಿನ ದೇಸಿ ಜ್ಞಾನ ಪರಂಪರೆ ಹಾಗೂ ಆತ್ಮಗೌರವವನ್ನು ನಾಶಪಡಿಸಿದರ ಬಗ್ಗೆ ವಿಷಾದವನ್ನು ವ್ಯಕ್ತಪಡಿಸಿದ್ದಾರೆ. ಇಂಗ್ಲೀಶ್ ಭಾಷೆಯ ಎದುರು ಮಾತೃಭಾಷೆಯಾದ ತೆಲುಗು ಮೂಕವಾದ ವಿಪರ್ಯಾಸವನ್ನು ಈ ಕವನ ಧ್ವನಿಸುತ್ತದೆ. ತೆಲುಗು ಭಾಷೆಗೆ ಸಂಬಂಧಿಸಿದಂತೆ ನಡೆದ ಚಳವಳಿಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡ ಕೊಂಡೆಪೋಡಿ ನಿರ್ಮಲ ಅವರು ಆ ಅನುಭವಗಳನ್ನು ಕಾವ್ಯವಾಗಿಸಿದ್ದಾರೆ. ತೆಲುಗು ಭಾಷೆ ಕುರಿತಂತೆ ಒಬ್ಬ ತೆಲುಗು ಭಾಷಾ ಪ್ರೇಮಿ, ಸತ್ಯಗ್ರಹಿ, ತೆಲುಗು ವಿರೋಧಿ, ಪರಭಾಷಿಗ ಮತ್ತು ವಿದ್ಯಾರ್ಥಿ ಇವರು ಪ್ರತಿಕ್ರಿಯಿಸಿರುವುದನ್ನು ವ್ಯಂಗ್ಯ, ವಿಷಾದದ ಮುಖೇನ ಕಾವ್ಯದಲ್ಲಿ ಅಭಿವ್ಯಕ್ತಿಸಿದ್ದಾರೆ. ಇಂದಿನ ಇಂಗ್ಲೀಶ್ ಶಿಕ್ಷಣ ವ್ಯವಸ್ಥೆಯು ಕೂಡ ಮಾತೃಭಾಷೆಗೆ ಮಾರಕವಾಗಿದೆ ಎಂಬುದನ್ನು 'ಪಾಡಿಕಳ್ಳವ್ಯಾದಿ' ಎಂಬ ಕವಿತೆಯಲ್ಲಿ ವ್ಯಕ್ತಪಡಿಸಿದ್ದಾರೆ.

ಮದರ್ ಟಂಗ್‌ನಲ್ಲಿ ಮಾತನಾಡಿದ್ದಕ್ಕೆ
ಬಟ್ಟೆ ಬಿಚ್ಚಿ ಬೆಂಚಿನ ಮೇಲೆ ನಿಲ್ಲಿಸಿದ

ನಿಮ್ಮ ಎಂಗ್ಲಿಶ್ ಸಾರ್ ಕೂಡ ಸತ್ತು ಹೋಗುತ್ತಾನೆ[೨]

(ಕೊಂಡೆಪೋಡಿ ನಿರ್ಮಲ, ಕೊಂಡೆಪೋಡಿ ನಿರ್ಮಲ ಕವಿತ್ವಂ (ಸಮಗ್ರ), ಪುಟ-೨೦೫)

ಪ್ರಸ್ತುತ ದಿನಗಳಲ್ಲಿ ಹಿಂದೆಂದಿಗಿಂತಲೂ ಇಂಗ್ಲೀಶ್ ಭಾಷೆಯ ವ್ಯಾಮೋಹ ಹೆಚ್ಚುತ್ತಿರುವುದು ತೆಲುಗು ಮಾತೃಭಾಷೆಗೆ ಮಾರಕವಾಗುತ್ತಿದೆ. ಇದಕ್ಕೆ ಪೂರಕ ಬೆಂಬಲವಾಗಿ ಇಂದಿನ ಶಿಕ್ಷಣ ಸಂಸ್ಥೆ ಹಾಗೂ ಬೋಧಕ ವರ್ಗವು ಕೆಲಸ ಮಾಡುತ್ತಿದೆ. ಮಕ್ಕಳಿಗೆ ಇಷ್ಟವಿಲ್ಲದಿದ್ದರೂ ಒತ್ತಾಯ ಪೂರ್ವಕವಾಗಿ ಕಲಿಸಲಾಗುತ್ತಿದೆ. ಇಂಗ್ಲೀಶ್ ಭಾಷೆಯ ಕಲಿಕೆಯಿಂದಾಗಿ ಪಾಶ್ಚಾತ್ಯೀಕರಣಕ್ಕೊಳಗಾದ ಇಂದಿನ ಯುವ ಪೀಳಿಗೆಯು ದೇಸಿ ಸಂಸ್ಕೃತಿಗೆ ಮಾರಕವಾಗುತ್ತಿರುವುದನ್ನು ಷಾಹಜನಾ ಅವರು ಹೀಗೆ ಹೇಳುತ್ತಾರೆ.

ಇಂಗ್ಲಿಶ್ ದೆವ್ವ ನಡೆದು ಬರುವಂತಿದೆ
ಅವನ ದೃಷ್ಟಿ ಕಣ್ಣುಗಳಿಂದ
ನನ್ನ ದೇಶವನ್ನು ಹೇಗೆ ಕಾಪಾಡಿಕೊಳ್ಳಲಿ[೩]

(ಷಾಜಹಾನ, ದರ್ದಿ, ಪುಟ-೭೯)

ಇಂಗ್ಲೀಶ್ ಭಾಷೆಯನ್ನು ಕಲಿತ ಇಂದಿನ ಯುವ ಪೀಳಿಗೆಯು ನಮ್ಮ ದೇಶದ ಸಂಸ್ಕೃತಿಯನ್ನು ಇಂಗ್ಲೀಶ್ ಕಣ್ಣುಗಳಿಂದಲೇ ನೋಡುತ್ತ ಅವಮಾನಿಸಲಾಗುತ್ತಿರುವುದರ ಬಗ್ಗೆ ಕವಯತ್ರಿಗೆ ಆತಂಕವಿದೆ. ನಮ್ಮ ಸಂಸ್ಕೃತಿಯನ್ನು ಬೆತ್ತಲಾಗಿಸುವ ಹಾಗೂ ನಾಶ ಮಾಡುವ ಇಂಗ್ಲೀಶ್ ಮನಸ್ಸುಗಳ ಬಗ್ಗೆ ಆತಂಕವನ್ನು ಈ ಕವಿತೆಯಲ್ಲಿ ವ್ಯಕ್ತಪಡಿಸಿದ್ದಾರೆ. ಒಟ್ಟಾರೆ ಇಂಗ್ಲೀಶ್‌ರು ಭಾರತವನ್ನು ಭೌತಿಕವಾಗಿ ಬಿಟ್ಟುಕೊಟ್ಟರೂ ಅವರ ಸಾಂಸ್ಕೃತಿಕ ಉಪಕರಣಗಳ ಮುಖೇನ ನಡೆಸುತ್ತಿರುವ ಸಾಂಸ್ಕೃತಿಕ ಯಾಜಮಾನ್ಯ ಅಭಾದಿತವಾಗಿ ನಡೆಸಿಕೊಂಡು ಬಂದಿರುವುದನ್ನು ಹೇಳುತ್ತ ದೇಸಿ ಭಾಷೆಗಳ ಜ್ಞಾನ ಪರಂಪರೆಗೆ ಮಾರಕವಾಗಿರುವುದನ್ನು ಕನ್ನಡ-ತೆಲುಗು ಸ್ತ್ರೀವಾದಿ ಲೇಖಕಿಯರು ಕವಿತೆಯಲ್ಲಿ ವ್ಯಕ್ತಪಡಿಸಿದ್ದಾರೆ.

**೨. ಜಾತಿಯ ಪ್ರಶ್ನೆ :**

ಜಾತಿ ಪದ್ಧತಿ ಅತಿ ಭಯಂಕರವಾದ ದುಷ್ಪರಿಣಾಮಗಳನ್ನು ತನ್ನಲ್ಲಿ ಅಡಗಿಸಿಕೊಂಡಿರುವ ಒಂದು ವ್ಯವಸ್ಥೆಯಾಗಿದೆ. ಇದು ಕೇವಲ ಒಂದು ಸ್ಥಳೀಯ ಸಮಸ್ಯೆ ಎಂಬುದು ಎಷ್ಟರಮಟ್ಟಿಗೆ ಸತ್ಯವೋ ಅಷ್ಟರಮಟ್ಟಿಗೆ ಬಹು ವ್ಯಾಪಕವಾದ ಘೋರತೆಯನ್ನು ಉಳ್ಳದ್ದೂ ಆಗಿದೆ. ಸ್ತ್ರೀಯರು ಕೂಡ ಜಾತಿಯಾಳದ ಸಂಕೋಲೆಗಳಲ್ಲಿ ಬಂಧಿಯಾಗಿರುವುದನ್ನು ಕಾಣಬಹುದು.

ತಳ ಸಮುದಾಯಗಳಿಂದ ಬಂದ ಕೆಲವು ಕನ್ನಡ-ತೆಲುಗಿನ ಸ್ತ್ರೀವಾದಿ ಲೇಖಕಿಯರು ಸ್ತ್ರೀವಾದಿ ಚಿಂತನೆಗಳ ಜೊತೆಯಲ್ಲಿಯೇ ಜಾತಿ ಪದ್ಧತಿಯಂತಹ ಸಮಸ್ಯೆಗಳ ಕುರಿತಾಗಿಯೂ ಮಾತನಾಡಿದ್ದಾರೆ. ಲಲಿತಾ ನಾಯಕ್ ಬಿ.ಟಿ. ಅವರು ಸಮಾಜದಲ್ಲಿನ ಅಸಮಾನತೆಯ ವಿರುದ್ಧ

ಪ್ರತಿಭಟನೆಯ ಧ್ವನಿ ಎತ್ತಿದ್ದಾರೆ. ಬಹುದಿನಗಳಿಂದಲೂ ಸಮಾಜದಲ್ಲಿ ಬೇರೂರಿರುವ ಜಾತಿಭೇದ, ಲಿಂಗಭೇದ ನೀತಿಯನ್ನು ವಿರೋಧಿಸುವ ಇವರು ಮೇಲ್ಜಾತಿಯ ಮಡಿವಂತಿಕೆಯನ್ನು ವ್ಯಂಗ್ಯ ವಿಡಂಬನೆಯಿಂದ ಚುಚ್ಚುತ್ತಲೇ ಸಮಾಜದ ವಿವಿಧ ವರ್ಗಗಳ ನಡುವಿನ ಅಂತರವನ್ನು ಕವಿತ್ವೀಕರಿಸುವ ಮೂಲಕ ತಳ ಸಮುದಾಯಗಳಲ್ಲಿ ಹೊಸ ಚೈತನ್ಯವನ್ನು ಬಿಂಬಿಸಿದ್ದಾರೆ. ಸಮಾಜದಲ್ಲಿನ ಎರಡು ವರ್ಗಗಳ ಅಲೆಗಳನ್ನು ಮುಖಾಮುಖಿಗೊಳಿಸುವ ಸಂದರ್ಭದಲ್ಲಿಯೇ ಮೇಲ್ವರ್ಗದವರ ಬಗ್ಗೆ ಕೆಳವರ್ಗದವರ ಮನೋಧರ್ಮದ ಬಗ್ಗೆ ಹೇಳುತ್ತಾ

ಖರೆ ನೀವು ಮೇಲಿನವರು
ಮೇಲಿನಿಂದ ಬಂದವರು
ಕೆಳಗಿನಿಂದಾಗಲಿ
ಒಳಗಿನಿಂದಾಗಲಿ
ಕೊಳೆಯಿಂದಾಗಲಿ
ಹೊರ ಬಂದವರಲ್ಲ

(ಲಲಿತಾ ನಾಯಕ್ ಬಿ.ಟಿ., ಬಿದಿರು ಮಳೆ ಕಂಟಿಯಲಿ, ಪುಟ–೧೬೩)

ಎಂದು ಮೇಲ್ಜಾತಿಯ ಮಡಿವಂತಿಕೆಯನ್ನು ವ್ಯಂಗ್ಯ, ವಿಡಂಬನೆಯ ಧ್ವನಿಯಲ್ಲಿ ಅಭಿವ್ಯಕ್ತಿಸಿದ್ದಾರೆ. ಭಾರತೀಯ ಸಮಾಜದಲ್ಲಿ ತನ್ನ ವಿಷವರ್ತುಲವನ್ನು ಚಾಚಿರುವ ಜಾತಿಯೆಂಬ ಪಿಡುಗನ್ನು ತೊಲಗಿಸಲು ಮುಂದಾದ ಪ್ರಗತಿಪರ ಎಡವಾದಿ ಚಿಂತಕರ ಚಿಂತನೆಗಳಿಂದ ಪ್ರಭಾವಿತರಾಗಿದ್ದಾರೆ. ಸ್ವಾತಂತ್ರ್ಯ ಬಂದು ಅರ್ಧ ಶತಮಾನವೇ ಕಳೆದರೂ ಜಾತಿಯಂಥ ಸಾಮಾಜಿಕ ಸಮಸ್ಯೆಯಿಂದ ನಮ್ಮ ಸಮಾಜ ಮುಕ್ತವಾಗಿಲ್ಲ. ಈ ನೆಲದಲ್ಲಿ ಮನುಸ್ಥಾಪಿತ ಜಾತಿ–ನೀತಿ ಬದಲಾಗದಿರುವ ಬಗ್ಗೆ ಮಾರ್ಮಿಕವಾಗಿ ಹೇಳಿದ್ದಾರೆ.

ಈ ನೆಲದ ನೀತಿ ಬದಲಾಗಿಲ್ಲ ಬಾಬಾ ಸಾಹೇಬ
ಮನು ಬಿತ್ತಿ ಬೆಳೆದದ್ದು
ನಿನ್ನ ಕೊಡಲಿಗೆ ದಕ್ಕಿಲ್ಲ
ಮುಂದೆ ಇಟ್ಟಿದ್ದು ಒಂದೆರಡು ಹೆಜ್ಜೆ
ಹಿಂದೆ ಬಿದಿದ್ದು ಹತ್ತಾರು ಹೆಜ್ಜೆ
ವರ್ಗ ವರ್ಣಮಯ ವಿಷಬಳ್ಳಿ
ಕಾಲು ಕಾಲಿಗೆ ತೊಡರಿ
ನೆಲದಾಳದಲಿ ಬೇರು ಚಾಚಿಹುದು

ಜಾತಿ ವ್ಯವಸ್ಥೆಯನ್ನು ತೊಡೆದು ಹಾಕಲು ಪ್ರಗತಿ ಪರವಾಗಿ ಎಷ್ಟೇ ಆಲೋಚಿಸಿ ಮುಂದುವರೆದರೂ ಆ ದಿಟ್ಟಿನಲ್ಲಿ ಕ್ರಮಿಸಿದ್ದು ಒಂದೆರಡು ಹೆಜ್ಜೆ ಮಾತ್ರ. ಅಂಬೇಡ್ಕರ್ ಅವರಂತಹ ಮಹಾನ್

ಮಾನವತಾವಾದಿಗಳು ಈ ವ್ಯವಸ್ಥೆಯನ್ನು ತೊಲಗಿಸಲು ಅವಿರತವಾಗಿ ಶ್ರಮಿಸಿದರು. ಇವರ ವಿಚಾರಗಳಿಂದ ಎಷ್ಟೇ ಪ್ರಭಾವಿತರಾದರೂ ಈ ನೆಲದ ನೀತಿ ಬದಲಾಗದಿರುವ ಬಗ್ಗೆ ವಿಷಾದ ಭಾವವಿದೆ.

ಮನೆಗೊಂದು ಜಾತಿ
ಮನಕೆರಡು ಧರ್ಮ
ಲಿಂಗ ಭೇದದ ನೀತಿ ನಾರುತಿಹುದು
ಅದ ಕಿತ್ತೆಸೆವೆಂದವರ ಮೇಲೆ
ಕೆಸರೆರಚುವರು ಬಾಬ
ಮತ್ತೆ ಉಸಿರಾಡದಂತೆ ಕೊರಳನೊತ್ತುವರು

ಎಂದು ಹೇಳುತ್ತಾರೆ. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿಯೂ ಆಶಾಭಾವವನ್ನು ಹೊಂದಿರುವ ಕವಯತ್ರಿ, ಅಂಬೇಡ್ಕರ್ ಅವರ ವಿಚಾರಗಳು ಈ ಜಾತಿ, ವರ್ಗ ವ್ಯವಸ್ಥೆಯನ್ನು ತೊಡೆದುಹಾಕುವಲ್ಲಿ ದಾರಿದೀಪಗಳಾಗಿದ್ದು ಅವರ ಮಾರ್ಗದಲ್ಲಿ ಕಿಂಚಿತ್ತಾದರೂ ಮುನ್ನಡೆದಾದರೆ ಇಂತಹ ವ್ಯವಸ್ಥೆಯನ್ನು ಹೋಗಲಾಡಿಸಬಹುದು ಎಂಬುದನ್ನು ಹೀಗೆ ಹೇಳಿದ್ದಾರೆ.

ಆದರೂ ಏನಂತೆ
ನೀ ಹೊತ್ತಿಸಿ ಹೋದ ಹಣತೆ
ಬೆಳಕು ಚೆಲ್ಲುತಿದೆ ಮೂಲೆ ಮೂಲೆಗೂ
ಮೂಕ ಹೃದಯದ ತುಂಬ
ಮಾತು ಮಮತೆ
ನಿನ್ನ ತೋರು ಬೆರಳೇ
ನಮ್ಮ ದಾರಿ ದೀವಿಗೆ ಬಾಬ

(ಲಲಿತಾ ನಾಯಕ್ ಬಿ.ಟಿ., ಬಿದಿರು ಮಳೆ ಕಂಟಿಯಲಿ, ಪುಟ–೬೯)

ಎಂದು ಹೇಳುತ್ತಲೇ ಜಾತಿ, ವರ್ಗ, ಲಿಂಗಭೇದ ನೀತಿಯ ಬದಲಾವಣೆ ಕುರಿತಂತೆ ಅಂಬೇಡ್ಕರ್ ಅವರ ಆಲೋಚನಾ ಕ್ರಮದ ಹಿನ್ನೆಲೆಯಲ್ಲಿ ನೋಡುತ್ತಾರೆ. ಅಂಬೇಡ್ಕರ್ ವಿಚಾರಗಳೊಂದಿಗೆ ಈ ಸಾಮಾಜಿಕ ಅನಿಷ್ಟಗಳನ್ನು ಇಲ್ಲಗೈದು ಆತನ ಆದರ್ಶವನ್ನು ಗಮ್ಯವಾಗಿ ಸ್ವೀಕರಿಸಿದ ಪರಿಯನ್ನು ಇಲ್ಲಿ ಕಾಣಬಹುದು. ಇದೇ ಸಂದರ್ಭದಲ್ಲಿ ಈ ಸಾಮ್ರಾಜ್ಯಶಾಹಿಗಳು, ಸಮರದಾಹಿಗಳು ಮನುಷ್ಯ–ಮನುಷ್ಯರ ನಡುವೆ, ಜಾತಿ–ಮತ–ಪಂಥದ ಬೀಜವನ್ನು ಬಿತ್ತಿ ಸಮಾಜದ ಸುಸ್ಥಿತಿಯನ್ನು ಹಾಳುಗೆಡವಿರುವ ಬಗ್ಗೆ ತಮ್ಮ ಒಟ್ಟು ಆಶಯಗಳ ಪ್ರತೀಕದಂತಿರುವ 'ಏಕತೆಯ ಕೂಗು' ಕವನದ ಮೂಲಕ ಎಚ್ಚರಿಸಿದ್ದಾರೆ.

ಸಾಮ್ರಾಜ್ಯಶಾಹಿಗಳೇ
ಸಮರದಾಹಿಗಳೇ
....................
ಸ್ವಾರ್ಥಲಾಲಸೆಗಾಗಿ ನರಮೇಧಗೈದಿರಿ
ಜಾತಿ–ಮತ–ಧರ್ಮವೆಂದೆನ್ನುತ
ಶಾಂತಿಯ ಸಮಾಧಿ ಕಟ್ಟಿದಿರಿ
ರಕ್ತದೋಕುಳಿಯಲ್ಲಿ ರಂಜನೆಯ ಕಾಣುತ್ತ
ಜಗದ ಬಯಲನು ರಣರಂಗವಾಗಿಸಿದಿರಿ

ಎಂದು ಸಾಮ್ರಾಜ್ಯಶಾಹಿಗಳು ಸ್ವಾರ್ಥಕ್ಕಾಗಿ ಎಸಗುವ ಕೃತ್ಯವನ್ನು ಅನಾವರಣ ಮಾಡಿದ್ದಾರೆ. ಇಂತಹ ತಮ್ಮ ಸ್ವಾರ್ಥ ನೀತಿಯಿಂದಾಗಿ ಸಮಾಜದ ಏಕತೆಯನ್ನು ಕದಡುವ ಕೆಲಸವನ್ನು ಮಾಡುವ ಸ್ವಾರ್ಥಪರರ ವಿರುದ್ಧ ಆಕ್ರೋಶವಿದೆ. "ಕ್ಷಮೆ ಇಲ್ಲ ನಿಮ್ಮೀಕೃತ್ಯಕ್ಕೆ ಬಂದೂಕದ ನಳಿಗೆಯನ್ನು ತಿರುಗಿಸುವರೋ ಜನ ನಿಮ್ಮ ಗುಂಡಿಗೆಗೆ ಉರುಳಿಸುವರೋ ನಿಮ್ಮ ದೇಹಗಳ" ಎಂದು ಕಿಡಿ ಕಾರಿದ್ದಾರೆ. ಇಂತಹ ಆಕ್ರೋಶ, ಆವೇಶದ ನಡುವೆಯೇ ಏಕತೆಯ ಭಾವವನ್ನು ಸೂಚಿಸುವ ಲೇಖಕಿ

ಒಂದೇ ನೆಲ, ಒಂದೇ ಜಲ, ಒಂದೇ ಕುಲ
ಎಂದುಲಿಯುವ ನಿಸರ್ಗದ ಪಿಸುನುಡಿಗೆ
ಕೊರಳಾಗಿ ಕೂಗುತಾರೋ ಜನತೆ
ಏಕತೆಯ ಕೊರಳಾಗಿ ಕೂಗುತಾರೋ

(ಲಲಿತಾ ನಾಯಕ್ ಬಿ.ಟಿ., ಬಿದಿರು ಮಳೆ ಕಂಟಿಯಲಿ, ಪುಟ–೩೮)

ಎಂದು ಸಮಾಜದ ಎಲ್ಲಾ ಜನರ ಏಕತೆಗಾಗಿ ಹಂಬಲಿಸುತ್ತಾರೆ. ಒಂದೇ ನೆಲದಲಿ ವಾಸಿಸಿರುವ ನಾವು ಜಾತಿ, ಮತ, ಕುಲ ಎಂಬ ಭೇದ ಭಾವವನ್ನೆಣಿಸದೆ ಸಮಾನತೆಯಿಂದ ಒಂದಾಗಿ ಬಾಳಬೇಕು ಎಂಬ ಸಂದೇಶವನ್ನು ನೀಡಿದ್ದಾರೆ.

ತೆಲುಗು ಸ್ತ್ರೀವಾದಿ ಲೇಖಕಿಯರು ಕೂಡ ಜಾತಿ ಸಮಸ್ಯೆಯ ಕುರಿತು ಕಾವ್ಯದ ಮುಖೇನ ಮಾತನಾಡಿದ್ದಾರೆ. ಜಾತಿ ಭೇದ ಮತ್ತು ವರ್ಗ ಭೇದವು ದೇಶದ ಅನೇಕ ಸಮಸ್ಯೆಗಳಿಗೆ ಅನುವು ಮಾಡಿಕೊಟ್ಟಿದೆ. ಇವುಗಳ ವಿರುದ್ಧ ಪ್ರತಿಭಟನೆಯ ಆಕ್ರೋಶ ಮುಗಿಲು ಮುಟ್ಟಿದೆ. ಶೋಷಣೆಗೆ ಒಳಗಾದ ಜನಸಮುದಾಯಗಳು ತಮ್ಮ ಒಡಲಾಳದ ನೋವನ್ನು ತೋಡಿಕೊಂಡಿವೆ. ಸಮಾಜದಲ್ಲಿ ಜನರು ತಾವೇ ನಿರ್ಮಿಸಿಕೊಂಡಿರುವ ಜಾತಿ ವ್ಯವಸ್ಥೆ, ಮೇಲು–ಕೀಳುಗಳಿಂದಾಗಿ ಅಪಾರ ನೋವು, ಹಿಂಸೆ, ಅವಮಾನಕ್ಕೊಳಗಾಗುತ್ತಿದ್ದಾರೆ. ಹಾಗಾಗಿ ಈ ಜಾತಿ, ಮತ, ಪಂಥಗಳನ್ನು

ಬಿಟ್ಟು ಒಂದಾಗುವ ಆಶಯವನ್ನು ಚಲ್ಲಪಲ್ಲಿ ಸ್ವರೂಪರಾಣಿ ಅವರು "ಮಟ್ಟಿ ಚೇತುಲು" ಕವಿತೆಯಲ್ಲಿ ವ್ಯಕ್ತಪಡಿಸಿದ್ದಾರೆ.

ಜಾತಿಯ ವಾಸನೆ ಹೊಡೆಯುತ್ತಿರುವ
ಈ ದೇಶದ ರಸ್ತೆಗಳನ್ನೆಲ್ಲ
ಬಂಗಾಳಕೊಲ್ಲಿಗೆ ಗುಡಿಸಿ ಹಾಕೋಣ !
... ನಿಮ್ಮನ್ನು ಅಪ್ಪನ ಸ್ವತ್ತಿನಂತೆ
ಬಳಸಿಕೊಳ್ಳುತ್ತಿರುವ
ನಿಮ್ಮ ಬಂಡವಾಳಶಾಹಿತ್ವದ ಪೆನಿಮಿಟಿಯನ್ನು
ಕೆಳಗಿನಿಂದ ಮೇಲಿನವರೆಗೆ
ಫಿನಾಯಿಲ್ನಿಂದ ಜಾಡಿಸೋಣ[೪]

(ಚಲ್ಲಪಲ್ಲಿ ಸ್ವರೂಪರಾಣಿ, ಮಟ್ಟಿಚೇತುಲು, ಮಂಕೇನ ಪುವ್ವ, ಪುಟ-೨೫)

ಜಾತೀಯತೆಯ ಅನೇಕ ಅನಿಷ್ಟಗಳನ್ನು ಪ್ರತ್ಯೇಕ್ಷ ಕಂಡರೂ, ಅನುಭವಿಸಿದರೂ ಜಾತಿ ಪದ್ಧತಿಯು ಈ ವ್ಯವಸ್ಥೆಯೊಳಗೆ ವಿಷಬೀಜದಂತೆ ವ್ಯಾಪಿಸಿರುವುದು ಸತ್ಯ. ಕೆಳವರ್ಗದವರು ಮೇಲ್ವರ್ಗದವರಿಂದ ಶೋಷಣೆಗೆ ಗುರಿಯಾಗುವುದು ಒಂದಾದರೆ, ಪ್ರತಿಯೊಂದು ಜಾತಿಯವರೂ ಶ್ರೇಣೀಕರಣದಲ್ಲಿ ತಮಗಿಂತ ಕೆಳಗಿನವರನ್ನು ತುಳಿಯುತ್ತಿರುವುದು, ಶೋಷಣೆಗೀಡು ಮಾಡುತ್ತಿರುವುದು ಜಾತಿಯ ಇಂದಿನ ಸ್ವರೂಪವಾಗಿದೆ. ಅಷ್ಟೇ ಅಲ್ಲ ಈ ವ್ಯವಸ್ಥೆಯು ನಮ್ಮ ದೇಶದಲ್ಲಿ ಅನೇಕ ಸಮಸ್ಯೆಗಳಿಗೆ ಕಾರಣವಾಗಿದೆ. ಇಂತಹ ಅನಿಷ್ಟ ವರ್ಣಾಶ್ರಮ ಪದ್ಧತಿಯನ್ನು ತೊಡೆದು ಹಾಕುವ ಸಂಕಲ್ಪವನ್ನು ಈ ಕವನದಲ್ಲಿ ವ್ಯಕ್ತಪಡಿಸಿದ್ದಾರೆ. ಜಾತಿ ವ್ಯವಸ್ಥೆಯು ಕೇವಲ ದಲಿತ ಸಮುದಾಯದ ಪುರುಷರ ಮೇಲೆ ಅಷ್ಟೇ ಅಲ್ಲದೆ ಈ ಸಮುದಾಯಗಳ ಮಹಿಳೆಯರ ಮೇಲೆಯು ಸಹ ಪರಿಣಾಮವನ್ನು ಬೀರಿದೆ ಎಂಬುದನ್ನು ಚಂದ್ರಶ್ರೀ ತನ್ನ 'ಅಂಟರಾನಿ ಪಾಟ' ಕವಿತೆಯಲ್ಲಿ ವ್ಯಕ್ತಪಡಿಸಿದ್ದಾರೆ.

ನಮ್ಮ ಹೆಬ್ಬಾವು ಮಾತಾಡುತ್ತದೆ
ಸಾಹಿತ್ಯ ಚರ್ಚೆ ಮಾಡುತ್ತದೆ
ಇಂಗ್ಲೀಶ್ ಮಾತನಾಡುತ್ತದೆ
ನನ್ನನ್ನು ಮಾತ್ರ
ನಾಲ್ಕು ಗೋಡೆಗಳ ನಡುವೆ
ಅಗೆದು ನುಂಗಿಬಿಡುತ್ತದೆ[೫]

(ಕಾತ್ಯಾಯನಿ ವಿದ್ಮಹ, ಜಂಡರ್ ಸ್ಪೃಹ, ಪುಟ-೩೯)

ಅಂತರ್ಜಾತಿ ಮದುವೆ ಮಾಡಿಕೊಂಡ ದಲಿತ ಮಹಿಳೆಯನ್ನು ಮೇಲ್ಜಾತಿಯ ಮತ್ತು ಮೇಲ್‌ವರ್ಗದ ಅತ್ತೆ ದಲಿತಳು ಎಂಬ ಒಂದೇ ಒಂದು ಕಾರಣಕ್ಕೆ ಅವಳನ್ನು ನೋಡುವ ದೃಷ್ಟಿಕೋನವೇ ಭಿನ್ನವಾಗಿರುತ್ತದೆ. ಅತ್ತೆಯಾದವಳು ಸುಶಿಕ್ಷಿತೆಯಾಗಿ ಸಾಹಿತ್ಯ ಚರ್ಚೆಗಳಲ್ಲಿ ಭಾಗವಹಿಸಿ ಸಾಮಾಜಿಕ ನೈತಿಕ ಹೊಣೆಗಾರಿಕೆ ಬಗ್ಗೆ ಮಾತನಾಡಿದರೂ ತನ್ನ ಮನೆಯಲ್ಲಿನ ಸೊಸೆಯನ್ನು ನಾಲ್ಕು ಗೋಡೆಗಳ ಮಧ್ಯ ಅವಳನ್ನು ಬಂಧಿಸಲಾಗುತ್ತಿರುವ ವಿಪರ್ಯಾಸವನ್ನು ಈ ಕವನದಲ್ಲಿ ವ್ಯಕ್ತಪಡಿಸಿದ್ದಾರೆ. ಸಮಾಜದಲ್ಲಿ ದಲಿತ ಮಹಿಳೆಯರು ದಿನನಿತ್ಯ ಬದುಕಿನಲ್ಲಿ ಅನುಭವಿಸುವ ಅಸ್ಪೃಶ್ಯತೆಯ ಯಾತನೆಯನ್ನು ಸ್ವರೂಪರಾಣಿ "ಮಾಯಮ್ಮ' ಕವಿತೆಯಲ್ಲಿ ಸಮರ್ಥವಾಗಿ ಹಿಡಿದಿಟ್ಟಿದ್ದಾರೆ.

ಕಣ್ಣು ಮುಚ್ಚಿದರೂ ತೆರೆದರೂ
ಅಶ್ಪೃಶ್ಯಳೆ ಮುಟ್ಟಬಾರದವಳೇ ಎಂದು
ಇಲ್ಲಿನ ಪರಿಸರವೂ ಸಹಿತ
ನಿನ್ನನ್ನು ಪ್ರತಿಕ್ಷಣ ಪರಾಭವಿಸುತ್ತಿದ್ದರೆ
ಮನುಷ್ಯಳಾಗಿ ನೀನೇನು ಕಳೆದುಕೊಂಡೆಯೋ
ಅರ್ಥವಾಗಬೇಕೆಂದರೆ ಕಷ್ಟವೇ![೬]

(ಚಲ್ಲಪಲ್ಲಿ ಸ್ವರೂಪರಾಣಿ, ಪದುನೆಕ್ಕಿನ ಪಾಟ, ಮಾಯಮ್ಮ, ಪುಟ-೨೦)

ಸಮಾಜದ ಪ್ರತಿಯೊಂದು ಹಂತದಲ್ಲಿಯೂ ಮಹಿಳೆಯನ್ನು ಅಸ್ಪೃಶ್ಯಳು ಎಂದು ನಿಂಧಿಸುವುದರೊಂದಿಗೆ ಇಲ್ಲಿನ ಪರಿಸರಗಳು ಅವಳನ್ನು ಪರಾಭವಗೊಳಿಸುತ್ತಿವೆ. ಮನುಷ್ಯಳಾಗಿ ತಾನೇನು ಕಳೆದುಕೊಂಡಿದ್ದೆನೆಂದು ಅರ್ಥವಾಗಬೇಕೆಂದರೆ ಈ ಜಾತಿ ವ್ಯವಸ್ಥೆ ನಾಶವಾಗಬೇಕು ಎಂಬುದಾಗಿ ಹೇಳಿದ್ದಾರೆ. ಜಾತಿ ವ್ಯವಸ್ಥೆ ನಿರ್ನಾಮವಾಗದೆ ದೇಶಕ್ಕೆ ಸ್ವಾತಂತ್ರ್ಯ ಬಂದರೂ ವ್ಯಕ್ತಿ ಸ್ವಾತಂತ್ರ್ಯ ಲಭಿಸದು. ಅಲ್ಲದೆ ಆ ಸಂಬಂಧಿತವಾಗಿ ಜಾತಿಯೊಳಗಿನ ಕಟ್ಟುಪಾಡುಗಳಲ್ಲಿ ಮನುಷ್ಯನ ವ್ಯಕ್ತಿತ್ವ ಕೂಡ ಮುಚ್ಚಲ್ಪಡುತ್ತದೆ. ಸ್ತ್ರೀಯರು ಕೂಡ ತಮ್ಮ ಮೇಲೆ ನಡೆಯುವ ಅನಾಚಾರಗಳಿಂದ ಹೊರ ಬರುವುದು ಇದರಿಂದ ಸಾಧ್ಯವಾಗುವುದಿಲ್ಲ. 'ಆಧುನಿಕ ಅರುಂಧತಿ' ಕವಿತೆಯಲ್ಲಿ ಜಿ ವಿಜಯಲಕ್ಷ್ಮಿ ಅಸ್ಪೃಶ್ಯತೆಯು ಬೆಂಕಿ ಜ್ವಾಲೆಯಾಗಿ ಸುಟ್ಟು ಹಾಕುತ್ತಿದೆ ಎಂದು ಹೇಳುವುದನ್ನು ಕೇಳಿದರೆ ದಲಿತ ಸ್ತ್ರೀಯರ ದುಃಖಪೂರಿತವಾದ ಜೀವನದ ವಾಸ್ತವ ಅರ್ಥವಾಗುತ್ತದೆ.

ತುಂಬು ಚಂದ್ರನಾಗಿ ನಾನು ಬೆಳಗಬೇಕೆಂದುಕೊಂಡರೂ
ಕಣ್ಣೀರ ಕಡಲಲ್ಲಿ ಬೆರೆಸಬೇಕೆಂದು ನೋಡುತ್ತೀಯಾ
ಬೆಂಕಿಯ ಉರಿಯಲ್ಲಿ ನನ್ನ ದೇಹ ಸುಡುತ್ತಿದ್ದರೂ
ಅಶ್ಪೃಶ್ಯತೆ ಕೊಳೆಯ ವಾಸನೆಯೆಂದು ಮೂಗು ಮುಚ್ಚಿ ಕೊಳ್ಳುತ್ತೀಯಾ
ನಿನಗಾಗಿ ನನ್ನನ್ನು ನಾನು ಮರೆತರೂ

ನನ್ನ ಜಾತಿಯನ್ನು ಯಾವಾಗಲೂ ಎತ್ತಿ ಹಿಯಾಳಿಸುತ್ತೀಯ[1]

(ವಿಜಯಲಕ್ಷ್ಮಿ ಜಿ. ಚಿತ್ತರುವು, ಆಧುನಿಕ ಅರುಂಧತಿ, ಪುಟ-೨೧)

ಜಾತಿ ದಲಿತ ಮಹಿಳೆಯನ್ನು ಹೇಗೆ ಬೇಟೆಯಾಡುತ್ತ ಬೆನ್ನಟ್ಟಿದೆ ಎಂಬುದನ್ನು ಇಲ್ಲಿ ವಿವರಿಸಲಾಗಿದೆ. ಅಸ್ಪೃಶ್ಯತೆಯು ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಹಕ್ಕುಗಳ ಉಲ್ಲಂಘನೆಯ ಹುಟ್ಟು. ದಲಿತರು ಈ ಹಕ್ಕುಗಳು ಉಲ್ಲಂಘನೆಯಾಗುತ್ತಿರುವುದನ್ನು ಪ್ರಶ್ನಿಸಿದಾಗ ತಮ್ಮ ಆಧಿಪತ್ಯಕ್ಕೆ ಎಲ್ಲಿ ಭಂಗವಾಗುತ್ತದೋ ಎಂದು ಭಯಪಟ್ಟು ಮೇಲ್ಜಾತಿಯವರು ಹತ್ಯೆಗಳಿಗೆ ಕೈಹಾಕುತ್ತಿದ್ದಾರೆ. ಇದಲ್ಲದೆ ಅತ್ಯಾಚಾರ, ದಾಳಿ, ದೌರ್ಜನ್ಯಗಳನ್ನು ಮಾಡಲಾಗುತ್ತಿದೆ. ಇವುಗಳನ್ನೆಲ್ಲ ನಿತ್ಯ ಅಸ್ಪೃಶ್ಯತೆಯನ್ನು ಕಾಪಾಡುತ್ತಿರಬೇಕೆಂದು ಮಾಡುತ್ತಿದ್ದಾರೆ.

ಚಲ್ಲಪಲ್ಲಿ ಸ್ವರೂಪರಾಣಿ 'ಅಂಟರಾನಿ ಅತ್ಯಾಚಾರಂ' ಕವಿತೆಯಲ್ಲಿ ಅಸ್ಪೃಶ್ಯತೆಯ ಕಾರಣವಾಗಿ ಅತ್ಯಾಚಾರಕ್ಕೆ ಗುರಿಯಾದ ಮಹಿಳೆಯನ್ನು ಕುರಿತು ಹೇಳುತ್ತ ಇದಕ್ಕೆ ಸಮಾಜ ಪ್ರತಿಕ್ರಿಯಿಸುವ ಬಗೆ ಯಾವ ಮಾದರಿಯಲ್ಲಿರುತ್ತದೆ ಎಂಬುದನ್ನು ಈ ಕವಿತೆಯಲ್ಲಿ ವ್ಯಕ್ತಪಡಿಸಿದ್ದಾರೆ.

ಈ ದೇಶದಲ್ಲಿ
ಅಸ್ಪೃಶ್ಯತೆಯ ಹಸಿವು
ಅಸ್ಪೃಶ್ಯತೆಯ ಶೋಷಣೆಯಂತೆ
ಅಸ್ಪೃಶ್ಯತೆಯ (ಆತ್ಮ) ಹತ್ಯಗಳು
ಅಸ್ಪೃಶ್ಯತೆಯ ಅತ್ಯಾಚಾರಗಳು ಇರುತ್ತವೆ ಆದ್ದರಿಂದ
ನಿಮಗೆ ಆಶ್ಚರ್ಯ ಉಂಟಾಗಬಹುದಾದರೂ
ಯೋಗಿಶ್ವರ ರೆಡ್ಡಿ ಮೇಲೆ ನನ್ನ ಪ್ರೇಮ ಸಾಕ್ಷಿಯಾಗಿ
ನನ್ನದು ಅಸ್ಪೃಶ್ಯತೆಯ ಆತ್ಯಹತ್ಯೆ[6]

(ಚಲ್ಲಪಲ್ಲಿ ಸ್ವರೂಪರಾಣಿ,, ಮಂಕೇನಪುವ್ವ, ಅಂಟರಾನಿ ಆತ್ಮಹತ್ಯ, ಪುಟ-೪೨)

ಈ ದೇಶದಲ್ಲಿ ಅಸ್ಪೃಶ್ಯತೆಯ ಕಾರಣದಿಂದಾಗಿ ಹಸಿವು, ಶೋಷಣೆ, ದೌರ್ಜನ್ಯಗಳು ಇರುವಂತಯೇ ಅಸ್ಪೃಶ್ಯತೆಯ ಆತ್ಮಹತ್ಯಗಳು ಸಹ ಇದ್ದಾವೆ ಎಂಬುದನ್ನು ಹೇಳಿದ್ದಾರೆ. ದಲಿತ ಮಹಿಳೆಯರು ಅಸ್ಪೃಶ್ಯತೆಯ ಶೋಷಣೆಯಿಂದ ಹತ್ಯಗೆ ಗುರಿಯಾದರೆ ಇದನ್ನು ಯಾವ ಪತ್ರಿಕೆಗಳು ಸಹ ವರದಿ ಮಾಡುವುದಿಲ್ಲ, ಪಶ್ನಿಸುವುದಿಲ್ಲ. ಅದೇ ಉನ್ನತ ವರ್ಗದ ಮಹಿಳೆಯರಿಗೆ ಅವಮಾನ ಜರುಗಿದರೂ ಸ್ಥಳೀಯ ಮಟ್ಟದಿಂದ ಹಿಡಿದು ಪಾರ್ಲಿಮೆಂಟ್‌ನವರೆಗೂ ಚರ್ಚೆ, ಹೋರಾಟ, ಪ್ರತಿಭಟನೆಗಳು ನಡೆಯುತ್ತವೆ. ಪತ್ರಿಕೆ, ಸಂಸ್ಥೆಗಳು ಸಹ ಏರುಧ್ವನಿಯಲ್ಲಿ ಘರ್ಜಿಸುತ್ತವೆ. ಅದೇ ದಲಿತ ಸ್ತ್ರೀಯರ ವಿಷಯಕ್ಕೆ ಬಂದರೆ ಯಾರಿಗೂ ಸಂಬಂಧವಿಲ್ಲವೆಂಬಂತೆ ಬಾಯಿ ಮುಚ್ಚಿಕೊಂಡು ಮಾತನಾಡುತ್ತ ಕುಳಿತುಕೊಳ್ಳುತ್ತಾರೆ. ಇಂತಹ ಅನಿಷ್ಟ ದೇಶದಲ್ಲಿ ದಲಿತರ ಆತ್ಮಹತ್ಯಗಳಿಗೆ, ಅತ್ಯಾಚಾರಗಳಿಗೆ

ಜಾತಿಯಿಲ್ಲವೆನ್ನುತ್ತೀರ, ಅಸ್ಪೃಶ್ಯತೆ ಇಲ್ಲವೆನ್ನುತ್ತೀರ ಎನ್ನುವಂತಹ ಪ್ರಶ್ನೆಯನ್ನು ಈ ಕವನದಲ್ಲಿ ಎತ್ತಿದ್ದಾರೆ. ಜಾತಿ, ವರ್ಗ, ಭೇದಗಳ ಸಮಸ್ಯೆಗಳು ಮೂಲತಃ ಭೌತಿಕ ನೆಲೆಯವು. ಭೌತಿಕ ಸಂಪನ್ಮೂಲಗಳ ಮೇಲಿನ ಅಧಿಕಾರದ ಪ್ರಶ್ನೆ ಅತ್ಯಂತ ಕಷ್ಟಸಾಧ್ಯವೇ ಆದರೂ ಬಿಡಿಸಲಾಗದ ಪ್ರಶ್ನೆಯಲ್ಲ. ಇದನ್ನು ತೊಡೆದು ಹಾಕಲು ಬಲ, ತಂತ್ರಗಾರಿಕೆ, ಬುದ್ಧಿಗಳ ಪ್ರಯೋಗಕ್ಕೆ ಸೂಕ್ತ ಸಮಯಾವಕಾಶಗಳು ಒದಗಬೇಕಷ್ಟೆ ಎಂಬ ವಿಚಾರವನ್ನು ವ್ಯಕ್ತಪಡಿಸಿದ್ದಾರೆ.

**೩. ಕೋಮು ಸೌಹಾರ್ದತೆಯ ಪ್ರಶ್ನೆ :**

ರಾಜಕೀಯವಾಗಿ ಅಧಿಕಾರಕ್ಕಾಗಿ ಒಂದು ಧರ್ಮದ ಅನುಯಾಯಿಗಳನ್ನು ಇನ್ನೊಂದು ಧರ್ಮದವರ ವಿರುದ್ಧ ಎತ್ತಿಕಟ್ಟುವುದು ಮತ್ತು ಬಹು ಸಂಖ್ಯಾತರ ಸಂಸ್ಕೃತಿಗೆ ಅಲ್ಪಸಂಖ್ಯಾತರು ಹೊರಗಿನವರು ಎಂದು ವಾದಿಸಿ ಅವರ ಬಗ್ಗೆ ದ್ವೇಷ, ತಿರಸ್ಕಾರಗಳನ್ನು ಬೆಳೆಸುವುದೇ ಕೋಮುವಾದ (ಕೋಮುವಾದದ ರಾಜಕೀಯ, ಜಿ. ರಾಜಶೇಖರ ಮತ್ತು ಫಣಿರಾಜ್) ಯಾವುದೇ ಒಂದು ಸಮಸ್ಯೆ ಕೇವಲ ಪುರುಷರದೋ, ಮಹಿಳೆಯರದೋ, ಮಕ್ಕಳದೋ ಅಥವಾ ವೃದ್ಧರದೋ ಆಗಿರುವುದಿಲ್ಲ. ಆರಂಭದಲ್ಲಿ ಸಮಸ್ಯೆಯೊಂದು ಒಂದು ನಿರ್ದಿಷ್ಟ ಗುಂಪಿನದೆಂಬಂತೆ ನಮಗೆ ಕಂಡುಬಂದರೂ ಅದರ ದುಷ್ಪರಿಣಾಮ ಮಾತ್ರ ಆ ಗುಂಪನ್ನು ಒಳಗೊಂಡಂತೆ ಒಟ್ಟು ಸಮಾಜವನ್ನು ಪ್ರಭಾವಿಸುತ್ತಿರುತ್ತದೆ. ಸಮಾಜದ ಸ್ವಾಸ್ಥ್ಯವನ್ನು ಕೆಡಿಸುವಷ್ಟು ಮತ್ತು ಆ ಮೂಲಕ ಸಮಾಜವನ್ನು ವಿಕಲಾಂಗಗೊಳಿಸುವಷ್ಟು ಪರಿಣಾಮಕಾರಿಯೂ ಆಗಿರುತ್ತದೆ. ಕೋಮುವಾದದ ಸಮಸ್ಯೆಯೂ ಈ ಬಗೆಯದ್ದಾಗಿದೆ. ಇದು ಸಮಾಜದ ಮೇಲೆ ಬೀರುವ ಪರಿಣಾಮಗಳನ್ನು ಕನ್ನಡ-ತೆಲುಗಿನ ಸ್ತ್ರೀವಾದಿ ಲೇಖಕಿಯರು ಕವಿತ್ವೀಕರಿಸಿದ್ದಲ್ಲದೆ ಕೋಮು ಸೌಹಾರ್ದತೆಯ ತತ್ವವೊಂದನ್ನು ತಮ್ಮ ಕವಿತೆಯಲ್ಲಿ ಎತ್ತಿಹಿಡಿದಿದ್ದಾರೆ.

ಬಿ.ಟಿ. ಲಲಿತಾ ನಾಯಕ್ ಅವರು 'ಯುಗಾದಿಗೊಂದು ವಿನಂತಿ' ಕವನದಲ್ಲಿ ಏಕತೆಯ ಆಶಯವನ್ನು ಹೊಂದಿರುವ ಸಂದರ್ಭದಲ್ಲಿಯೇ ನವಯುಗವಾಗಿ ಮೂಡಿಬರುವ ಯುಗಾದಿಗೆ ವಿನಂತಿಸುತ್ತಾ

ಈ ನೆಲದ ಮಕ್ಕಳ ಸಾಮರಸ್ಯಕ್ಕೆ
ಅಸ್ತ್ರವೊಂದನು ಹಿಡಿದು ಬಾ
ಪರಧರ್ಮ ಸಹಿಸುವ
ಕೂಡಿ ಬಾಳುವ
ಚಿಂತನೆಯ ಕಲಶವನು ಹೊತ್ತು ತಾ
ನಿನ್ನಾಗಮನಕೆ ಹೊಸ ಅರ್ಥ ನೀಡುವ
ಶಪಥವೊಂದನು ತೊಟ್ಟು ಬಾ

(ಲಲಿತಾ ನಾಯಕ್ ಬಿ.ಟಿ., ಬಿದಿರು ಮಳೆ ಕಂಟಿಯಲಿ, ಪುಟ-೩೫)

ಎಂದು ಆಹ್ವಾನಿಸುತ್ತಾರೆ. ಹೊಸ ವರುಷಕೆ, ಹೊಸ ನಿರೀಕ್ಷೆಯೊಂದಿಗ ಮತೀಯ ಕಂದಕವನ್ನು ನಿವಾರಿಸಿ, ಮತೀಯ ಸೌಹಾರ್ದವನ್ನು ಕಾಪಾಡುವಲ್ಲಿ ಮುಂದಾಗಬೇಕೆಂಬ ಆಶಯವನ್ನು ವ್ಯಕ್ತಪಡಿಸಿದ್ದಾರೆ. ಯುಗಾದಿ ಚೈತ್ರದ ಹೂ ಚಿಗುರು ಮೂಡಿಸಿದರೆ ಸಾಲದು ಅದು ಬಹುಕಾಲದಿಂದಲೂ ಸಮಾಜದಲ್ಲಿ ಹಾಗೇ ಉಳಿದಿರುವ ಅನಿಷ್ಟಗಳನ್ನು ತೊಲಗಿಸುವ ಚಿಂತನೆಯ ಕಲಶವನ್ನು ಹೊತ್ತು ಬರಬೇಕು ಎಂಬ ಭಾವವನ್ನು ಹೊಂದಿದ್ದಾರೆ. ಕನಸುಗಳೊಂದಿಗೆ ಹೊರಹೊಮ್ಮುವ ಯುಗಾದಿ ಈ ಸಮಾಜದ ಜನರ ಸಾಮರಸ್ಯಕ್ಕೆ ನಾಂದಿಹಾಡಬೇಕು ಎಂದು ಹೇಳುವುದರೊಂದಿಗೆ ಸಮಾಜದಲ್ಲಿನ ಜನರ ಮನಸ್ಸು ಪರಿವರ್ತನೆಯಾಗಿದೆ. ಇಂತಹ ಅನಿಷ್ಟಗಳು, ಪೊಳ್ಳು ನಂಬಿಕೆಗಳು ತೊಲಗಿಸದಿದ್ದರೆ ಹೊಸ ವರ್ಷವಾಗಿ ಬರುವ ಯುಗಾದಿಗೆ ಯಾವ ಅರ್ಥವೂ ಇಲ್ಲ ಎಂಬ ಭಾವವನ್ನು ವ್ಯಕ್ತಪಡಿಸುತ್ತಾರೆ.

ಹಬ್ಬವೆಂಬುದು ಈ ನಾಡಿನ ಜನರಲ್ಲಿ ಸಾಮರಸ್ಯವನ್ನು ಹೆಚ್ಚಿಸಬೇಕೆ ಹೊರತು ವೈಮನಸ್ಸನಲ್ಲ. ಪರಧರ್ಮ ಸಹಿಷ್ಣತೆ ಹಾಗೂ ಕೂಡಿ ಬಾಳುವ ರೀತಿಯನ್ನು ಈ ಹಬ್ಬಗಳು ಕಲಿಸಬೇಕು. ಹಬ್ಬಗಳಾಗಲಿ, ಜಾತ್ರೆಗಳಾಗಲಿ, ಮಂದಿರಗಳಾಗಲಿ, ಮಸೀದಿಗಳಾಗಲಿ ಇವುಗಳ ಮುಖ್ಯ ಉದ್ದೇಶ ಕೋಮು ಸೌಹಾರ್ದತೆಯನ್ನು ಕಾಪಾಡುವಂತಹದ್ದಾಗಿರಬೇಕೆ ಹೊರತು ಕೋಮುಗಲಭೆಗಳನ್ನು ಉಂಟುಮಾಡುವಂತಹದ್ದಿರಬಾರದು ಎಂಬ ಆಶಯವನ್ನು ಇಲ್ಲಿ ವ್ಯಕ್ತಪಡಿಸಿದ್ದಾರೆ.

ಶತಮಾನಗಳಿಂದಲೂ ಕೋಮುವಾದದ ವಿಷದ ಜ್ವಾಲೆಗೆ ಬಲಿಯಾದ ಜನಸಮುದಾಯಗಳು ತಮ್ಮ ಒಡಲಾಳದ ನೋವನ್ನು ತೋಡಿಕೊಂಡಿವೆ. ಸಮಾಜದಲ್ಲಿ ಜನರು ತಾವೇ ನಿರ್ಮಿಸಿಕೊಂಡಿರುವ ಧಾರ್ಮಿಕ ವ್ಯವಸ್ಥೆ ಮೇಲು-ಕೀಳುಗಳಿಂದಾಗಿ ಅಪಾರ ನೋವು, ಹಿಂಸೆ, ಅವಮಾನಕ್ಕೊಳಗಾಗುತ್ತಿದ್ದಾರೆ. ಹಾಗಾಗಿ ಈ ಜಾತಿ-ಮತ-ಪಂಥಗಳನ್ನು ಬಿಟ್ಟು ಒಂದಾಗುವ ಎಂಬ ಆಶಯವನ್ನು ಹೊಂದಿರುವ ಕವಯತ್ರಿ,

ನೀವಾಗಿ
ತೋಡಿಕೊಂಡಿರುವ ಹೊಂಡ ದೊಗರುಗಳ ಮುಚ್ಚಿ
ಕಟ್ಟಿಕೊಂಡಿರುವ ಗೋಡೆ-ಗೋಪುರಗಳ
ಕೆಡವಿ
ಒಂದೇ ಒಂದು ಬಾರಿ ಹೊರ
ಬರುವಿರಾದರೆ
ಮಠ ಮಂದಿರ ಚರ್ಚು ಮಸೀದಿಯ
ಬಾಗಿಲುಗಳು ನಮ್ಮ ನಿಮ್ಮ ಒಲೆಗೆ
ಸೌದೆಗಳಾಗುತ್ತವೆ
(ಲಲಿತಾ ನಾಯಕ್ ಬಿ.ಟಿ., ಬಿದಿರು ಮಳೆ ಕಂಟಿಯಲಿ, ಪುಟ-೮೩)

ಇಲ್ಲಿ ತಾವು ತೋಡಿಕೊಂಡಿರುವ ಹೊಂಡ ದೊಗರುಗಳ ಮುಚ್ಚಿ ಅಂದರೆ ಈ ಜಾತಿ–ಮತ, ಮೇಲು–ಕೀಳು, ಸಣ್ಣತನ ಇತ್ಯಾದಿಗಳನ್ನು ತೊರೆದು, ನಾವು ನಿರ್ಮಿಸಿಕೊಂಡಿರುವ ಮತ, ಮಂದಿರ, ಚರ್ಚು, ಮಸೀದಿಯನ್ನು ತೊರೆದು ಹೊರಬಂದು, ನಾವೆಲ್ಲರೂ ಒಂದೇ ಎಂದು ಒಂದು ಬಾರಿ ಯೋಚಿಸಿದ್ದೇ ಆದರೆ ಸರ್ವಧರ್ಮ ಜಾತಿಗಳು ಒಂದಾಗಿ ಅಪ್ಪಿಕೊಳ್ಳುತ್ತವೆ. ಎಂಬ ದರ್ಶನದ ಆಕಾಂಕ್ಷೆಯನ್ನು ಇಲ್ಲಿ ಕಾಣಬಹುದು. ಎಲ್ಲ ಧರ್ಮಗಳು ಸಹಿಷ್ಣುತೆಯನ್ನು ಭೋದಿಸಿವೆ ಎಲ್ಲ ಮಾನವರನ್ನು ಒಂದುಗೂಡಿಸುವುದು ಬಾಂದವ್ಯ ದೃಡಪಡಿಸುವುದು ಧರ್ಮಗಳ ಕೆಲಸ ಅದಕ್ಕಾಗಿ ನಾವು ಪ್ರೇಮ ಮತ್ತು ಸಹೋದರ ಭಾವನೆಯನ್ನು ಎತ್ತಿಹಿಡಿಯಬೇಕು. ಇಲ್ಲವಾದರೆ ನಮ್ಮ ನಾಗರಿಕತೆಯು ನಾಶವಾಗುವುದು ಎಂದು ಎಚ್ಚರಿಸಿದ್ದಾರೆ. ವೈದೇಹಿ ಅವರು 'ಒಂದು ಕತ್ತಲ ಹಾಡು' ಕವನದಲ್ಲಿ ಕೋಮು ದ್ವೇಷದ ವಿಷ ನಮ್ಮನ್ನು, ನಮ್ಮ ಸಮಾಜವನ್ನು ಘಾಸಿಗೊಳಿಸಿರುವ ಪರಿ ಮತ್ತು ಅಂಥಹ ಗುಂಪುಗಳು ಹುಟ್ಟುಹಾಕಿರುವ ಭಯೋತ್ಪಾದನೆಯನ್ನು ಸೂಕ್ಷ್ಮವಾಗಿ ತೆರೆದಿಟ್ಟಿದ್ದಾರೆ.

ಗಿಡವನೆಡುವ ಬದಲು ಕಿಡಿಯ ನೆಟ್ಟೆವು ನಾವು
ತಿರುಗಾಡಲೆಂದು ಬಂದು
ಆಟವಾಡಲು ಬಂದು ಮೋಸವಾಡಿದೆವು
ಪಾತಿಯಲಿ ಜಾತಿ ಕೋಮು ಬಿತ್ತಿ
ಕಟುಕರಾದೆವು ನಾವು ಜೀವಪರಿಸರಕೆ
ಕುಲ ಕೋಮು ರಾಸಾಯನಿಕವಾದೆವು.

......................................................

ಮೊಳೆದು ನಂಜೇರಿ ಪಸರಿಸುವ ಮುನ್ನವೇ
ಯೇಸು ಈಶ್ವರ ಅಲ್ಲಾ ಎಲ್ಲ ತೇರೇನಾಮ್
ಕರಗಿ ಮೂರನೆ ಕಣ್ಣರಳಲಿ

(ವೈದೇಹಿ, ಹೂವ ಕಟ್ಟುವ ಕಾಯಕ, ಪುಟ–೨೪,೨೫)

ಪ್ರಾಚೀನ ಕಾಲದಿಂದಲೂ ಭಾರತಕ್ಕೆ ವ್ಯಾಪಾರಕ್ಕೆಂದು ಬಂದವರೆಲ್ಲ ಈ ನಾಡಿನಲ್ಲಿ ಕೋಮುವಾದದ ಬೀಜವನ್ನು, ಜಾತಿಯತೆಯ ಬೀಜಗಳನ್ನು ಬಿತ್ತಿ ಇಲ್ಲಿನ ಜೀವ ಪರಿಸರಕೆ ಮಾರಕವಾಗಿರುವುದನ್ನು ಹೇಳುತ್ತಾ, ಮತ–ಮೌಢ್ಯಗಳು ಹಾಗೂ ದೇವರು_ಧರ್ಮದ ಹೆಸರಿನ ಅತಿರೇಕಗಳನ್ನು ಬಿಟ್ಟು ಮಾನವ ಕುಲದ ಏಕತೆಯನ್ನು ಸಾಧಿಸುವ ಆಶಯದೊಂದಿಗೆ, "ಯೇಸು ಈಶ್ವರ, ಅಲ್ಲಾ ಎಲ್ಲ ತೇರೇನಾಮ್ ಕರಗಿ ಮೂರನೆ ಕಣ್ಣರಳಲಿ" ಎಂಬ ಪ್ರಗತಿಪರ ನಿಲುವನ್ನು ವ್ಯಕ್ತಪಡಿಸಿದ್ದಾರೆ. ವೈದೇಹಿ ಅವರ "ಮದ್ದು ತೇಯುತ್ತ ಕಾಯುತ್ತ" ಎಂಬ ಕವಿತೆಯು ಕೋಮುಸೌಹಾರ್ದತೆಯನ್ನು ಸಮರ್ಥವಾಗಿ ಹಿಡಿದಿಟ್ಟಿದೆ.

ಯಾವ ಕೋಮಿನ ಸೂರ್ಯ, ಅಷ್ಟದಿಕ್ಕು?
ಯಾವ ಕೋಮಿನ ಚಂದ್ರ ಭೂಮಿ ಬೆಳಕು?
ಯಾವ ಕೋಮಿನ ಮಳೆ ಸುರಿಯುತಿದೆ ಈ ಪಾಟಿ?
ಯಾವ ಕೋಮಿನ ಒಡಲ ರಾಗ ಧಾಟಿ
ಕೋಮು ಇದೆಯೇ ನೆರಳು, ನರಳುವ ಗಾಯಕ್ಕೆ
ಬಗೆ ಹಸಿವಿಗೆ ಪ್ರಸವ ವೇದನೆಗೆ
ಮಗು ನಗುವಿಗೆ, ತೊದಲಿಗೆ

(ವೈದೇಹಿ, ಹೂವ ಕಟ್ಟುವ ಕಾಯಕ, ಪುಟ-೨೨)

ಮಾನವ ಸಂಕುಲಕ್ಕೆ ಜೀವಾಳವಾಗಿರುವ ಪಂಚಭೂತಗಳು, ಗಾಳಿ, ನೀರು, ಸೂರ್ಯ, ಚಂದ್ರ, ಭೂಮಿಗೆ ಜಾತಿ, ಧರ್ಮವೆಂಬುದು ಇಲ್ಲ ಇವುಗಳಿಗಿಲ್ಲದ ಜಾತಿ, ಧರ್ಮ ಮನುಷ್ಯನಿಗೇಕೆ? ಎಂದು ಪ್ರಶ್ನಿಸುತ್ತ ಸುರಿಯೋ ಮಳೆಗೆ, ನೆರಳಿಗೆ, ನರಳುವ ಗಾಯಕ್ಕೆ ಕೋಮು ಎಂಬುದು ಇದೆಯೇ? ಹಸಿವೆಗೆ, ಪ್ರಸವವೇದನೆಗೆ, ಮಗುವಿನ ನಗುವಿಗೆ ಕೋಮು ಎಂಬುದು ಇಲ್ಲ. ಸಮಾಜದಲ್ಲಿ ಜನರು ತಾವೇ ನಿರ್ಮಿಸಿಕೊಂಡಿರುವ ಜಾತಿ ವ್ಯವಸ್ಥೆ, ಧರ್ಮ, ಮೇಲು-ಕೀಳುಗಳಿಂದಾಗಿ ಅಪಾರ ನೋವು, ಹಿಂಸೆ, ಅವಮಾನಕ್ಕೆ ಒಳಗಾಗುತ್ತಿದ್ದಾರೆ. ಕೋಮುವಾದವನ್ನು ಹುಟ್ಟುಹಾಕುವ ಇಂತಹ ಅನಿಷ್ಟ ಪದ್ಧತಿಗಳನ್ನು ಬಿಟ್ಟು ಒಂದಾಗುವ ಎಂಬ ಆಶಯವನ್ನು ವ್ಯಕ್ತಪಡಿಸಿದ್ದಾರೆ.

ತೆಲುಗು ಸ್ತ್ರೀವಾದಿ ಲೇಖಕಿಯರು ಸಹ ತಮ್ಮ ಕಾವ್ಯದಲ್ಲಿ ಕೋಮುಸೌಹಾರ್ದತೆಯ ತತ್ವವೊಂದನ್ನು ಎತ್ತಿಹಿಡಿದಿರುವುದನ್ನು ಕಾಣಬಹುದಾಗಿದೆ. ಕೋಮು ಹಿಂಸೆಯನ್ನು ನಡೆಸಲು ಮಹಿಳೆಯರನ್ನು ಒಂದು ಮಾಧ್ಯಮವಾಗಿ ಬಳಸಿಕೊಳ್ಳಲಾಗುತ್ತಿದೆ. ಇದು ಕೋಮುವಾದಿ ಶಕ್ತಿಗಳು ಹುಟ್ಟುಹಾಕಿದ ಅನಿಷ್ಟ ಪದ್ದತಿ ಎಂದು ಹೇಳಲು ಸಾಧ್ಯವಿಲ್ಲ. ಪಿತೃಪ್ರಧಾನ ಸಂಸ್ಕೃತಿಗಳು ಎಲ್ಲೆಲ್ಲಿವೆಯೋ ಅಲ್ಲೆಲ್ಲ ಈ ಮನೋಧರ್ಮ ಹಲವು ನೆಲೆಗಳಲ್ಲಿ ವ್ಯಾಪಿಸಿಕೊಂಡಿದೆ.

ಕೋಮುವಾದಗಳು ಜಾತಿ, ಧರ್ಮ, ದೇವರ ಹೆಸರಲ್ಲೆ ನಡೆದರೂ ಅದರ ಪರಿಣಾಮಗಳು ಮಾತ್ರ ಸಾಮಾನ್ಯ ಜನರ ಮೇಲೆ ಬೀರುತ್ತಿವೆ. ಇದರಿಂದ ಸಂಭವಿಸಿದ ಮಾನಹಾನಿ, ಪ್ರಾಣಹಾನಿಯನ್ನು ನೋಡದೆ ಮೂಗು ಮುಚ್ಚಿಕೊಳ್ಳುವವರನ್ನು ಖಂಡಿಸುತ್ತ ತಮ್ಮ ಕೈಗಳನ್ನು ಮೂಗು ಮುಚ್ಚಿಕೊಳ್ಳುವುದಕ್ಕೆ ಬಳಸದೆ ಸಮಾನತೆ, ಸಹಬಾಳ್ವೆಯನ್ನು ತರುವುದಕ್ಕಾಗಿ ಕೈಗಳನ್ನು ಜೋಡಿಸಿ ಎಂಬುದನ್ನು ಷಹಜಾನ ಅವರು 'ಜಖ್‌ಮಿ' ಕವಿತೆಯಲ್ಲಿ ವ್ಯಕ್ತಪಡಿಸಿದ್ದಾರೆ.

ನಮಗೀಗ ಸಾಧ್ವಿಮಣೀಗಳು, 'ಪುರೋಹಿತರು' ಜಿಹಾದಿಗಳು ಬೇಡ!
ಮನುಷ್ಯರು ಬೇಕು ಕೇವಲ ಮನುಷ್ಯರು
ಕೋಪ ಬಂದರೆ ಹೊಡೆದಾಡಿ ಮತ್ತೆ ಒಂದಾಗುವ

ಬೀದಿ ನಾಯಿಮರಿಗಳಂತಹ ಮನುಷ್ಯರೇ ಬೇಕು
ದುಃಖವಾದರೆ ಅಣ್ಣಾ, ಭಯ್ಯ... ಎಂದು ತಬ್ಬಿಕೊಂಡು ಅಳುವ
ಹಿಂದೂ ಮುಸ್ಲಿಂ ಕುಟುಂಬಗಳು ಬೇಕು[⁷]

(ಷಾಜಹಾನ, ದರ್ದಿ, ಪುಟ–೨೮)

ಕೋಮುವಾದ ಹಿಂಸೆಯಿಂದ ನೋಂದು ಬೆಸತ್ತ ಕವಯತ್ರಿ ನಮಗೆ ಈ ಸಾದ್ವಿಮಣಿಗಳು, ಪುರೋಹಿತರು, ಜಿಹಾದಿಗಳು ಬೇಡ ಮಾನವೀಯತೆಯಿಂದ ನೋಡುವ ಕೇವಲ ಮನುಷ್ಯರಷ್ಟೇ ಬೇಕು ಕೋಪ ಬಂದರೆ ಹೊಡೆದಾಡಿಕೊಂಡು ಮತ್ತೆ ಒಂದಾಗುವ ಬೀದಿ ನಾಯಿಗಳಂತಹ ಮನುಷ್ಯರೆ ಬೇಕು ಎಂದು ಹೇಳುತ್ತ ದುಃಖವಾದರೆ ಕಷ್ಟಗಳು ಬಂದರೆ ಅಣ್ಣ, ಭಯ್ಯಾ ಎಂದು ತಬ್ಬಿಕೊಂಡು ಅಳುವ ಹಿಂದೂ–ಮುಸ್ಲಿಂ ಕುಟುಂಬಗಳೇ ಬೇಕು ಎಂದು ಹೇಳುವ ಮೂಲಕ ಕೋಮು ಸೌಹಾರ್ದತೆಯ ಆಶಯವನ್ನು ವ್ಯಕ್ತಪಡಿಸಿದ್ದಾರೆ.

ಭೂಮಿಯ ಮೇಲೆ ಮನುಷ್ಯರು ಹುಟ್ಟಿ ಬಂದಿರುವುದು ಬದುಕುವುದಕ್ಕಾಗೆ ಹೊರತು ಸಾಯಲು ಅಲ್ಲ. ಹುಟ್ಟು–ಸಾವಿನ ರಹಸ್ಯ ಮನುಷ್ಯನಿಗೆ ಒಗಟಾಗಿರ ಬಹುದು ಆದರೆ ಬದುಕು ಒಗಟಲ್ಲ ಅದನ್ನು ರೂಪಿಸಿಕೊಳ್ಳವ ಕುಶಲತೆ ಮನುಷ್ಯ ಬುದ್ದಿಯಲ್ಲಿದೆ. ಬದುಕು ಎಂದ ಮೇಲೆ ಯಾವುದೇ ಜಾತಿಯ ಮನುಷ್ಯನಿಂದ ಪ್ರಮಾದಗಳು ಘಟಿಸುವುದು ಸಹಜ ಪರಸ್ಪರ ಸಂಧಾನ ಸೂತ್ರಗಳಿಂದ ಹರವಾದ ತಿಳುವಳಿಕೆಯಿಂದ ಸಂಯಮದಿಂದ ತಪ್ಪುಗಳನ್ನು ಕಳೆದುಕೊಂಡು ಒಪ್ಪಿತವಾದ ರೀತಿಯಲ್ಲಿ ನಡೆಯಲು ಸಾಧ್ಯವಿದೆ ಎಂಬುದನ್ನು ಈ ಕವಿತೆಯಲ್ಲಿ ವ್ಯಕ್ತಪಡಿಸಿದ್ದಾರೆ.

ಬಲಹೀನತೆಯಾದರೂ ಬಲವಾದರೂ ದೇವರೇ ಅಲ್ಲವೇ!
ಯಾವ ಕಷ್ಟ ಬಂದರೂ 'ಯಾ ಅಲ್ಲಾ, ಹೇ ರಾಮ್' ಎಂದು
ನಿಟ್ಟುಸಿರು ಬಿಡುತ್ತ
ಹೆತ್ತಮಕ್ಕಳನ್ನು ಅದೇ ಹೆಸರಿನಿಂದ ಕರೆಯುತ್ತಾ
ಪ್ರಾರ್ಥನೆಗಳನ್ನು ಮಾಡಿಕೊಳ್ಳುತ್ತ
ಕರ್ಮ ಸಿದ್ಧಾಂತವನ್ನು ಕುತ್ತಿಗೆಗೆ ಸುತ್ತಿಕೊಂಡೇ ಅಲ್ಲವೇ[೧೦]

(ಕೊಂಡೆಪೋಡಿ ನಿರ್ಮಲ, ಕೊಂಡೆಪೋಡಿ ನಿರ್ಮಲ ಕವಿತ್ವಂ (ಸಮಗ್ರ), ಪುಟ–೨೩೫)

ಎಲ್ಲ ಮತಗಳ ಬೇರು ಒಂದೇ. ಮತಗುರುಗಳು, ಮತಸಂಸ್ಥಾಪಕರು ಎಲ್ಲ ದೇಶಗಳಲ್ಲಿ, ಎಲ್ಲ ಕಾಲಗಳಲ್ಲಿ ಹುಟ್ಟಿರುವರು. ದೇವರು ಒಬ್ಬ ಅವನನ್ನು ನಂಬಬೇಕೆಂಬ ತತ್ವವನ್ನೇ ಎಲ್ಲರೂ ಹೇಳಿರುವುದು ಅದರಲ್ಲಿ ಹೆಚ್ಚು ಕಡಿಮೆಯಾದುದು ಕಂಡುಬಂದಿಲ್ಲ. ಮೇಲು–ಕೀಳು ಬಲವುಳ್ಳವ–ಬಲವಿಲ್ಲದವ, ಒಡೆಯ–ಆಳು ಇವೆಲ್ಲ ಭಾವಗಳುಳ್ಳ ಮಾನವ ಜಾತಿಯನ್ನು ಒಂದೇ ದಾರದಲ್ಲಿ ಪೋಣಿಸುವ ಶಕ್ತಿಯೇ ದೇವರು ಅವನು ಬೇರೆ ಬೇರೆ ಹೆಸರಿನಿಂದ ಬೇರೆ ಬೇರೆಯಾಗಿ ಕಂಡರೂ ಒಬ್ಬನೇ. ನಮ್ಮ ಪ್ರಾರ್ಥನೆ–ಪೂಜೆಗಳನ್ನು ಸ್ವೀಕರಿಸುವವ ಒಬ್ಬ ದೇವರೇ. ನಾವೆಲ್ಲರೂ ಒಬ್ಬ

ತಂದೆಯ ಮಕ್ಕಳು ಎಂಬ ಭಾವ ಬಂದೊಡನೆ ನಮ್ಮೆಲ್ಲರ ಹೃದಯ ಮನಸ್ಸು ಒಂದಾಗುವವು. ಆಗ ಕೋಮು ಸೌಹಾರ್ದತೆ ಎಲ್ಲೆಡೆ ನೆಲೆಯೂರುತ್ತದೆ ಎಂಬ ಭಾವವನ್ನು ಕೊಂಡೆಪೋಡಿ ನಿರ್ಮಲ ಅವರು ವ್ಯಕ್ತಪಡಿಸಿದ್ದಾರೆ.

**೪. ಆರ್ಥಿಕತೆಯ ಪ್ರಶ್ನೆ :**

ಬಿ.ಟಿ. ಲಲಿತಾ ನಾಯಕ್ ಅವರು "ಬೋರ ಕಂಡ ದುಃಸ್ವಪ್ನ" ಕವಿತೆಯಲ್ಲಿ ಆರ್ಥಿಕ ಅಸಮಾನತೆ ಹಾಗೂ ಬಡತನವನ್ನು ಕುರಿತಂತೆ ದುರಂತ ಮತ್ತು ವ್ಯಂಗ್ಯದಿಂದ ಅತ್ಯಂತ ಪರಿಣಾಮಕಾರಿಯಾಗಿ ಬಿಂಬಿಸಿದ್ದಾರೆ. ಆರ್ಥಿಕ ನೆಲೆಯೊಳಗೆ ಅಸಮಾನತೆಯನ್ನು ಅನುಭವಿಸುತ್ತಿರುವ ಬಡ ಬೋರ ಕನಸು ಕಾಣುತ್ತಾ ಆ ಹಳ್ಳಿ ತುಂಬೆಲ್ಲ ಸುಣ್ಣ ಬಣ್ಣದ ಗೋಡೆ ಮನೆಗಳು, ಉಪವಾಸವೆಂಬುದನೆ ಕಂಡಿಲ್ಲ ಆ ಮಂದಿ, ಎತ್ತಿಲ್ಲ ನೊಗವಿಲ್ಲ ಯಂತ್ರವೇ ಉಳುತಲಿದೆ, ಸ್ವಂತ ಹೊಲದಲಿ ಬೋರ ಅಡ್ಡಾಡುವನೆ, ವೀಳ್ಯವನು ಮೆಲ್ಲುತ ಪತ್ರಿಕೆಯ ಪುಟ ತೆರೆದು ತಲೆ ಬರಹ ಓದುತ್ತಾ ಪುಲಕಗೊಂಡ, " ಭರದ ಮುನ್ನಡೆಯಲ್ಲಿ ಭಾರತ ! ಬಡವರಿಗೆ ಜಮೀನು ಹಂಚಿಕೆ ! ಭೂ ಹೀನರೆ ಇಲ್ಲದ ಏಕೈಕ ರಾಷ್ಟ್ರ...! ಎಂದು ಹೇಳುತ್ತಿರುವುದು ವ್ಯಂಗ್ಯವೇ ಸರಿ. ಹೀಗೆ ಬಡ ಬೋರ

ಹೊಂಗೆ ನೆರಳಲಿ ಮಲಗಿ ಕನಸು ಕಾಣುತಿರಲು
ಭಾರಿಘರ್ಜನೆ ಕೇಳಿ ಅವ ಗಡಬಡಿಸಿ ಎದ್ದ
ಹಟ್ಟಿ ಕುಲುಮೆಯಲ್ಲಿ ನಿಗಿನಿಗಿವ ಕೆಂಡಗಳಂತ
ತನ್ನೊಡೆಯ ಸಿಟ್ಟಾಗಿ ಕೆಕ್ಕರಿಸಿ ನೋಡ್ವಂಥ
ಜೋಡಿ ಉರಿಗಣ್ಣುಗಳು ಆಕ್ರಮಣ ಮಾಡಿರಲು
ಬೋರ ಜೋರಾಗಿ ಚೀರಿಕೊಂಡ

(ಲಲಿತಾ ನಾಯಕ್ ಬಿ.ಟಿ., ಬಿದಿರು ಮಳೆ ಕಂಟಿಯಲಿ, ಪುಟ-೭೯)

ಹೀಗೆ ಶ್ರೀಮಂತನ ಹಿನ್ನೆಲೆಯಲ್ಲಿ ಕನಸು ಕಾಣುತ್ತಿದ್ದ ಬಡ ಕೂಲಿ ಕಾರ್ಮಿಕ ಬೋರ ಮತ್ತು ಶ್ರೀಮಂತ ವರ್ಗದ ನಡುವಿನ ವೈವಿಧ್ಯದ ಸಂಗತಿಯನ್ನು ವ್ಯಂಗ್ಯದೊಂದಿಗೆ ಚಿತ್ರಿಸಿದ್ದಾರೆ. ಕವಿತೆಯಲ್ಲಿ ನಿದ್ದೆ, ಕನಸು, ಎಚ್ಚರಗಳ ವಿನ್ಯಾಸದಲ್ಲಿ ರಚಿತವಾಗಿದ್ದು ಅಸಮಾನತೆಯ ಸಮಾಜ ಸೃಷ್ಟಿಸಿರುವ ಬಡವ-ಶ್ರೀಮಂತ ಎಂಬ ಎರಡು ಲೋಕಗಳ ಚಿತ್ರಣವನ್ನು ನೀಡುತ್ತದೆ. ಸ್ಥಾಪಿತ ವ್ಯವಸ್ಥೆಯನ್ನು ಸಂಪೂರ್ಣ ನಾಶ ಮಾಡದ ಹೊರತು ಹೊಸ ಹುಟ್ಟು ಸಾಧ್ಯವಿಲ್ಲ ಎಂಬ ಆಶಯ ಇಲ್ಲಿ ಪ್ರತಿಪಾದಿತವಾಗಿದೆ.

ಪ್ರತಿಯೊಂದು ಹಂತದಲ್ಲಿ ಬಡವರು ಪಡುತ್ತಿರುವ ಬದುಕಿನ ಪಾಡನ್ನು ಹೇಳುತ್ತಲೇ, ಹೊಲ, ಮನೆ ಇಲ್ಲದೆ, ಆಸ್ತಿ ಸ್ವತ್ತುಗಳಿಲ್ಲದೆ ಇವರು ಒಂದೊತ್ತಿನ ಕೂಳಿಗಾಗಿ ಬೆವರು ಸುರಿಸಿ ಕಷ್ಟಪಟ್ಟು ದುಡಿಯುತ್ತಿದ್ದಾರೆ. ಈ ರೀತಿ ದುಡಿಯುವ ವರ್ಗವನ್ನು ಶ್ರೀಮಂತವರ್ಗ ಇವರನ್ನು ಕೀಳು

ದೃಷ್ಟಿಯಿಂದ ನೋಡಲಾಗುತ್ತಿದೆ. ಇವರು ಹಾಕಿದ್ದನ್ನು ಉಂಡು, ಹೇಳಿದ ಕೆಲಸವನ್ನು ಮಾಡಿಕೊಂಡು ಹೋಗಬೇಕು ಎಂಬಂತೆ ನಡೆಸಿಕೊಂಡಿದೆ ಎಂಬುದನ್ನು 'ದುಡಿವ ಕರುಳಿನ ಕೂಗು' ಕವಿತೆಯಲ್ಲಿ ವ್ಯಕ್ತಪಡಿಸಿದ್ದಾರೆ.

ಹೊಲ ಮನೆ ಎತ್ತು ಸ್ವತ್ತುಗಳ ಒಡೆಯರಲ್ಲ ನಾವು
ತೋಳ್ಬಲವನ್ನೇ ಆಶ್ರಯಿಸಿ ಬದುಕುವವರು
ಗೇಣು ಹೊಟ್ಟೆ ಬಟ್ಟೆಗೆ ಹೋರಾಟ ನಡೆಸುತ್ತ
ಕಾಲ ಚಕ್ರದಲಿ ನುರಿದು ಹೋಗುವವರು
.............................................................
ರಕ್ತ ಬೆವರಾಗಿಸಿ ನಾವು ದುಡಿದರೇನು?
ಕಡೆಗೆ ಹರಿದೆಸೆದ ಚಪ್ಪಲಿ ಚೂರಾಗುವವರು
ಬಳುವಳಿಯಾಗಿಲ್ಲಿ ಬಿಟ್ಟು ಹೋಗುವವರು...
ಕೂಗಿ ಕೇಳುತ್ತಿದ್ದೇವೆ ಈಗ ಹೇಳಿ
ಬೆನ್ನಿಗಂಟಿದ ನಮ್ಮೀ ಬಡತನಕೆ
ಸಾವೇ ಪರಿಹಾರವೇನು?
(ಲಲಿತಾ ನಾಯಕ್ ಬಿ.ಟಿ., ಬಿದಿರು ಮಳೆ ಕಂಟಿಯಲಿ, ಪುಟ-೧೦೮,೧೦೯)

ಕಾಲ ಸರಿದಂತೆ ಪ್ರಜ್ಞಾವಂತರಾದ ಬಡಜನರಲ್ಲಿ ಎಚ್ಚರ ಮೂಡಿದೆ. ಹಾಗಾಗಿ ಇಂತಹ ಸ್ಥಾಪಿತ ವ್ಯವಸ್ಥೆಯನ್ನು ಪ್ರಶ್ನಿಸಿದ್ದಾರೆ. ಬಡ ಶ್ರಮಿಕ ವರ್ಗ ಈಗ ತನ್ನೆಲ್ಲ ಶಕ್ತಿಯನ್ನು ಒಗ್ಗೂಡಿಸಿಕೊಂಡು ಶೋಷಣೆಯನ್ನು ಕಿತ್ತೊಗೆದು ಮೇಲೇಳುವ ಸನ್ನಾಹದಲ್ಲಿದೆ ಎಂಬುದನ್ನು ಇಲ್ಲಿ ವಿವರಿಸಲಾಗಿದೆ.

ತೆಲುಗಿನ ದಲಿತ ಸ್ತ್ರೀವಾದಿ ಕವಯತ್ರಿಯಾದ ಚಲ್ಲಪಲ್ಲಿ ಸ್ವರೂಪರಾಣಿ ಅವರು'ಮಟ್ಟಿ ಚೆತುಲು' ಕವಿತೆಯಲ್ಲಿ ಹೀಗೆ ಹೇಳುತ್ತಾರೆ ತನ್ನವರ ಬಡತನದ, ಅಜ್ಞಾನದ ದಾರುಣ ಸ್ಥಿತಿಯಿಂದಾಗಿ ಬಿಟ್ಟಿ ದುಡಿಮೆ ಮತ್ತು ತಲೆಮಾರುಗಳ ಜೀತಕ್ಕೆ ಉತ್ತರಗಳೇ ಸಿಗುತ್ತಿಲ್ಲ. ಓ ನಾಮವನು ಜಪಿಸುತ್ತ ವರ್ಣಮಯ ಬದುಕನ್ನು ಮೀಸಲಾಗಿಸಿಕೊಂಡ ಮೇಲ್ವರ್ಗದವರೊಂದಿಗೆ ಸಮನಾಗಿ ನಿಲ್ಲಲು ಶ್ರೇಣಿಕೃತ ವ್ಯವಸ್ಥೆಯೆ ತೊಡಕಾಗಿದೆ ಎಂಬುದನ್ನು ವ್ಯಕ್ತಪಡಿಸಿದ್ದಾರೆ.

ಲಾಲನೆ ಪಾಲನೆ ಇಲ್ಲದ ಮುದ್ದಿನ ಮಗಳು
ಕೊಚ್ಚೆ ಗುಂಡಿಯಲ್ಲಿ ಆಡುತ್ತಿದ್ದರೂ
ಏನೂ ಆಗಿಲ್ಲವೆಂಬಂತೆ ಆ ಮಣ್ಣ ಕೈಗಳು
ಕಳೆ ತೆಗೆಯುತ್ತಲೇ ಇರುತ್ತವೆ
ಮೈ ಮುರಿದು ಕಷ್ಟಪಟ್ಟು ದುಡಿದು

ಮಣ್ಣಿನಲ್ಲಿ ಚಿನ್ನದ ಹೂಗಳನ್ನು ಹೂತರೆ
ಕೂಲಿಕಾಸು ಹತ್ತಿರ ಕೂಡ
ಆಕೆಯನ್ನು ಹೆಣ್ಣುತನ ಅಣಕಿಸುತ್ತದೆ[೧೧]
(ಚಲ್ಲಪಲ್ಲಿ ಸ್ವರೂಪರಾಣಿ, ಪದುನೆಕ್ಕಿನ ಪಾಟ, ಮಟ್ಟಿಚೇತುಲು, ಪುಟ-೧೨)

ಎಷ್ಟೇ ಶ್ರಮವಹಿಸಿ ದುಡಿದರೂ ಕನಿಷ್ಟ ಪಕ್ಷದ 'ಕೂಲಿ'ಯು ಕೂಡ ಸರಿಯಾಗಿ ದಕ್ಕುವುದಿಲ್ಲ. ಹೆಣ್ಣೆಂಬ ಕಾರಣಕ್ಕೆ ಕಡಿಮೆ ಕೂಲಿಯನ್ನು ನೀಡಲಾಗುತ್ತದೆ. ಸಮಾನ ಕೆಲಸಕ್ಕೆ ಸಮಾನ ಕೂಲಿ ಇರುವುದಿಲ್ಲ. ಮಹಿಳೆಯರನ್ನು ಈ ಸಮಾಜ ಗುಲಾಮಳನ್ನಾಗಿ ನಡೆಸಿಕೊಳ್ಳಲಾಗುತ್ತಿದೆ. ತನ್ನ ಕುಟುಂಬವನ್ನಾಗಲಿ, ಮಕ್ಕಳನ್ನಾಗಲಿ ನೋಡಿಕೊಳ್ಳಲು ಸಮಯವಿಲ್ಲದಷ್ಟು ದುಡಿಮೆಯಲ್ಲಿ ನಿರತಳಾಗಿರುತ್ತಾಳೆ. ಎಷ್ಟೇ ಶ್ರಮವಹಿಸಿ ದುಡಿದರೂ ದಕ್ಕುವ ಪ್ರತಿಫಲ ಮಾತ್ರ ಅತ್ಯಂತ ಕಡಿಮೆಯದಾಗಿರುತ್ತದೆ.

ಕಣ್ಣು ತೆರೆದಾಗಿನಿಂದ
ಕಣ್ಣೀರೆ ಕಣ್ಣಿನಲ್ಲಿ ತುಂಬಿಕೊಂಡವಳು
ಅಮ್ಮ ಅಮ್ಮಮ್ಮನಿಗೆ ಬದಲು
ದೊರೆಸಾನಿ ಎಂದು ಅತ್ತವಳು
ಹೊಟ್ಟೆ ತುಂಬ ತಿಂದದ್ದು ಕನಸಿನಲ್ಲಿಯೇ[೧೨]
(ವಿಜಯಲಕ್ಷ್ಮಿ ಜಿ., ಪದುನೆಕ್ಕಿನ ಪಾಟ, ಪನಿಪಿಲ್ಲ, ಪುಟ-೯)

ದಿನವಿಡೀ ದುಡಿದರೂ ಜಮೀನ್ದಾರರು ಕನಿಷ್ಟ ಪಕ್ಷ ಹೊಟ್ಟೆ ತುಂಬ ಅನ್ನವನ್ನಾದರೂ ಬಡಿಸುವುದಿಲ್ಲ. ಪಶುಗಳಿಗಿಂತ ನಾಯಿಗಳಿಗಿಂತ ಹೀನಾಯವಾಗಿ ದುಡಿವ ಬಡಜನತೆಯನ್ನು ನೋಡಲಾಗುತ್ತಿದೆ. ದುಡಿಯುವ ವರ್ಗದ ಜನರ ಸ್ಥಿತಿಗತಿಯನ್ನು ಚಿತ್ರಿಸುತ್ತಲೇ ತಾವು ಅನುಭವಿಸಿದ ಅಸಹಾಯಕತೆಯ ನೆಲೆಗಳನ್ನು ಶೋಧಿಸಿದ್ದಾರೆ. ತಳ ಸಮುದಾಯಗಳ ಮಹಿಳೆಯರು ಮನೆಯ ಒಳಗೂ ಹಾಗೂ ಹೊರಗು ದುಡಿಯಬೇಕಾಗಿರುವುದರಿಂದ ಒಂದು ರೀತಿಯ ಚಲನಶೀಲತೆಯನ್ನು ಹೊಂದಿರುತ್ತಾರೆ. ಕೆಳವರ್ಗದ ಕುಟುಂಬಗಳಲ್ಲಿ ಇಡೀ ಮನೆಯ ಜವಾಬ್ದಾರಿಯು ದುಡಿಯುವ ಮಹಿಳೆಯ ಹೆಗಲ ಮೇಲೆ ಬಿದ್ದಿರುತ್ತದೆ. ಈ ಮಹಿಳೆಯರು ಅಥವಾ ಕೂಲಿ ಕೆಲಸಗಾರರು ದುಡಿಯುವ ಕ್ಷೇತ್ರದಲ್ಲಿನ ಅನ್ಯಾಯವನ್ನು ಮತ್ತು ಮನೆಯಲ್ಲಿ ಗಂಡನಿಂದ ನಡೆಯುವ ದೌರ್ಜನ್ಯವನ್ನು ಅನುಭವಿಸಿದರು ತಮ್ಮ ಸಂಸಾರದ ಆಗು-ಹೋಗುಗಳನ್ನು ತಾವೇ ಸ್ವತಂತ್ರವಾಗಿ ನಿರ್ವಹಿಸಬೇಕಾಗುತ್ತದೆ ಎಂಬ ವಿಚಾರಗಳನ್ನು ಹೇಳುತ್ತಾ ಚಲ್ಲಪಲ್ಲಿ ಸ್ವರೂಪರಾಣಿ 'ಅವರು ಮಂಕೇನ ಪುವ್ವು' ಕವಿತೆಯಲ್ಲಿ ದುಡಿಯುವ ಹಳ್ಳಿಯ ಮಹಿಳೆಯು ಎದುರಿಸುವ ಸಮಸ್ಯೆಯೊಂದನ್ನು ತೆರೆದಿಟ್ಟಿದ್ದಾರೆ.

ಕೂಲಿ ಕಾಸಿಗಾಗಿ ಹೊಲದ ಕೆಲಸಕ್ಕೆ ಹೋದರೆ
ಅಲ್ಲಿ ಜಮೀನ್ದಾರನ ಬೆವರಿನ ಜೊತೆ

ನನ್ನನ್ನೂ ಕೂಡ ದೋಚಿಕೊಳ್ಳಬೇಕೆಂದು ಹೊಂಚು ಹಾಕಿದಾಗ
ನನ್ನನ್ನು ನಾನು ಬೀಜವಾಗಿ ಭೂಮಿಯಲ್ಲಿ ಹೂತುಕೊಳ್ಳಬೇಕೆನಿಸಿತು[೧೩]
(ಚಲ್ಲಪಲ್ಲಿ ಸ್ವರೂಪರಾಣಿ, ಮಂಕೇನ ಪುವ್ವು, ಪುಟ–೩)

ಕುಟುಂಬದಲ್ಲೂ ಕೂಡ ಮಹಿಳೆಯರೇ ಬಹಳಷ್ಟು ಕಷ್ಟಪಡಬೇಕಾಗಿರುವ ವ್ಯಕ್ತಿಗಳು. ಇದಕ್ಕೆ ಕಾರಣ ಕುಟುಂಬದಲ್ಲಿನ ಆರ್ಥಿಕ ಒತ್ತಡ ಅಥವಾ ಕುಟುಂಬದ ತೊಂದರೆ, ಇವುಗಳೇ ಮಹಿಳೆಯರ ಅಂತಿಮ ಒತ್ತಡಗಳು ಇದನ್ನು ಸರಿದೂಗಿಸಲು ಕೂಲಿಯ ಹಣಕ್ಕಾಗಿ ಹೊಲದ ಕೆಲಸಕ್ಕೆ ಹೋದರೆ ಕಾಮಾಂದ ಜಮೀನ್ದಾರರಿಂದ ಲೈಂಗಿಕ ಶೋಷಣೆಗೆ ಗುರಿಯಾಗಬೇಕಾಗುತ್ತದೆ. ಎಷ್ಟೇ ಸಮಸ್ಯೆಗಳಿದ್ದರೂ ತನ್ನ ಕೆಲಸ ಕಾರ್ಯಗಳನ್ನು, ಜವಾಬ್ದಾರಿಗಳನ್ನು ಮಹಿಳೆಯರು ನಿಭಾಯಿಸಲೇಬೇಕಾಗುತ್ತದೆ ಎನ್ನುವಂತಹ ವಿಚಾರವನ್ನು ಈ ಕವಿತೆಯಲ್ಲಿ ವ್ಯಕ್ತಪಡಿಸಿದ್ದಾರೆ.

# ಸಮಾರೋಪ

ಕನ್ನಡ–ತೆಲುಗು ಸ್ತ್ರೀವಾದಿ ಸಾಹಿತ್ಯವನ್ನು ತೌಲನಿಕವಾಗಿ ನೋಡಬೇಕೆಂದು ಮಾಡಲಾದ ಈ ಅಧ್ಯಯನವು ಏಳು ಅಧ್ಯಾಯಗಳನ್ನು ಒಳಗೊಂಡಿದೆ. ಪ್ರತಿ ಅಧ್ಯಾಯವು ಪ್ರತ್ಯೇಕ ಪರಿಕಲ್ಪನೆಗಳನ್ನು ಒಳಗೊಂಡಿದ್ದು, ಇವುಗಳ ಕುರಿತಾಗಿ ವಿಸ್ತೃತವಾಗಿ ಈ ಹಿಂದಿನ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ. ಸಮಾರೋಪದಲ್ಲಿ ಒಟ್ಟು ಅಧ್ಯಯನದ ಸಾರಾಂಶ ಏನು ಎಂಬುದನ್ನು ತಿಳಿಸಲಾಗಿದೆ.

ಕನ್ನಡ–ತೆಲುಗಿನ ಎಲ್ಲಾ ಸ್ತ್ರೀವಾದಿ ಲೇಖಕಿಯರು ಮಹಿಳೆಯ ಜೀವನವನ್ನು ಸುಧಾರಿಸುವ ಹಾಗೂ ಶೋಷಣೆಯಿಂದ ಮುಕ್ತಗೊಳಿಸುವ ಆಶಯದೊಂದಿಗೆ ಕಾವ್ಯ ರಚನೆಗೆ ತೊಡಗಿದವರಾಗಿದ್ದಾರೆ. ಈ ನಿಟ್ಟಿನಲ್ಲಿ ಸ್ತ್ರೀ ಶೋಷಣೆಯನ್ನು ಚಿತ್ರಿಸಿ ಈ ಶೋಷಣೆಗೆ ಪುರುಷ ಪ್ರಧಾನ ವ್ಯವಸ್ಥೆ ಹೇಗೆ ಕಾರಣವಾಗಿದೆ ಎಂಬುದನ್ನು ಕವಿತ್ವೀಕರಿಸಿದ್ದಲ್ಲದೆ, ಲಿಂಗ ಸಮಾನತೆಯ ತತ್ವವೊಂದನ್ನು ಎತ್ತಿಹಿಡಿಯುತ್ತ, ಸಮಾನತೆಯ ಸಮಾಜದ ನಿರ್ಮಿತಿಯ ಉದ್ದೇಶವನ್ನು ಪ್ರತಿಪಾದಿಸಿದ್ದಾರೆ.

ಕನ್ನಡ–ತೆಲುಗು ಸ್ತ್ರೀವಾದಿ ಕಾವ್ಯದ ಈ ತೌಲನಿಕ ಅಧ್ಯಯನದ ಮೂಲ ಉದ್ದೇಶಗಳನ್ನು ಗಮನದಲ್ಲಿರಿಸಿಕೊಂಡಂತೆ ಪ್ರಸ್ತುತ ಸಂಶೋಧನಾ ಮಹಾಪ್ರಬಂಧದ ಫಲಶೃತಿಯನ್ನು ಈ ಕೆಳಗಿನಂತೆ ರೂಪಿಸಲಾಗಿದೆ.

**ಸಾಮ್ಯತೆಗಳು :**

- ಕನ್ನಡ–ತೆಲುಗು ಭಾಷೆಗಳಲ್ಲಿನ ಸ್ತ್ರೀವಾದಿ ಅಧ್ಯಯನಗಳು ಅಚ್ಚರಿ ಎನಿಸುವ ಮಟ್ಟಿಗೆ ಸಾಮ್ಯತೆಯನ್ನು ಹೊಂದಿವೆ. ಕನ್ನಡ–ತೆಲುಗಿನ ಸ್ತ್ರೀವಾದಿ ಅಧ್ಯಯನಗಳು ಹೆಚ್ಚುಕಡಿಮೆ ಒಂದೇ ಕಾಲಘಟ್ಟಕ್ಕೆ (ಎಂಬತ್ತರ ದಶಕ) ಆರಂಭಗೊಂಡಿವೆ. ಆರಂಭದಲ್ಲಿ ಎರಡೂ ಅಧ್ಯಯನಗಳು ಪ್ರಧಾನವಾಗಿ ಮಹಿಳಾ ಸಾಹಿತ್ಯದ ವಿಮರ್ಶೆಗೆ ತೊಡಗಿಸಿಕೊಂಡಿದ್ದಲ್ಲದೆ, ಲೇಖಕಿ ಕೇಂದ್ರಿತವಾಗಿ ನಡೆದಿವೆ. ಉದಾಹರಣೆಗೆ ಕನ್ನಡ: ನಂಜನಗೂಡು ತಿರುಮಲಾಂಬಾ ಅವರನ್ನು ಕುರಿತು ಬಿ.ಎನ್. ಸುಮಿತ್ರಬಾಯಿ, ಆರ್. ಕಲ್ಯಾಣಮ್ಮ ಅವರನ್ನು ಕುರಿತು ಡಿ.ಎಸ್. ಶಶಿಕಲಾ ಅವರ ಅಧ್ಯನಗಳು ಇತ್ಯಾದಿ, ತೆಲುಗು: ಭಂಡಾರು ಅಚ್ಚಮಾಂಬ ಅವರನ್ನು ಕುರಿತು ಕೊಂಡೆವಿಟಿ ಸತ್ಯವತಿ, ವಾಸಿರೆಡ್ಡಿ ಸೀತಾದೇವಿ ಅವರನ್ನು ಕುರಿತು ಕೆ.ಬಿ. ಸ್ನೇಹಪ್ರಭ ಅವರು ಅಧ್ಯಯನ ಮಾಡಿದ್ದಾರೆ.
- ನಂತರದ ದಿನಗಳಲ್ಲಿ ಮಹಿಳಾ ಸಾಹಿತ್ಯದ ಜೊತೆಗೆ ಪುರುಷರಿಂದ ರಚನೆಯಾದ ಸಾಹಿತ್ಯವನ್ನು ವಿಮರ್ಶಿಸಿ ಸ್ತ್ರೀವಾದಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಉದಾ: ವಚನ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು–ವಿದ್ಯಾವತಿ, ಸ್ತ್ರೀವಾದಿ ನೆಲೆಯಲ್ಲಿ ಪಂಪ, ಕುಮಾರವ್ಯಾಸ ಕೃತಿಗಳ ಪುನರಾಧ್ಯಯನ–

ಪೂರ್ಣಿಮಾ...ಇತ್ಯಾದಿ. ತೆಲುಗು: ಚಲಂ-ಸ್ತ್ರೀವಾದಿ ಸಾಹಿತ್ಯ ಅಧ್ಯಯನ, ಸಂಜೀವಮ್ಮ ಅಲಂಕಾರಶಾಸ್ತ್ರಂಲೊ ಸ್ತ್ರೀ-ಕಾತ್ಯಾಯಿನಿ ವಿದ್ಮಹಿ...ಇತಾದಿ

• ಎರಡೂ ಅಧ್ಯಯನ ಪರಂಪರೆಗಳು ಪ್ರಮುಖ ಲೇಖಕಿಯರ ಸುತ್ತಲೇ ಸುತ್ತುವುದನ್ನು ಗಮನಿಸಬಹುದು. ಇತ್ತೀಚೆಗೆ ಮಾತ್ರ ಈ ಬಗೆಯ ಲೇಖಕಿ ಕೇಂದ್ರಿತ ಅಧ್ಯಯನಕ್ಕೆ ಹೊರತಾದ ವಿಷಯ ಕೇಂದ್ರಿತ ಅಧ್ಯಯನಗಳು ಕಾಣಿಸಿಕೊಳ್ಳುತ್ತಿವೆ. ಪಾಶ್ಚಾತ್ಯ ಹಾಗೂ ಭಾರತೀಯ ಸ್ತ್ರೀವಾದಿ ಚಿಂತನೆಗಳ ಪ್ರಭಾವ-ಪ್ರೇರಣೆಯಿಂದ ಕರ್ನಾಟಕಾಂಧ್ರದಲ್ಲಿ ಸ್ತ್ರೀವಾದಿ ಚಿಂತನೆಗಳು ೧೯೭೦ರಲ್ಲಿ ಹುಟ್ಟಿಕೊಂಡರೂ ಸ್ಥಳೀಯ ಇತರೆ ಚಿಂತನೆ, ಚಳವಳಿಗಳ ಪ್ರಭಾವದಿಂದಾಗಿ ಸ್ತ್ರೀವಾದಿ ಚಿಂತನೆಗಳು ವಿಸ್ತೃತವಾದ ವ್ಯಾಪ್ತಿಯನ್ನು ಪಡೆದುಕೊಂಡವು.

ಕರ್ನಾಟಕಾಂಧ್ರದಲ್ಲಿ ಇಪ್ಪತ್ತರ ದಶಕದ ಉತ್ತರಾರ್ಧದಲ್ಲಿ ಸ್ಥಾಪನೆಗೊಂಡ ಕೆಲವು ಸಾಹಿತ್ಯಿಕ ಮತ್ತು ಸಾಮಾಜಿಕ ಸಂಘಟನೆಗಳು ಕೂಡ ಸ್ತ್ರೀವಾದವನ್ನು ಇದರ ಹಿನ್ನೆಲೆಯಲ್ಲಿ ಬರೆದ ಸಾಹಿತ್ಯವನ್ನು ಬೆಳೆಸುವಲ್ಲಿ ಇದನ್ನೊಂದು ಚಳವಳಿಯಾಗಿ ರೂಪಿಸುವಲ್ಲಿ ಬಹಳಷ್ಟು ಸಹಾಯ ಮಾಡಿ ಬೆಂಬಲ ನೀಡಿವೆ. (ಉದಾ: ಕರ್ನಾಟಕ ಲೇಖಕಿಯರ ಸಂಘ, ತೆಲುಗು ಆಂಧ್ರಾ ಮಹಿಳಾ ಸಭಾ)

• ಕನ್ನಡ-ತೆಲುಗು ಸ್ತ್ರೀವಾದಿ ಸಾಹಿತ್ಯದ ಹುಟ್ಟು ಮತ್ತು ಬೆಳವಣಿಗೆಗೆ ದೇಶದ ವಿವಿಧ ಭಾಷೆಯ ಲೇಖಕಿಯರ ಹಾಗೂ ಅವರ ಸಾಹಿತ್ಯದ ಪ್ರೇರಣೆ-ಪ್ರಭಾವವು ಕೂಡ ಮಹತ್ವದ್ದಾಗಿದೆ. ಮರಾಠಿ ಸಾಹಿತ್ಯದಲ್ಲಿ ಸ್ತ್ರೀ ಶಿಕ್ಷಣಕ್ಕೆ ಮತ್ತು ಜಾಗೃತಿಗೆ ಒತ್ತುಕೊಟ್ಟ ಲೇಖಕಿಯರಾದ ವಿಭಾವರಿ, ಆನಂದಬಾಯಿ, ಗಿರಿಜಾಬಾಯಿ, ಲಕ್ಷ್ಮಿಬಾಯಿ ಟಿಳಕ್, ಪಂಡಿತ್ ರಮಾಬಾಯಿ...ಇತ್ಯಾದಿ. ಹಿಂದಿಯ ಮನ್ನೂ ಭಂಡಾರಿ, ಬೆಂಗಾಳಿಯ ಸ್ತ್ರೀಪರ ಕಾಳಜಿಯ ಮಹಾಶೇತಾದೇವಿ, ನವನೀತ ದೇಬ್‌ಸೇನ್, ಆಶಾಪೂರ್ಣದೇವಿ, ತೆಲುಗಿನ ವಾಸಿರೆಡ್ಡಿ ಸೀತಾದೇವಿ, ಗುಜರಾತಿನ ವರ್ಷ ಮಹೇಂದ್ರ, ಅಡಾಲಜಿ ಮುಂತಾದ ಹೊರನಾಡ ಲೇಖಕಿಯರ ಕೃತಿಗಳ ಬಗ್ಗೆ ತನ್ನ ಪುಟಗಳ ಇತಿಮಿತಿಯೊಳಗೆ ಕರ್ನಾಟಕಾಂಧ್ರದ ಕೆಲವು ಲೇಖಕಿಯರ ಸಂಘದ ಪತ್ರಿಕೆಯಲ್ಲಿ ಪರಿಚಯಿಸಿ ಇಲ್ಲಿಯ ಲೇಖಕಿಯರನ್ನು ಪ್ರೇರೇಪಿಸಿವೆ.

• ಕನ್ನಡ-ತೆಲುಗು ಸ್ತ್ರೀವಾದಿ ಸಾಹಿತ್ಯದ ಪ್ರವರ್ಧಮಾನಕ್ಕೆ ಇಲ್ಲಿನ ಕೆಲವು ಪತ್ರಿಕೆಗಳ ಕೊಡುಗೆ ಅಪಾರವಾಗಿದೆ. ಕನ್ನಡದ ಸಂಕ್ರಮಣ, ಶೂದ್ರ, ರುಜುವಾತು, ಸಾಕ್ಷಿ. ತೆಲುಗಿನ: ಆಂಧ್ರಾ ಮಹಿಳಾ ಪತ್ರಿಕೆ, ಆಂಧ್ರವನಿತ, ಆಂಧ್ರಕವಿತಾ ಪತ್ರಿಕೆ, ಭೂಮಿಕಾ ಮುಂತದವು ಮಹಿಳಾ ಲೇಖಕಿಯರಲ್ಲಿ ಹೊಸ ಎಚ್ಚರ ಮೂಡಿಸುವುದಕ್ಕೆ ಈ ಪತ್ರಿಕೆಗಳು ಕಾರಣವಾದವು. ಸ್ತ್ರೀವಾದವು ಕರ್ನಾಟಕಾಂಧ್ರಕ್ಕೆ ೧೯೭೦ರಲ್ಲಿಯೇ ಕಾಲಿಟ್ಟರು ತೀವ್ರ ಸ್ವರೂಪದ ಸ್ತ್ರೀವಾದಿ ಸಾಹಿತ್ಯವು ಮಾತ್ರ ೧೯೮೦ರಲ್ಲಿಯೇ ಬಳಕೆಗೆ ಬಂದಿರುವುದನ್ನು ಕಾಣಬಹುದು.

ಈ ಹಿನ್ನೆಲೆಯಲ್ಲಿ ಕನ್ನಡ–ತೆಲುಗು ಸ್ತ್ರೀವಾದಿ ಸಾಹಿತ್ಯಕ್ಕೆ ಒಂದು ಹಂತದ ಸಾಮ್ಯತೆಯನ್ನು ಕೂಡ ನೋಡಬಹುದು. ಯಾಕೆಂದರೆ ಎರಡೂ ಒಂದೇ ಮೂಲದಿಂದ ಪ್ರೇರಣೆಯನ್ನು ಪಡೆದುಕೊಂಡಿವೆ. ಒಂದೇ ಕಾಲಘಟ್ಟದಲ್ಲಿ ತೊಡಗಿಸಿಕೊಂಡಿದ್ದಾರೆ. ಈ ಎರಡೂ ಪ್ರದೇಶಗಳು ಅಕ್ಕಪಕ್ಕದಲ್ಲೆ ಇರುವುದರಿಂದ ಇವರಿಬ್ಬರು ಪರಸ್ಪರ ತಿಳಿವಳಿಕೆ ಉಳ್ಳವರು ಸಹ ಇದ್ದಾರೆ. ಜೊತೆಗೆ ಸಾಂಸ್ಕೃತಿಕವಾಗಿ ಕೊಡುಕೊಳೆ ಸಂಬಂಧವನ್ನು ಹೊಂದಿದ್ದಾರೆ. ಇದು ಇವೆರಡರ ಸಾಮ್ಯತೆಯನ್ನು ಹೇಳುತ್ತದೆ. ಆದರೂ ಒಂದೇ ಮೂಲದಿಂದ ಪ್ರೇರಣೆಯನ್ನು ಪಡೆದುಕೊಂಡ ಮತ್ತು ಒಂದೇ ಕಾಲಘಟ್ಟದಲ್ಲಿ ಆರಂಭಗೊಂಡಂತಹ ಈ ಎರಡೂ ಕಾವ್ಯಗಳು ಒಂದೇ ದಾರಿಯಲ್ಲಿ ನಡೆದಿವೆ ಎಂಬುದನ್ನು ವಿವರಿಸಿಕೊಳ್ಳುವುದಾದರೆ ಒಂದು ಹಂತದವರೆಗೆ ಅಲ್ಲಿಯೂ ಕೂಡ ಸಾಮ್ಯತೆಯನ್ನು ನೋಡಬಹುದು. ಆದರೆ ಈ ಸಾಮ್ಯತೆಯನ್ನು ಮೀರಿದಂತಹ ಒಂದು ಭಿನ್ನತೆಯನ್ನು ಅಥವ ವೈಶಿಷ್ಟ್ಯತೆಯನ್ನು ಆಯಾ ಕಾವ್ಯ ಪರಂಪರೆಗಳು ತೋರಿಸುತ್ತವೆ.

• ದಲಿತ ಸಮುದಾಯದ ಹೆಣ್ಣುಮಕ್ಕಳ ಸಾಮಾಜಿಕ, ರಾಜಕೀಯ, ಆರ್ಥಿಕ ಹಾಗೂ ಸಾಂಸ್ಕೃತಿಕ ವಿನ್ಯಾಸಗಳು ಇತರೆ ಜಾತಿ–ವರ್ಗದ ಹೆಣ್ಣುಮಕ್ಕಳಿಗಿಂತ ಭಿನ್ನವಾದವು. ಕಡುಬಡತನ, ಹಸಿವು, ಹಿಂಸೆ, ಲೈಂಗಿಕ ಶೋಷಣೆ, ಕಡಿಮೆ ಕೂಲಿ ಇದೆಲ್ಲದಕ್ಕಿಂತ ಹೆಚ್ಚಾಗಿ ಜಾತಿ ತಾರತಮ್ಯವಾದ ಎಲ್ಲಾ ನಿಷಿದ್ಧ ಆಚರಣೆಗಳು ಇಲ್ಲಿ ಇನ್ನೂ ಜೀವಂತವಾಗಿವೆ. "ದಲಿತರಲ್ಲಿಯೇ ದಲಿತಳಾದ ದಲಿತ ಮಹಿಳೆ" ಸಾಮಾನ್ಯ ಮಹಿಳೆಯರಿಗಿಂತ ಹೆಚ್ಚಿನ ಶೋಷಣೆಗೆ ಗುರಿಯಾಗಿರುವುದನ್ನು ಕನ್ನಡ–ತೆಲುಗಿನ ಸ್ತ್ರೀವಾದಿ ಕವಯತ್ರಿಯ ಗುರುತಿಸಿದ್ದಾರೆ.

• ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆಯರೆಲ್ಲ ಅಸ್ಪೃಶ್ಯರೆ ಎನ್ನುವ ವಾದ ಬಹುದಿನಗಳಿಂದಲೂ ಇದೆ. ಆದರೆ ದಲಿತ ಸ್ತ್ರೀಯರು ಇತರ ಸಮುದಾಯಗಳ ಮಹಿಳೆಯರಿಗೆ ಸಮಾನರಲ್ಲ. ದಲಿತ ಮಹಿಳೆಯರು ಅತ್ತ ಪುರುಷರಿಂದಲೂ ಇತ್ತ ಉನ್ನತ ವರ್ಗದ ಸ್ತ್ರೀಯರಿಂದಲೂ ಶೋಷಣೆ, ಅವಮಾನಕ್ಕೆ ಗುರಿಯಾಗಿದ್ದಾರೆ ಎನ್ನುವಂತಹ ಸತ್ಯಾಂಶವನ್ನು ಎರಡೂ ಭಾಷೆಯಲ್ಲಿನ ದಲಿತ ಸ್ತ್ರೀವಾದಿ ಕವಯತ್ರಿಯರು ತೋರಿಸಿಕೊಟ್ಟಿದ್ದಾರೆ.

• ದಲಿತ, ಹಿಂದೂ, ಕ್ರಿಶ್ಚಯನ್ ಧರ್ಮದ ಮಹಿಳೆಯರಿಗಿಂತ ಮುಸ್ಲಿಂ ಸಮಾಜದ ಅಥವಾ ಇಸ್ಲಾಂ ಧರ್ಮದ ಮಹಿಳೆಯರು ಹೆಚ್ಚಿನ ಶೋಷಣೆ, ನಿರ್ಬಂಧಗಳಿಗೆ ಗುರಿಯಾಗಿದ್ದಾರೆ. ಜಗತ್ತಿನ ಎಲ್ಲಾ ಧರ್ಮಗಳು ಮಹಿಳೆಯರನ್ನು ದ್ವಿತೀಯ ದರ್ಜೆಯ ಪ್ರಜೆಯನ್ನಾಗಿ ನೋಡುತ್ತವೆ. ಆದರೆ ಇಸ್ಲಾಂ ಧರ್ಮವು ಒಂದು ಹೆಜ್ಜೆ ಮುಂದೆ ಹೋಗಿ ಮಹಿಳೆಯರನ್ನು ಪರದಾ ಪದ್ಧತಿಯೊಳಗೆ ಬಂಧಿಸಿ, ಪರಪುರುಷರ ದೃಷ್ಟಿ ಬೀಳುವುದೇ ದೊಡ್ಡ ಅಪರಾದವೆಂಬಂತೆ ಬಿಂಬಿಸಿದೆ. ಮುಸ್ಲಿಂ ಮಹಿಳೆಯರ ಆಸೆ–ಆಕಾಂಕ್ಷೆಗಳೆಲ್ಲ ಕಪ್ಪು ಮುಸುಕಿನಲ್ಲಿಯೇ ಮಣ್ಣಾಗುವಂತೆ ಮಾಡಿದೆ. ಇಂತಹ ಅನಿಷ್ಟ ಪದ್ಧತಿ, ಧಾರ್ಮಿಕ ಶೋಷಣೆಯನ್ನು ಕನ್ನಡ–ತೆಲುಗಿನ ಮುಸ್ಲಿಂ ಸ್ತ್ರೀವಾದಿ ಕವಯತ್ರಿಯರು ಪ್ರಬಲವಾಗಿ ಖಂಡಿಸಿದ್ದಾರೆ.

